ಪ್ರತಿಭಾವಂತ ಸಂಸದೀಯ ಪಟುಗಳ ಬದುಕು - ಬರಹ ಮಾಲಿಕೆ

# ಎಸ್.ಎಂ. ಜೋಷಿ

ಅನುವಾದಕರು:

ಶ್ರೀಮತಿ ಕೆ.ಹೆಚ್.ಸಾವಿತ್ರಿ

ಪ್ರಕಟಣೆ:

ಲೋಕಸಭಾ ಸಚಿವಾಲಯ, ನವದೆಹಲಿ.

ಕನ್ನಡ ಅನುವಾದ : ವಿಧಾನ ಸಭೆ ಸಚಿವಾಲಯ,

ವಿಧಾನಸೌಧ, ಬೆಂಗಳೂರು-560 001

S.M. JOSHI: Prathibhavantha Samsadiya Patugala Baduku Baraha Malike (Eminent Parliamentarian Series) Published by Loksabha Secretariat, translated to Kannada by Karnataka Legislative Assembly Secretariat, Vidhana Soudha, Bangalore-01.

Pages 137+8
Rupees- 15.00



First Edition: February 2002.

Number of copies :2,000 (First Edition)

Printed and Designed by : Government Printing Press, Bangalore-01.

ಎಸ್.ಎಂ. ಜೋಷಿ: ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹಮಾಲಿಕೆ ಮೂಲ ಕೃತಿ : ಲೋಕಸಭಾ ಸಚಿವಾಲಯ, ನವದೆಹಲಿ, ಕನ್ನಡ ಭಾಷಾಂತರ : ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು.

ಬೆಲೆ ರೂ : 15-00

ಪುಟ ಸಂಖ್ಯೆ : 137+8



ಮೊದಲನೆ ಮುದ್ರಣ: ಫೆಬ್ರವರಿ 2002

ಪ್ರತಿಗಳು : 2,000 (ಮೊದಲನೆ ಮುದ್ರಣ)

ಮುಖ ಪುಟ ವಿನ್ಯಾಸ ಮತ್ತು ಮುದ್ರಣ : ಸರ್ಕಾರಿ ಮುದ್ರಣಾಲಯ,
ಬೆಂಗಳೂರು - 560 001.

# ಪೀಠಿಕೆ

ದೇಶ ಸ್ವಾತಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಮಡಿದ ಹಾಗೂ ನವ ಭಾರತ ನಿರ್ಮಾಣಕ್ಕಾಗಿ ಶ್ರಮಿಸಿದ ಪ್ರತಿಭಾನ್ವಿತ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಸಂಸದೀಯ ಪಟುಗಳನ್ನು ನೆನೆಸಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿರುತ್ತದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಗಣ್ಯರ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಆದರೆ ನಮ್ಮ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳಿಗೆ ಹಾಗೂ ಜನತೆಗೆ ಈ ಪ್ರತಿಭಾವಂತರುಗಳ ಬದುಕು-ಬರಹ ಮತ್ತು ಸಾಧನೆಗಳನ್ನು ಪರಿಚಯಿಸುವ ದೃಷ್ಟಿಯಿಂದ ಈ ಕಿರು ಹೊತ್ತಿಗೆಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸುವ ಒಂದು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ವಿಧಾನ ಪರಿಷತ್ತಿನ ಅಂದಿನ ಸಭಾಪತಿಯವರಾಗಿದ್ದ ಶ್ರೀ ಡಿ.ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಅಂದಿನ ಅಧ್ಯಕ್ಷರಾಗಿದ್ದ ಶ್ರೀ ರಮೇಶ್‌ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪಸಮಿತಿಯು ಕಾರ್ಯಪ್ರವೃತ್ತವಾಗಿ ಭಾಷಾಂತರ ಕಾರ್ಯವನ್ನು ಶ್ರೀಮತಿ ಸಾವಿತ್ರಿ ಯವರ ಸಹಯೋಗದೊಂದಿಗೆ ತಯಾರಿಸಿರುವ ಎಸ್.ಎಂ. ಜೋಶಿ ಅವರ ಕೃತಿಯನ್ನು ತಮ್ಮ ಮುಂದಿಡುತ್ತಿದ್ದೇನೆ.

ಇದು ಲೋಕಸಭಾ ಸಚಿವಾಲಯದವರು "Eminent Parliamentarians Monograph Series" ಎಂಬ ಆಂಗ್ಲ ಭಾಷೆಯ ಕನ್ನಡಾನುವಾದವಾಗಿದ್ದು, ಸದರಿ ಗ್ರಂಥದ ಪ್ರಕಾಶಕರಾದ ಲೋಕಸಭಾ ಸಚಿವಾಲಯಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅನುವಾದಿತ ಪುಸ್ತಕವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಸಂಸದೀಯ ವಿಷಯಗಳಲ್ಲಿ ಅನುಕೂಲ ಹಾಗೂ ಅನುಭವ ನೀಡುತ್ತದೆಂದು ಭಾವಿಸುತ್ತೇನೆ.

ಯಾಕೂಬ್ ಷರೀಫ್,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,

ಬೆಂಗಳೂರು

# ಮುನ್ನುಡಿ

ಭಾರತೀಯ ಸಂಸದೀಯ ಮಂಡಳಿಯು ಕಳೆದ ವರ್ಷದ ಪ್ರಾರಂಭದಲ್ಲಿ ಗಣ್ಯ ಸಂಸದೀಯ ಪಟುಗಳ ಜನ್ಮದಿನಗಳನ್ನು ಸಮುಚಿತವಾಗಿ ಆಚರಿಸಲು ನಿರ್ಧರಿಸಿತು. ರಾಷ್ಟ್ರದ ಸಂಸದೀಯ ಕ್ಷೇತ್ರಕ್ಕೆ ಮತ್ತು ದೇಶದ ರಾಜಕಾರಣಕ್ಕೆ ಈ ಮಹಾನುಭಾವರು ಸಲ್ಲಿಸಿದ ಸೇವೆಯನ್ನು ಸ್ಮರಿಸುವುದು ಹಾಗೂ ಅದನ್ನು ದಾಖಲಿಸುವುದು ಅದರ ಉದ್ದೇಶವಾಗಿತ್ತು. ಈ ನಿರ್ಧಾರಕ್ಕೆ ಅನುಗುಣವಾಗಿ ಪ್ರಖ್ಯಾತ ಸಂಸದೀಯ ಪಟುಗಳ ಮಹಾ ಪ್ರಬಂಧ ಶ್ರೇಣಿ ಎಂದೇ ಪ್ರಸಿದ್ಧವಾಗಿರುವ ಗ್ರಂಥ ಮಾಲಿಕೆಯೊಂದನ್ನು ೧೯೯೦ರ ಮಾರ್ಚ್ ತಿಂಗಳಲ್ಲಿ ಡಾ. ರಾಮ ಮನೋಹರ ಲೋಹಿಯಾ ಅವರನ್ನು ಕುರಿತು ಈ ಕೃತಿಯೊಂದಿಗೆ ಆರಂಭಿಸಲಾಯಿತು. ಅದನ್ನು ಅನುಸರಿಸಿ ಅನಂತರದಲ್ಲಿ ಡಾ. ಲಂಕಾ ಸುಂದರಂ, ಡಾ. ಶ್ಯಾಮ್ ಪ್ರಸಾದ್ ಮುಖರ್ಜಿ, ಶ್ರೀ ಪಿ.ವಿ. ಗೋವಿಂದ ಮೆನನ್, ಶ್ರೀ ಭೂಪೇಶ್ ಗುಪ್ತಾ, ಡಾ. ರಾಜೇಂದ್ರ ಪ್ರಸಾದ್, ಷೇಕ್ ಮುಹಮುದ್ ಅಬ್ದುಲ್ಲಾ, ಶ್ರೀ ಸಿ.ಡಿ. ದೇಶ್‌ಮುಖ್, ಡಾ. ಬಿ.ಆರ್. ಅಂಬೇಡ್ಕರ್, ಶ್ರೀ ಎಂ. ಅನಂತಶಯನಂ ಅಯ್ಯಂಗಾರ್, ಶ್ರೀ ವಿ.ಕೆ. ಕೃಷ್ಣಮೆನನ್ ಅವರನ್ನು ಕುರಿತ ಇದೇ ರೀತಿಯ ಕೃತಿಗಳನ್ನು ಅವರವರ ಜನ್ಮದಿನೋತ್ಸವದಂದು ಹೊರತರಲಾಯಿತು.

ಈಗಿನ ಕೃತಿಯ ಈ ಶ್ರೇಣಿಯಲ್ಲಿ ಹದಿನಾಲ್ಕನೇಯದಾಗಿದೆ. ಮಹಾನ್ ಸ್ವಾತಂತ್ರ ಹೋರಾಟಗಾರ ಹಾಗೂ ಭಾರತೀಯ ಸಮಾಜವಾದಿ ಚಳವಳಿಯ ಮಾರ್ಗದರ್ಶಕರಾಗಿದ್ದ ಶ್ರೀ ಎಸ್.ಎಂ. ಜೋಶಿಯವರು ರಾಷ್ಟ್ರಕ್ಕೆ ಸಲ್ಲಿಸಿದ ಸೇವೆಯನ್ನು ಸ್ಮರಿಸುವುದು ನಮ್ಮ ಪ್ರಯತ್ನವಾಗಿದೆ. ಶ್ರೀಯುತರು ರಾಷ್ಟ್ರದ ಸಾಮಾಜಿಕ, ರಾಜಕೀಯ ಮತ್ತು ಸಂಸದೀಯ ಜೀವನಕ್ಕೆ ಸುಮಾರು ಆರು ದಶಕಗಳಿಗೂ ಹೆಚ್ಚು ಕಾಲ ಅಸಾಧಾರಣ ಸೇವೆಯನ್ನು ಸಲ್ಲಿಸಿದವರಾಗಿದ್ದಾರೆ.

ಈ ಸಂಪುಟವು ಮೂರು ಭಾಗಗಳನ್ನು ಒಳಗೊಂಡಿದೆ. ಒಂದನೇ ಭಾಗವು ಶ್ರೀ ಜೋಶಿಯವರ ಅತ್ಯಂತ ಆಸಕ್ತಿದಾಯಕ ಮತ್ತು ಚೇತೋಹಾರಿಯಾದ ಘಟನಾವಳಿಗಳ ಬದುಕು ಮತ್ತು ವ್ಯಕ್ತಿತ್ವದ ಸಂಕ್ಷಿಪ್ತ ಪರಿಚಯವನ್ನು ಒಳಗೊಂಡಿದೆ. ಎರಡನೇ ಭಾಗದಲ್ಲಿ ಅವರ ಒಡನಾಡಿಗಳಾಗಿದ್ದ ಸುಪ್ರಸಿದ್ಧ ಧುರೀಣರು ಬರೆದ ಒಂಭತ್ತು ಲೇಖನಗಳಿವೆ. ಇದರಲ್ಲಿ ಕೆಲವರು ಅನೇಕ ಹೋರಾಟಗಳಲ್ಲಿ ಅದರೊಂದಿಗೆ ಮುಂಚೂಣಿಯಲ್ಲಿದ್ದವರು. ಇನ್ನುಳಿದವರು ಎಳವೆಯ ದಿನಗಳಿಂದಲೇ ಅವರ ಸಂಗಾತಿಗಳಾಗಿದ್ದವರು. ಮೂರನೇ ಭಾಗವು ಶ್ರೀ ಜೋಶಿಯವರು ನಾಲ್ಕನೇ ಲೋಕಸಭೆಯ ಸದಸ್ಯರಾಗಿದ್ದಾಗ ಸಂಸತ್ತಿನಲ್ಲಿ ನೀಡಿದ ಆಯ್ದ ಒಂಬತ್ತು ಭಾಷಣಗಳ ಸಂಗ್ರಹವಾಗಿದೆ.

ಶ್ರೀ ಜೋಶಿಯವರ ೮೭ನೇ ಜನ್ಮದಿನದ ಸಂದರ್ಭದಲ್ಲಿ ನಾವು ಈ ಮಹಾ ನಾಯಕನ ಮತ್ತು ಸುಪ್ರಸಿದ್ಧ ಸಂಸದೀಯ ಪಟುವಿನ ಸ್ಮರಣೆಗೆ ಗೌರವ ಪೂರ್ಣ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತಿದ್ದೇವೆ. ಶ್ರೀ ಜೋಶಿಯವರ ಬದುಕು ಮತ್ತು ಹೋರಾಟವನ್ನು ಕುರಿತು ಈ ಕೃತಿಯು ನಿಮಗೆ ಆಸಕ್ತಿದಾಯಕ ಹಾಗೂ ಉಪಯುಕ್ತವಾಗುವುದೆಂದು ನಾವು ಹಾರೈಸುತ್ತೇವೆ.

ಶಿವರಾಜ್ ಬಿ.ಪಾಟೀಲ್
ಲೋಕಸಭೆಯ ಸ್ಪೀಕರ್ ಮತ್ತು ಭಾರತೀಯ
ಸಂಸದೀಯ ತಂಡದ ಅಧ್ಯಕ್ಷರು.

ನವದೆಹಲಿ
ನವೆಂಬರ್ ೧,೧೯೯೧.

# ಪರಿವಿಡಿ

## ಭಾಗ - ಒಂದು

## ಜೀವನ

ಎಸ್.ಎಂ. ಜೋಶಿ - ವ್ಯಕ್ತಿ ಚಿತ್ರ
(ಪುಟ - 15)

## ಭಾಗ ಎರಡು

## ಲೇಖನಗಳು

ಎಸ್.ಎಂ. ಜೋಶಿ ಒಂದು ಶ್ರದ್ಧಾಂಜಲಿ
ರಬಿರಾಯ್
(18)
ಎಸ್.ಎಂ. ಓರ್ವ ರಾಜರ್ಷಿ
ಶರದ್ ಪವಾರ್
(26)
ಎಸ್.ಎಂ. ಅವರಿಗೆ ವಿದಾಯ
ಪ್ರೊ!!. ಮಧು ದಂಡವತೆ
ಎಸ್.ಎಂ. ಜೋಶಿ ಓರ್ವ ಮಹಾನ್ ದೇಶಾಭಿಮಾನಿ
ಸುರೇಂದ್ರನಾಥ ದ್ವಿವೇದಿ
(35)
ನನ್ನ ದೃಷ್ಟಿಯಲ್ಲಿ ಎಸ್.ಎಂ.
ಮಧುಲಿಮಯೆ
(38)
ಎಸ್.ಎಂ. ಅಣ್ಣ-ನೇತಾರಂಗಿಂತಲೂ ಹೆಚ್ಚಿನವರು
ಡಾ.ಬಾಪು ಕಲ್ದಾತೆ
(65)
ಎಸ್.ಎಂ. ಜೋಶಿ ಸಂತೃಪ್ತ ಯೋಧ
ಎನ್.ಜಿ. ಗೋರೆ
(72)
ಎಸ್.ಎಂ. ಜೋಶಿ ಓರ್ವ ಜನನಾಯಕ
ಪ್ರೊ!!. ಸಮರ್ ಗುಹ
(77)
ಎಸ್.ಎಂ. ಜೋಶಿ ಸಾಮಾಜಿಕ ನ್ಯಾಯದ ನಿರ್ಭೀತ ಹೋರಾಟಗಾರ
ರಾಜೇಂದರ್ ಸಿಂಗ್ ಸ್ವಾರೋ
(86)

## ಭಾಗ - ಮೂರು

## ಅವರ ವಿಚಾರಧಾರೆಗಳು

### ಎಸ್.ಎಂ. ಜೋಶಿಯವರು ಸಂಸತ್ತಿನಲ್ಲಿ ಮಾಡಿದ ಆಯ್ದ ಭಾಷಣಗಳ


೧೯೬೪-೬೫ ಮತ್ತು ೧೯೬೫-೬೬ರ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳಿಗಾಗಿನ ಆಯುಕ್ತರ ೧೪-೧೫ ನೇ ವರದಿಗಳು
(91)

ವೇತನ ಸ್ತಂಭನ ಧೋರಣೆ ಮೇಲಣ ಗೊತ್ತುವಳಿ
(96)

ಪಕ್ಷಾಂತರ ಕುರಿತು ಗೊತ್ತುವಳಿ
(101)

ದಿನಪತ್ರಿಕೆಗಳ ನೌಕರರ ಮುಷ್ಕರ
(107)

ಗ್ರಾಮೀಣ ವಸತಿ ಅಭಿವೃದ್ಧಿ ಮೇಲಣ ಗೊತ್ತುವಳಿ
(113)

ಕೇಂದ್ರ ಸರ್ಕಾರಿ ನೌಕರರ ಬೇಡಿಕೆಗಳ ಮೇಲಿನ ನಿಲುವಳಿ
(116)

ಜಮ್ಮು ಮತ್ತು ಕಾಶ್ಮೀರ ಸ್ಥಾನಮಾನ ಕುರಿತ ಗೊತ್ತುವಳಿ
(121)

ಸಾರ್ವಜನಿಕ ಉದ್ಯೋಗ ಪರಿಗಣನೆ ತಿದ್ದುಪಡಿ ಮಸೂದೆ
(128)

ಕಾಜಿಪುರ್ ಗೋಲಿಬಾರ್ ಮತ್ತು ಪಶ್ಚಿಮ ಬಂಗಾಳ ಮುಷ್ಕರ
(134)

# ಎಸ್.ಎಂ. ಜೋಶಿ - ವ್ಯಕ್ತಿ ಚಿತ್ರ

ಎಲ್ಲರಿಗೂ ಪ್ರಿಯವಾದ ವ್ಯಕ್ತಿತ್ವ. ಒಂದಿಷ್ಟು ಅಹಂಕಾರವಿಲ್ಲದ ಸರಳತೆ, ಸ್ಫಟಿಕದಷ್ಟು ಪಾರದರ್ಶಕ ನಡವಳಿಕೆ-ಸ್ವಾತಂತ್ರ್ಯ ಹೋರಾಟಗಾರರಾದ ಎಸ್.ಎಂ. ಜೋಶಿಯವರ ಹಿರಿಮೆ. ಭಾರತೀಯ ಸಮಾಜವಾದಿ ಚಳವಳಿಯ ದೀಪಸ್ತಂಭ, ಸಾಮಾಜಿಕ ನ್ಯಾಯದ ಪರವಾಗಿ, ಆರ್ಥಿಕ ಅಸಮಾನತೆಯ ವಿರುದ್ಧ ನಿರಂತರ ಹೋರಾಟ ನಡೆಸಿದವರು. ಧೀಮಂತ ಕಾರ್ಮಿಕ ನಾಯಕ. ಅಸಾಧಾರಣ ರೀತಿಯ ರಾಷ್ಟ್ರೀಯವಾದಿ. ಒಡನಾಡಿಗಳು, ಸ್ನೇಹಿತರು ಮತ್ತು ಅಭಿಮಾನಿಗಳ ಮಧ್ಯೆ ಶ್ರೀಧರ ಮಹಾದೇವ ಜೋಶಿ ಅಥವಾ ಎಸ್.ಎಂ. ಎಂದೇ ಚಿರಪರಿಚಿತರು. ಶ್ರೀಯುತರು ೧೯೦೪ರ ನವೆಂಬರ್ ೧೨ರಂದು ಮಹಾರಾಷ್ಟ್ರದ ಪುಣೆ ಜಿಲ್ಲೆಯ ಜುನ್ನಾರ್ ಎಂಬಲ್ಲಿ ಕೆಳ ಮಧ್ಯಮ ದರ್ಜೆಯ ಬ್ರಾಹ್ಮಣ ಕುಟುಂಬವೊಂದರಲ್ಲಿ ಜನಿಸಿದರು. ತಂದೆ ಮಹಾದೇವ ಜನಾರ್ದನ ಜೋಶಿ ಜುನ್ನಾರ್‌ನ ನ್ಯಾಯಾಲಯದಲ್ಲಿ ಗುಮಾಸ್ತರಾಗಿದ್ದರು. ಅದೇನಿದ್ದರೂ ಕುಟುಂಬದ ಆರ್ಥಿಕ ಸ್ಥಾನಮಾನಗಳು ಅವರನ್ನು ಕಂಗೆಡಿಸಿರಲಿಲ್ಲ. ಎಳವೆಯ ಈ ದಿನಗಳಲ್ಲಿ ಬದುಕಿನ ಸುಖಗಳಿಂದ ಅವರು ವಂಚಿತರಾಗಿದ್ದರು. ಹೀಗಾಗಿ ಸಹಜವಾಗಿಯೇ ಬಡವರು ಮತ್ತು ದಲಿತರ ಬಗ್ಗೆ ಸಹಾನುಭೂತಿ ಹಾಗೂ ಅವರ ಏಳಿಗೆಗಾಗಿ ಏನಾದರೂ ಮಾಡಲೇಬೇಕೆಂಬ ತೀವ್ರ ಒತ್ತಾಸೆ ಅವರಲ್ಲಿ ಮನೆ ಮಾಡಿತ್ತು. ಈ ಮನೋನಿಶ್ಚಯವು ಅವರ ದೃಷ್ಟಿಕೋನದಲ್ಲಿ ನಿಚ್ಚಳವಾಗಿ ಪ್ರತಿಬಿಂಬಿಸುತ್ತಿತ್ತು. ಈ ಕಾರಣದಿಂದಾಗಿಯೇ ಜೀವನದ ಕೊನೆಯ ಉಸಿರಿನ ತನಕವೂ ಬಡವರು ಮತ್ತು ಅಸಹಾಯಕರ ಸೇವೆಗಾಗಿಯೇ, ಅವರ ಪರವಾದ ಹೋರಾಟಕ್ಕಾಗಿಯೇ ತಮ್ಮನ್ನು ಮುಡಿಪಾಗಿಡಲು ನಿರ್ಧರಿಸಿದರು.

## ಆರಂಭದ ಜೀವನ ಮತ್ತು ಶಿಕ್ಷಣ

ಎಸ್.ಎಂ. ಅವರು ತಮ್ಮ ಬಾಲ್ಯದಲ್ಲಿ ರತ್ನಗಿರಿ ಜಿಲ್ಲೆಯ ತಮ್ಮ ಪೂರ್ವಿಕರ ಗೋಲಪ್ ಗ್ರಾಮದಲ್ಲಿ ವಾಸವಾಗಿದ್ದರು. ತಮ್ಮ ಪ್ರಾಥಮಿಕ ಶಿಕ್ಷಣವನ್ನು ಅವರು ಜುನ್ನಾರ್‌ನಲ್ಲೇ ನಡೆಸಿದರು. ಆದರೆ ದುರಾದೃಷ್ಟವಶಾತ್ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸಲು ಇನ್ನು ಎರಡು ವರ್ಷಗಳಿರುವಾಗಲೇ ತಮ್ಮ ತಂದೆಯನ್ನು ಕಳೆದುಕೊಂಡರು. ಈ ಚಿಕ್ಕ ವಯಸ್ಸಿನಲ್ಲೇ ತಮ್ಮ ಮೇಲೆ ಎರಗಿದ ದುರ್ವಿಧಿ ಮತ್ತು ಬಡತನಗಳನ್ನು ಅವರು ಅತೀವ ಧೈರ್ಯ, ಸ್ಥೈರ್ಯಗಳಿಂದ ಎದುರಿಸಿದರು. ಎಸ್.ಎಂ. ಅವರು ತಮ್ಮ ವಿದ್ಯಾಭ್ಯಾಸವನ್ನು ಉಚಿತ ವಿದ್ಯಾರ್ಥಿ ವೇತನಗಳ ಸಹಾಯದಿಂದ ಮುಂದುವರೆಸಿದರು. ಅತ್ಯಂತ ಶ್ರದ್ಧಾಳು ಹಿಂದೂ ಮಹಿಳೆಯಾಗಿದ್ದ ಅವರ ತಾಯಿ ಎಳೆಯ ಶ್ರೀಧರನ ಮನಸ್ಸಿನಲ್ಲಿ ಬದುಕಿನ ಆದರ್ಶಗಳನ್ನು ಮತ್ತು ಆತ್ಮಾಭಿಮಾನವನ್ನು ಬೆಳೆಸಿದರು. ಈ ಆತ್ಮಾಭಿಮಾನ ಅವರನ್ನು ಚಿಂತನಶೀಲರನ್ನಾಗಿ ಮಾಡಿತು. ಬ್ರಿಟಿಷರ ಬಿಗಿಮುಷ್ಟಿಯಲ್ಲಿ ತಮ್ಮ ತಾಯ್ನಾಡು

ನಲುಗುತ್ತಿದ್ದುದನ್ನು ಕಂಡು ಅವರ ಎಳೆಯ ಮನಸ್ಸು ಅತಿಯಾಗಿ ನೊಂದು ಕೊಳ್ಳುತ್ತಿತ್ತು. ವಾಸ್ತವವಾಗಿ ಭಾರತೀಯರ ಸ್ವಾತಂತ್ರ್ಯ ಹೋರಾಟ ಅದರ ಪರಮಾವಸ್ಥೆಗೆ ಮುಟ್ಟಿದ್ದು ಆಗಲೇ. ಸಹಜವಾಗಿಯೇ ದೇಶಾಭಿಮಾನ ಎಸ್.ಎಂ. ಅವರ ಮನ್ನಸಿನ ಮೇಲೆ ಗಾಢವಾದ ಪ್ರಭಾವ ಬೀರಿತು. ದೇಶವನ್ನು ಬ್ರಿಟಿಷರ ನೊಗದಿಂದ ಬಿಡಿಸಿಕೊಳ್ಳಬೇಕೆಂಬ ಸ್ವಾತಂತ್ರ್ಯದ ಉತ್ಕಟ ಆಕಾಂಕ್ಷೆಯ ಅವರಲ್ಲಿ ಮನೆ ಮಾಡಿತು. ಆ ದಿನಗಳಲ್ಲಿ ಕನೌಟ್‌ನ ಡ್ಯೂಕ್ ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಎಸ್.ಎಂ. ಅವರು ಶಾಲೆಯಲ್ಲಿ ನೀಡಿದ ಬ್ಯಾಡ್ಜನ್ನು ಕಿತ್ತೊಗೆದು ಅದಕ್ಕಾಗಿ ನೀಡಲಾದ ಶಿಕ್ಷೆಯನ್ನು ಮೌನವಾಗಿಯೇ ಅನುಭವಿಸಿದರು.

ಮೆಟ್ರಿಕ್ಯುಲೇಷನ್ ಶಿಕ್ಷಣವನ್ನು ಪೂರೈಸಿದ ನಂತರ ಎಸ್.ಎಂ. ಅವರು ಮುಂದಿನ ವ್ಯಾಸಂಗಕ್ಕಾಗಿ ಪುಣೆಯ ಫರ್ಗ್ಯುಸನ್ ಕಾಲೇಜ್ ಸೇರಿದರು. ಈ ಸಂದರ್ಭದಲ್ಲಿ ರಾಜನೈತಿಕ ಅರ್ಥವ್ಯವಸ್ಥೆ ಕುರಿತು ಬರೆದ ಪ್ರಬಂಧವೊಂದಕ್ಕೆ ಪಾರಿತೋಷಕವನ್ನು ಪಡೆದರು. ಅವರ ಶೈಕ್ಷಣಿಕ ಸಾಧನೆ ಅಸಾಧಾರಣ ಶ್ರೇಣಿಯಲ್ಲೇ ಇತ್ತು. ೧೯೨೯ ರಲ್ಲಿ ಅವರು ಇತಿಹಾಸ, ಅರ್ಥಶಾಸ್ತ್ರ, ಮತ್ತು ರಾಜಕೀಯಶಾಸ್ತ್ರಗಳೊಂದಿಗೆ ಬಿ.ಎ. ಪದವಿಯನ್ನು ಪಡೆದರು. ಕಾಲೇಜಿನ ವ್ಯಾಸಂಗದ ದಿನಗಳಲ್ಲೇ ತಮ್ಮ ಶಕ್ತಿಶಾಲಿಯಾದ ಮತ್ತು ಪರಿಣಾಮಕಾರಿಯಾದ ವಾಕ್ಪಟುತ್ವದಿಂದ ವಿದ್ಯಾರ್ಥಿ ಸಮುದಾಯದಲ್ಲಿ ಹೆಸರು ಸಂಪಾದಿಸಿದರು.

ಕಾಲೇಜಿನಲ್ಲಿ ವ್ಯಾಸಂಗ ನಡೆಸುತ್ತಿದ್ದಾಗಲೇ ಅವರು ಕಾರ್ಲ್ ಮಾರ್ಕ್ಸ್ ಅವರ ಕತೆಗಳನ್ನು ಮಹಾತ್ಮ ಗಾಂಧಿಯವರ 'ಯಂಗ್ ಇಂಡಿಯಾ', ಭಗತ್‌ಸಿಂಗ್ ಮತ್ತು ಚಂದ್ರಶೇಖರ್ ಆಜಾದ್ ಮತ್ತಿತರ ಕ್ರಾಂತಿಕಾರಿಗಳ ಬರಹಗಳನ್ನು ಓದಿ ಪ್ರಭಾವಿತರಾದರು. ಇವೆಲ್ಲವೂ ಎಸ್.ಎಂ. ಅವರ ಮನಸ್ಸಿನ ಮೇಲೆ ಗಾಢ ಪ್ರಭಾವ ಬೀರಿತು. ಆದಾಗಲೇ ಅವರಿಗೆ ಮುಂದೆ ಖ್ಯಾತ ಧುರೀಣರಾದ ಎನ್.ಜಿ.ಗೋರೆ, ಆರ್.ಕೆ. ಖಾಡಿಲ್‌ಕರ್ ಮತ್ತು ಶಿರುಭಾವು ಲಿಮಯೆಯವರಂತಹ ಒಡನಾಡಿಗಳು ದೊರೆತಿದ್ದರು. ಇವರೆಲ್ಲರೂ ಒಟ್ಟು ಸೇರಿ 'ಯೂತ್ ಲೀಗ್ ಎಂಬ' ಸಂಘಟನೆಯೊಂದನ್ನು ಕಟ್ಟಲು ಮುಂದಾದರು. ಅದರ ಪ್ರಥಮ ಸಮ್ಮೇಳನ ೧೯೨೭ರಲ್ಲಿ ಮುಂಬಯಿಯಲ್ಲಿ ನಡೆಯಿತು. ಈ ಸಂಘಟನೆಯ ಎರಡನೇ ಸಮ್ಮೇಳನ ಪಂಡಿತ್ ಜವಹರಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ಪುಣೆಯಲ್ಲಿ ಅತ್ಯಂತ ಯಶಸ್ವಿಯಾಗಿ ಜರುಗಿತು. ಅದಕ್ಕಾಗಿ ಈ ಯುವಕರು ಬ್ರಿಟಿಷ್ ಸರ್ಕಾರದ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಎಸ್.ಎಂ. ಮತ್ತು ಅವರ ಸ್ನೇಹಿತರಿಗೆ ಎಂ.ಎ. ಕೋರ್ಸಿಗೆ ಪ್ರವೇಶ ನಿರಾಕರಿಸಲಾಯಿತು. ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡದ್ದೇ ಅವರ ತಪ್ಪಾಗಿತ್ತು. ೧೯೩೦ರಲ್ಲಿ ಅವರು ಮುಂಬಯಿಯಲ್ಲಿ ಕಾನೂನು ಕಾಲೇಜಿಗೆ ಸೇರಿದರು. ಆದರೆ ಬಿಡುವಿರದ ರಾಜಕೀಯ ಚಟುವಟಿಕೆಗಳಿಂದ ಮತ್ತೆ ಅವರ ವ್ಯಾಸಂಗಕ್ಕೆ ತಡೆಯುಂಟಾಯಿತು. ಆದರೂ ೧೯೩೪ರಲ್ಲಿ

ಎಲ್.ಎಲ್.ಬಿ ಪದವಿಯನ್ನು ಪೂರೈಸಿದರು. ವಕೀಲಿ ವೃತ್ತಿಯನ್ನು ಪ್ರಾರಂಭಿಸುವ ಉದ್ದೇಶದಿಂದ ಅವರು ಕಾನೂನು ಪದವಿ ವ್ಯಾಸಂಗ ನಡೆಸಿದ್ದರೂ ಅವರಲ್ಲಿ ಬೇರೂರಿದ್ದ ರಾಷ್ಟ್ರಾಭಿಮಾನ ಅವರನ್ನು ರಾಜಕೀಯ ಹೋರಾಟಕ್ಕೆ ಧುಮುಕುವಂತೆ ಪ್ರೇರೇಪಿಸಿತು. ವಿದ್ಯಾರ್ಥಿ ದೆಸೆಯಿಂದಲೇ ಎಸ್.ಎಂ. ಅವರಲ್ಲಿ ರಾಷ್ಟ್ರ ಪ್ರೇಮದ ಸ್ಫೂರ್ತಿ ಮತ್ತು ವಿದೇಶಿ ಆಡಳಿತಗಾರರ ಬಗೆಗೆ ತಾತ್ಸಾರ ಬಲವಾಗಿ ಬೇರೂರಿತ್ತು. ಅವರು ಲೋಕಮಾನ್ಯ ಬಾಲಗಂಗಾಧರ ತಿಲಕ್ ಮತ್ತಿತರ ಕ್ರಾಂತಿಕಾರಿಗಳ ಬರಹಗಳಿಂದ ಅಗಾಧವಾಗಿ ಪ್ರಭಾವಿತರಾಗಿದ್ದರು. ಇಪ್ಪತ್ತರ ಹರೆಯದಲ್ಲೇ ಮಹಾತ್ಮ ಗಾಂಧೀಜಿ ಮತ್ತು ಕಾಂಗ್ರೆಸ್ಸಿನತ್ತ ಆಕರ್ಷಿತರಾಗಿದ್ದರು. ಜೋಶಿಯವರ ತಮ್ಮ ನಿಕಟ ಸಂಗಾತಿಗಳಾಗಿದ್ದ ಎನ್.ಜಿ.ಗೋರೆ, ಅಚ್ಯುತ್ ಪಟವರ್ಧನ್ ಮತ್ತು ಯುಸೂಫ್ ಮೆಹರಾಲಿ ಅವರೊಂದಿಗೆ ಸೈಮನ್ ಆಯೋಗದ ವಿರುದ್ಧ ಮತ ಪ್ರದರ್ಶನವೊಂದನ್ನು ಯಶಸ್ವಿಯಾಗಿ ಸಂಘಟಿಸಿದರು. ಇದರಿಂದ ಜನರಲ್ಲಿ ಮಿಂಚಿನ ಸಂಚಾರವಾಗಿತ್ತು: ಅದೇ ದಿನಗಳಲ್ಲಿ ಜೋಶಿಯವರು ಇತರ ಕಟ್ಟಾ ರಾಷ್ಟ್ರೀಯವಾದಿಗಳೊಂದಿಗೆ ನೇರವಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದರು. ಭಾರತವನ್ನು ಶತಶತಮಾನಗಳ ಪರಕೀಯ ದಾಸ್ಯದಿಂದ ವಿಮುಕ್ತಗೊಳಿಸುವುದು ಮತ್ತು ಸಮಾಜದಲ್ಲಿನ ಸಾಮಾಜಿಕ, ಆರ್ಥಿಕ ಅಸಮಾನತೆಗಳನ್ನು ಮತ್ತು ಅನ್ಯಾಯಗಳನ್ನು ಕೊನೆಗಾಣಿಸಿ ಹೊಸ ಯುಗದ ಉದಯಕ್ಕೆ ಸ್ವಾತಂತ್ರ್ಯವು ಕಾರಣವಾಗುವುದೆಂದು ದೃಢವಾಗಿ ನಂಬಿದ್ದರು.

೧೯೩೦ರಲ್ಲಿ ಜೋಶಿಯವರು ಮಹಾರಾಷ್ಟ್ರದ ಕೊಂಕಣ ಪ್ರಾಂತ್ಯದ ಅರೇಬಿಯನ್ ಸಮುದ್ರ ತೀರದಲ್ಲಿ ಸಂಘಟಿಸಿದ್ದ ಉಪ್ಪಿನ ಸತ್ಯಾಗ್ರಹದಲ್ಲಿ ಸಕ್ರಿಯ ಪಾತ್ರ ವಹಿಸಿದ್ದರು. ರಾಷ್ಟ್ರೀಯವಾದದ ಸ್ಫೂರ್ತಿಯಿಂದ ಕೂಡಿದ ಅವರ ಭಾಷಣವನ್ನು ಕೇಳಿ ನೆರೆದಿದ್ದ ಶ್ರೋತೃಗಳು ಕಿವಿಗಡಚಿಕ್ಕುವಂತೆ ಚಪ್ಪಾಳೆ ತಟ್ಟಿ ಸ್ವಾಗತಿಸಿದರು. ನಾಯಕತ್ವದ ಸ್ಫೂರ್ತಿ ತುಂಬಿದ್ದ ಭಾಷಣ ಅದಾಗಿತ್ತು. ಆಗ ಸ್ವಾಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದಕ್ಕಾಗಿ ಮೊಟ್ಟ ಮೊದಲ ಬಾರಿಗೆ ಅವರು ಸೆರೆಮನೆ ಸೇರಬೇಕಾಯಿತು. ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದಚಟಕ್ಕಾಗಿ ತಾವು ಅನುಭವಿಸಬೇಕಾಗಿ ಬಂದ ತಮ್ಮ ಮೊದಲ ಸೆರೆಮನೆವಾಸ ಕುರಿತು ಮರಾಠಿಯಲ್ಲಿ ಬರೆದ ತಮ್ಮ ಆತ್ಮಚರಿತ್ರೆಯಲ್ಲಿ "ಈಗ ನಾನು ಪೂರ್ಣಪ್ರಮಾಣದ ಪ್ರಜೆಯಾದೆ" ಎಂದಿರುವುದು ಅವರ ವ್ಯಕ್ತಿತ್ವಕ್ಕೆ ಭೂಷಣವಾದ ಮಾತಾಗಿ ಎಲ್ಲರ ನೆನಪಿನಲ್ಲಿ ಉಳಿದಿದೆ.

೧೯೩೨ರಲ್ಲಿ ಮತ್ತೆ ಅವರು ಎರಡು ತಿಂಗಳ ಕಾಲ ಸ್ಥಾನಬದ್ಧತೆಯಲ್ಲಿ ಇರಬೇಕಾಯಿತು. ೧೯೩೪ರಲ್ಲಿ ಮತ್ತೊಂದು ಸಂದರ್ಭದಲ್ಲಿ ಎರಡು ವರ್ಷಗಳ ಕಾಲ ಜೈಲುವಾಸ ಶಿಕ್ಷೆಗೆ ಗುರಿಯಾದರು. ಕ್ರಾಂತಿಕಾರಿ ನಾಯಕ ಎಂ.ಎನ್. ರಾಯ್ ಅವರನ್ನು ಬಿಡುಗಡೆಗೊಳಿಸಬೇಕೆಂದು ಆಗ್ರಹಪಡಿಸಿ ಮುಂಬಬಿಯಿಯಲ್ಲಿ ಮಾಡಿದ ಭಾಷಣವೇ

ಅದಕ್ಕೆ ಕಾರಣವಾಗಿತ್ತು. ಅವರನ್ನು 'ಸಿ' ದರ್ಜೆಯ ಕೈದಿಯಾಗಿ ಪರಿಗಣಿಸಿದ್ದರಿಂದ ಅವರ ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಯಿತು. ಇದರಿಂದಾಗಿ ಮೊದಲೇ ದುರ್ಬಲವಾಗಿದ್ದ ಅವರ ಆರೋಗ್ಯ ಮತ್ತಷ್ಟು ಹದಗೆಟ್ಟಿತು. ಅದೇನಿದ್ದರೂ ತಾಯ್ನಾಡನ್ನು ಪರಕೀಯರ ದಾಸ್ಯದಿಂದ ಬಿಡುಗಡೆಗೊಳಿಸಬೇಕೆಂಬ ಅವರ ಛಲ ಕಡಿಮೆಯಾಗಲಿಲ್ಲ.

ರಾಜಕೀಯ ಕ್ರಾಂತಿಕಾರಿಯೋರ್ವನ ಬದುಕು ಎಂದೂ ಹೂವಿನ ಹಾಸಿಗೆಯಲ್ಲ ಎಂಬುದನ್ನು ಅರಿತಿದ್ದ ಜೋಶಿಯವರು ಜೀವನ ಪರ್ಯಂತ ಅವಿವಾಹಿತರಾಗಿಯೇ ಉಳಿಯಲು ನಿರ್ಧರಿಸಿದ್ದರು. ಆದರೆ ಅಧ್ಯಾಪಕಿಯಾಗಿದ್ದ ಶ್ರೀಮಂತ ಕುಟುಂಬದ ತಾರಾ ಪೆಂಡ್ಸೆ ಎಂಬ ಯುವತಿಯೊಬ್ಬಳು ಎಸ್.ಎಂ. ಜೋಶಿಯವರ ವ್ಯಕ್ತಿತ್ವ ಮತ್ತು ಅವರ ಆದರ್ಶಗಳಿಂದ ಪ್ರಭಾವಿತರಾಗಿ ಅವರ ಹೋರಾಟದ ಜೀವನದಲ್ಲಿ ಸಹಭಾಗಿಯಾಗಿ ನಿಂತರು. ಅಂತಿಮವಾಗಿ ೧೯೩೯ರಲ್ಲಿ ಎಸ್.ಎಂ. ಆಕೆಯನ್ನೇ ಮದುವೆಯಾಗಿ ಇಬ್ಬರು ಪುತ್ರರನ್ನು ಪಡೆದರು.

೧೯೪೨ರಲ್ಲಿ ಗಾಂಧೀಜಿಯವರು ಕ್ವಿಟ್ ಇಂಡಿಯಾ ಚಳವಳಿಗೆ ಕರೆ ಕೊಟ್ಟಾಗ ಬ್ರಿಟಿಷ್ ಸಾಮ್ರಾಜ್ಯದ ಅಡಿಪಾಯ ಕಂಪಿಸಿತು. ತನ್ನೆಲ್ಲ ಶಕ್ತಿಯನ್ನು ಬಳಸಿ ಈ ಚಳವಳಿಯನ್ನು ದಮನಗೊಳಿಸಲು ನಿರ್ಧರಿಸಿದ ಸರ್ಕಾರ ಜಿಲ್ಲಾ ಮಟ್ಟದ ಮುಖಂಡರನ್ನು ಒಳಗೊಂಡಂತೆ ಎಲ್ಲ ಕಾಂಗ್ರೆಸ್ ಧುರೀಣರನ್ನು ಬಂಧಿಸಿತು. ಆಗಲೇ ಜನರು, ರಾಜಕೀಯ ನೇತಾರರು ಹೋರಾಟ ಮುಂದುವರೆಸುವ ದೃಢ ಸಂಕಲ್ಪ ಮಾಡಿದ್ದರು. "ಮಾಡು ಇಲ್ಲವೆ ಮಡಿ" ಸ್ಫೂರ್ತಿಯಲ್ಲಿ ತಮ್ಮ ಕಾರ್ಯಭಾರವನ್ನು ಪೂರ್ಣಗೊಳಿಸಲು ಪಣ ತೊಟ್ಟ ಎಸ್.ಎಂ.ರವರು ತಮ್ಮ ಸಂಗಾತಿಗಳಾದ ಅಚ್ಯುತ ಪಟವರ್ಧನ್ ಶಿರುಭಾವು ಲಿಮಯೆ ಮತ್ತಿತರ ಧುರೀಣರ ಜೊತೆಸೇರಿ ಭೂಗತ ಸಂಘಟನೆಯೊಂದನ್ನು ಹುಟ್ಟು ಹಾಕಿದರು. ಉರ್ದು ಭಾಷೆಯಲ್ಲಿ ನಿರರ್ಗಳವಾಗಿ ಮಾತನಾಡಬಲ್ಲವರಾಗಿದ್ದ ಎಸ್.ಎಂ.ರವರು ಇಮಾಮ್ ಆಲಿ ಎಂಬ ಹೆಸರಿನ ಮೌಲ್ವಿಯ ಮಾರುವೇಷದಲ್ಲಿ ಭಾರತದುದ್ದಕ್ಕೂ ಸಂಚರಿಸಿದರು. ಆ ದಿನಗಳಲ್ಲಿ ಅವರು ಕರಾಚಿಗೂ ಹೋಗಿದ್ದರು. ಈ ದಿನಗಳಲ್ಲಿ ಭೂಗತರಾಗಿದ್ದ ಎಲ್ಲ ನಾಯಕರನ್ನು ಅವರು ಭೇಟಿಯಾದರು. ಹೀಗೆ ಈ ಸಂಘಟನೆ ದೇಶದ ಉದ್ದಗಲಗಳಲ್ಲಿನ ರಾಜಕೀಯ ಧುರೀಣರ ನಡುವಣ ಸಂಪರ್ಕ ಸೇತುವೆಯಾಯಿತು. ಈ ಹೋರಾಟದಲ್ಲಿ ಅನೇಕ ಕ್ರಾಂತಿಕಾರಿಗಳು ತಮ್ಮ ಜೀವಗಳನ್ನು ತೆರಬೇಕಾಯಿತು. ಎಸ್.ಎಂ. ಅವರು ಸ್ವತಃ ಕೂದಲೆಳೆಯ ಅಂತರದಲ್ಲಿ ಪ್ರಾಣಾಪಾಯದಿಂದ ಪಾರಾದರು. ಮಾನವ ಸಮುದಾಯದ ಕಷ್ಟಕೋಟಲೆಗಳ ಬಗ್ಗೆ ಅಪಾರ ಕಾಳಜಿ ಹೊಂದಿದ್ದ ಅವರು ಅನೇಕ ಕ್ರಾಂತಿಕಾರಿ ನಾಯಕರ ಕುಟುಂಬಗಳಿಗೆ ಅಗತ್ಯವಿದ್ದ ಬೆಂಬಲವನ್ನು ಕೊಟ್ಟರು. ೧೯೪೩ ರಲ್ಲಿ ಪೊಲೀಸರು ಮುಂಬೈಯಲ್ಲಿನ ಮನೆಯೊಂದರ

ಮೇಲೆ ದಾಳಿ ನಡೆಸಿ ಅನೇಕ ಮಂದಿ ಭೂಗತ ಕ್ರಾಂತಿಕಾರಿಗಳನ್ನು ಬಂಧಿಸಿದರು. ಅವರಲ್ಲಿ ಎಸ್.ಎಂ. ಕೂಡಾ ಒಬ್ಬರಾಗಿದ್ದರು. ಸರ್ಕಾರ ಮಹಾರಾಷ್ಟ್ರ ಒಳಸಂಚು ಪ್ರಕರಣವನ್ನು ದಾಖಲಿಸಿಕೊಂಡು ಈ ಕ್ರಾಂತಿಕಾರಿಗಳ ವಿಚಾರಣೆ ನಡೆಸಲು ಮುಂದಾಯಿತು. ಆದರೆ ಸೂಕ್ತ ಪುರಾವೆಗಳ ಕೊರತೆಯಿಂದಾಗಿ ಏನೂ ರುಜುವಾತಗಲಿಲ್ಲ. ಆದರೂ ಈ ಕ್ರಾಂತಿಕಾರಿಗಳನ್ನು ಮೂರು ವರ್ಷಗಳ ಕಾಲ ನ್ಯಾಯಬಹಿರವಾಗಿ ವಿಚಾರಣಾಧೀನ ಕೈದಿಗಳಾಗಿಯೇ ಸರ್ಕಾರ ಸೆರೆಮನೆಯಲ್ಲಿ ಇರಿಸಿಕೊಂಡಿತು.

## ಸಂಸದೀಯ ಪಟುವಾಗಿ

ನೇರ ನುಡಿ ಮತ್ತು ನಿರ್ಭೀಡ ಟೀಕೆಗೆ ಹೆಸರಾಗಿದ್ದ ಎಸ್.ಎಂ. ಅವರು ಓರ್ವ ಶ್ರೇಷ್ಠ ಸಂಸದೀಯ ಪಟುವಾಗಿದ್ದರು. ಅವರು ಸಂಸತ್ತಿನಲ್ಲಿ ಬಹುದೀರ್ಘಕಾಲ ಇರದಿದ್ದರೂ ಸದನಕ್ಕೆ ಅವರ ಕೊಡುಗೆ ಹಿರಿದಾದುದು. ಪ್ರತಿಪಕ್ಷಗಳ ಧುರೀಣರಾಗಿ ರಚನಾತ್ಮಕವಾಗಿರುವುದು ಹೇಗೆ ಎಂಬುದನ್ನು ಅವರು ತೋರಿಸಿಕೊಟ್ಟರು. ಮಹಾರಾಷ್ಟ್ರ ವಿಧಾನಸಭೆಯಲ್ಲೂ ಅವರು ಎರಡು ಅವಧಿಗಳಿಗೆ ಸದಸ್ಯರಾಗಿದ್ದರು. ನಾಲ್ಕನೇ ಲೋಕಸಭೆಯ ಸದಸ್ಯರಾಗಿಯೂ ಅವರು ಕಾರ್ಯನಿರ್ವಹಿಸಿದ್ದರು. ಈ ದಿನಗಳಲ್ಲಿ ಸಂಸತ್ತಿನಲ್ಲಿನ ಚರ್ಚೆಗಳಿಗೆ ಅವರು ಮಹತ್ತರ ಕೊಡುಗೆಗಳನ್ನು ನೀಡಿದರು. ಹೀಗೆ ತಮ್ಮ ಬಹುಶ್ರುತ ವಿಚಾರಧಾರೆಯಿಂದ ರಾಷ್ಟ್ರ ಜೀವನಕ್ಕೆ ಅವರು ನೀಡಿದ ಕೊಡುಗೆ ಅಸಾಧಾರಣವಾದದು. ಅವರು ತಮ್ಮ ಸ್ಫಟಿಕದಂತಹ ಪಾರದರ್ಶಕ ವ್ಯಕ್ತಿತ್ವದಿಂದಾಗಿ ಎಲ್ಲರ ಗೌರವಾದರಗಳಿಗೆ ಪಾತ್ರರಾಗಿದ್ದರು. ಅದೇ ರೀತಿ ಅವರ ಪ್ರಾಮಾಣಿಕತೆ, ಧ್ಯೇಯ ಸಾಧನೆಯಲ್ಲಿ ಅವರಿಗಿದ್ದ ಸಾತತ್ಯ ಮತ್ತು ಅವರ ಸರಳತೆಗಳು ಅವರನ್ನು ತುಂಬಾ ಎತ್ತರದ ಸ್ಥಾನದಲ್ಲಿ ನಿಲ್ಲಿಸಿದ್ದವು. ಹೀಗೆ ಓರ್ವ ಸಂಸತ್ ಸದಸ್ಯರಾಗಿ ತಮ್ಮದೇ ಆದ ಒಂದು ಅಪೂರ್ವ ವ್ಯಕ್ತಿತ್ವವನ್ನು ಹೊಂದಿದ್ದರು. ಅದಕ್ಕೆ ಸರಿಯಾಗಿ ಅವರು ನಿಜವಾಗಿಯೂ ಓರ್ವ ಅಜಾತಶತ್ರುವೇ ಆಗಿದ್ದರು. ೧೯೫೨ ರಲ್ಲಿ ಲೋಕಸಭೆಗೆ ನಡೆದ ಪ್ರಥಮ ಮಹಾ ಚುನಾವಣೆಯಲ್ಲಿ ಎಸ್.ಎಂ. ಭಾಗಿಯಾಗಿದ್ದರು. ಅಂದಿನ ಸಂವಿಧಾನದ ವಿಧಿಗಳನ್ವಯ ಅವರು ಪುಣೆ ಮತಕ್ಷೇತ್ರದಿಂದ ಸ್ಪರ್ಧಿಸಿದ್ದರು. ಆದರೆ ಆ ಬಾರಿ ಚುನಾವಣೆ ಅವರಿಗೆ ಗೆಲುವು ತಂದು ಕೊಡಲಿಲ್ಲ. ಆರಂಭದಲ್ಲೇ ಎದುರಾದ ಈ ನೋವಿನಿಂದ ಅವರು ಧೃತಿಗೆಡಲಿಲ್ಲ. ಈ ದಿನಗಳಲ್ಲಿ ಅವರು ಓರ್ವ ಕರ್ಮಯೋಗಿಯಂತೆ ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ದುಡಿಯುವ ವರ್ಗದವರ ಯೋಗಕ್ಷೇಮ ಚಿಂತನೆಗಾಗಿಯೇ ಮೀಸಲಿಟ್ಟು ಶ್ರಮಿಸಿದರು.

ಎಸ್.ಎಂ. ಅವರು ಮುಂಬಯಿ ವಿಧಾನಸಭೆಯ ಸದಸ್ಯರಾಗಿ ತಮ್ಮ ಸಂಸದೀಯ ಜೀವನವನ್ನು ಆರಂಭಿಸಿದರು. ೧೯೫೨ರಲ್ಲಿ ನಡೆದ ಉಪಚುನಾವಣೆಯೊಂದರಲ್ಲಿ ಅವರು ಪುಣೆ ಮತಕ್ಷೇತ್ರದಿಂದ ಆಯ್ಕೆಯಾದರು. ೧೯೫೭ ರಲ್ಲಿ ಮತ್ತೊಮ್ಮೆ ಅದೇ ಕ್ಷೇತ್ರದಿಂದ

ವಿಧಾನಸಭೆಗೆ ಚುನಾಯಿತರಾದರು. ಶಾಸಕರಾಗಿ ಎಸ್.ಎಂ. ಅವರು ಸದನದ ಕಲಾಪಗಳ ಮೇಲೆ ತಮ್ಮದೇ ಆದ ಛಾಪನ್ನು ಒತ್ತಿದರು. ತಮ್ಮ ವಾಕ್ಪಟುತ್ವ ಮತ್ತು ನಿರ್ಭೀಡ ಅಭಿಪ್ರಾಯಗಳಿಂದ ಅವರು ಶಾಸಕಾಂಗದ ಘನತೆಯನ್ನು ಎತ್ತರಿಸಿದರು ಮತ್ತು ವಿರೋಧ ಪಕ್ಷದಲ್ಲಿದ್ದು ರಚನಾತ್ಮಕ ಕಾರ್ಯವೈಖರಿಯನ್ನು ತೋರಿಸಿಕೊಟ್ಟರು. ವಿಧಾನಸಭೆಯಲ್ಲಿ ಸಂಯುಕ್ತ ಪ್ರತಿಪಕ್ಷಗಳ ನಾಯಕರಾಗಿಯೂ ಅವರು ಕೆಲ ಕಾಲ ಕಾರ್ಯನಿರ್ವಹಿಸಿದರು. ಪ್ರತಿಪಕ್ಷಗಳು ಅಂಗೀಕರಿಸಿದ್ದ ಸಂಯುಕ್ತ ನಾಯಕತ್ವದ ಸೂತ್ರವನ್ನು ಅನುಸರಿಸಿ ಅವರು ಈ ಕಾರ್ಯಭಾರ ನೆರವೇರಿಸಿದರು. ಎಸ್.ಎಂ. ಅವರು ಒಂದು ನಿರ್ದಿಷ್ಟ ಅವಧಿಗೆ ಮಾತ್ರವೇ ಕಾರ್ಯ ನಿರ್ವಹಿಸಿದರೂ ಪ್ರತಿಯೊಬ್ಬರ ಗೌರವಕ್ಕೂ ಪಾತ್ರರಾದರು. ಪತ್ರಿಪಕ್ಷಗಳು ಪ್ರತಿಯೊಂದು ಸಂದರ್ಭದಲ್ಲೂ, ಪ್ರತಿಯೊಂದು ವಿಷಯದಲ್ಲೂ ಅವರೊಂದಿಗೆ ಸಮಾಲೋಚಿಸದೆ ಕಾರ್ಯ ನಿರ್ವಹಿಸುತ್ತಿರಲಿಲ್ಲ. ಹೀಗೆ ಮೊದಲ ಇನ್ನಿಂಗ್ಸ್‌ನಲ್ಲೇ ಎಸ್.ಎಂ. ಅವರು ತಾವು ಓರ್ವ ಸಮರ್ಥ ಶಾಸಕ ಎಂಬುದನ್ನು ನಿರೂಪಿಸಿದರು. ಮುಂಬಯಿ ರಾಜ್ಯದಲ್ಲಿ ಮರಾಠಿ ಮಾತನಾಡುವ ಜನರಿಗೆ ಪ್ರತ್ಯೇಕ ರಾಜ್ಯವೊಂದನ್ನು ರಚಿಸಬೇಕೆಂಬ ಆಂದೋಲನದ ಪರವಾಗಿ ಅವರು ಸಕ್ರಿಯವಾಗಿ ಕಾರ್ಯನಿರ್ವಹಿಸಿದ್ದು ಇದೇ ಅವಧಿಯಲ್ಲಿ.

ರಾಜ್ಯಗಳ ಪುನರ್ ಸಂಘಟನಾ ಆಯೋಗವು ಏಕಭಾಷಿಕ ಮಹಾರಾಷ್ಟ್ರ ರಾಜ್ಯಕ್ಕೆ ಅನುಮೋದನೆ ನೀಡದೆ ಹೋದಾಗ ಮುಂಬಯಿಯಲ್ಲಿ ಚಳವಳಿ ತೀವ್ರಗೊಂಡಿತು ಮತ್ತು ಈ ಚಳವಳಿಯಲ್ಲಿ ನಡೆದ ಪೊಲೀಸ್ ಗೋಲಿಬಾರ್‌ನಲ್ಲಿ ಐವತ್ತಕ್ಕೂ ಹೆಚ್ಚು ಜನರು ಗುಂಡೇಟಿಗೆ ಬಲಿಯಾದರು. ಇದಕ್ಕೆ ಪ್ರತಿಭಟನೆ ಸೂಚಿಸುವ ಸಲುವಾಗಿ ಶ್ರೀ ಜೋಶಿಯವರು ವಿಧಾನಸಭೆಯ ಸದಸ್ಯತ್ವಕ್ಕೇ ರಾಜೀನಾಮೆ ನೀಡಿದರು ಮತ್ತು ಹೊಸದಾಗಿ ರೂಪಿತವಾಗಿದ್ದ ಸಂಯುಕ್ತ ಮಹರಾಷ್ಟ್ರ ಸಂಘರ್ಷ ಸಮಿತಿಯ ಪ್ರಧಾನ ಕಾರ್ಯದರ್ಶಿ ಆದರು. ಸಂಯುಕ್ತ ಮಹಾರಾಷ್ಟ್ರ ಸಂಘರ್ಷ ಸಮಿತಿಯ ಸರ್ವ ಪಕ್ಷಗಳ ಒಂದು ಸಂಘಟನೆಯಾಗಿದ್ದು ಪ್ರತ್ಯೇಕ ಮಹಾರಾಷ್ಟ್ರ ರಾಜ್ಯವನ್ನು ಪಡೆಯುವುದೇ ಅದರ ಉದ್ದೇಶವಾಗಿತ್ತು. ೧೯೬೦ ರವರೆಗೂ ಅಂದರೆ ಪ್ರತ್ಯೇಕ ರಾಜ್ಯ ರಚಿತವಾಗುವವರೆಗೂ ಎಸ್.ಎಂ. ಅವರು ಈ ಚಳವಳಿಗೆ ನಾಯಕತ್ವ ನೀಡಿದರು. ಆದರೆ ಜೋಶಿಯವರು ಎಂದೂ ಈ ಚಳವಳಿ ಭಾಷಾವಾದಿ ಹಿಂಸಾಚಾರಕ್ಕೆ ತಿರುಗಲು ಬಿಡಲಿಲ್ಲ. ಒಂದು ಸಲ ಉದ್ರಿಕ್ತ ಜನ ಸಮೂಹದಿಂದ ಹಿರಿಯ ಪೊಲೀಸ್ ಅಧಿಕಾರಿಯೊಬ್ಬರಿಗೆ ಪ್ರಾಣಾಪಾಯ ಸಂಭವಿಸುವುದರಲ್ಲಿದ್ದಾಗ ತಾವೇ ಜೀವದ ಹಂಗು ತೊರೆದು ಅವರ ರಕ್ಷಣೆಗೆ ಮುಂದಾಗಿದ್ದರು. ಪಂಡಿತ್ ಜವಹರಲಾಲ್ ನೆಹರು ಅವರು ಪ್ರತಾಪಗಡ್‌ಗೆ ಭೇಟಿ ಇತ್ತಾಗ ಎಸ್.ಎಂ. ಅವರು ಅತ್ಯಂತ ದೊಡ್ಡ ರೀತಿಯಲ್ಲಿ ಮತ್ತು ಅತ್ಯಂತ ಗೌರವಯುತ ರೀತಿ ಮತ ಪ್ರದರ್ಶನವನ್ನು ಸಂಘಟಿಸಿ ಪ್ರತಿಯೊಬ್ಬರ ಶ್ಲಾಘನೆಗೆ ಪಾತ್ರರಾಗಿದ್ದರು. ಸ್ವತಃ ನೆಹರು ಅವರೇ ಅವರ ನಡವಳಿಕೆಯನ್ನು ಪ್ರಶಂಸಿಸಿದ್ದರು.

ಮಹಾರಾಷ್ಟ್ರ ರಾಜ್ಯ ಅಸ್ತಿತ್ವಕ್ಕೆ ಬರುವ ವೇಳೆಗೆ ಎಸ್.ಎಂ. ಅವರು ಜನಸಮುದಾಯದ ನಾಯಕರಾಗಿ ರೂಪುಗೊಂಡಿದ್ದರು. ಆದರೆ ತಾವು ಸಂಪಾದಿಸಿದ್ದ ಈ ಅಪಾರ ಅಭಿಮಾನವನ್ನು ರಾಜಕೀಯ ಪ್ರಯೋಜನಕ್ಕಾಗಿ ಅಥವಾ ಚುನಾವಣಾ ಲಾಭಕ್ಕಾಗಿ ಬಳಸಿಕೊಳ್ಳಲು ಅವರು ಎಂದೂ ಉದ್ದೇಶಿಸಿರಲಿಲ್ಲ. ೧೯೫೭ರ ಮಹಾಚುನಾವಣೆಯಲ್ಲಿ ಅವರ ಸಂಯುಕ್ತ ಮಹಾರಾಷ್ಟ್ರ ಸಮಿತಿ ಬಹಳಷ್ಟು ಸ್ಥಾನಗಳನ್ನು ಗೆದ್ದುಕೊಂಡಿತ್ತು. ಮಹಾರಾಷ್ಟ್ರ ರಾಜ್ಯ ರಚಿತವಾದ ಮೇಲೆ ಕೆಲವೊಂದು ವಿಷಯಗಳಲ್ಲಿ ಮತಭೇದ ಉಂಟಾಗಿ ಅವರು ಸಮಿತಿಯಿಂದ ಹೊರಬಿದ್ದರು. ಅಂದಿನ ದಿನಗಳಲ್ಲಿನ ಅವರ ನಡವಳಿಕೆ ಭಾರತೀಯರ ನಿಸ್ಕಾಮ ಕರ್ಮ ಸಿದ್ಧಾಂತಕ್ಕೆ ಅನುಗುಣವಾಗಿಯೇ ಇದ್ದಿತು. ೧೯೬೨ರಲ್ಲಿ ಮೂರನೇ ಮಹಾ ಚುನಾವಣೆ ನಡೆದಾಗ ಅವರು ಮತ್ತೆ ಸ್ಪರ್ಧಿಸಿದರಾದರೂ ಗೆದ್ದು ಬರಲಿಲ್ಲ. ಆದರೇ ಅದೇ ವರ್ಷ ಅವರು ಪುಣೆ ನಗರಪಾಲಿಕೆಯ ಸದಸ್ಯರಾಗಿ ಚುನಾಯಿತರಾದರು. ೧೯೬೭ರಲ್ಲಿ ನಡೆದ ನಾಲ್ಕನೇ ಮಹಾ ಚುನಾವಣೆಯಲ್ಲಿ ಜೋಶಿಯವರು ಪುಣೆ ಮತಕ್ಷೇತ್ರದಿಂದ ಸಂಯುಕ್ತ ಸಮಾಜವಾದಿ ಪಕ್ಷದ (ಎಸ್.ಎಸ್.ಪಿ) ಅಭ್ಯರ್ಥಿಯಾಗಿ ಸ್ಪರ್ಧಿಸಿ ಗೆದ್ದು ಬಂದರು. ಈ ಅವಧಿಯಲ್ಲಿ ಅವರ ಪಕ್ಷವು ಸಂಘಟಿಸಿದ್ದ ಭೂ ಅತಿಕ್ರಮಣ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಬಂಧನಕ್ಕೊಳಗಾದರು. ಲೋಕಸಭೆಯ ಸದಸ್ಯರಾಗಿ ಸದನದಲ್ಲಿ ಅನೇಕ ವಿಷಯಗಳನ್ನು ಎತ್ತಿಕೊಂಡು ಅವರು ಮಾತನಾಡುತ್ತಿದರು. ರಾಷ್ಟ್ರೀಯ ಏಕತೆ ಮತ್ತು ಸಮಗ್ರತೆಗೆ ಸಂಬಂಧಿಸಿದ ವಿಷಯಗಳು, ರೈತರು ಮತ್ತು ಕಾರ್ಮಿಕರ ಹಕ್ಕುಗಳು, ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳವರ ಸಮಸ್ಯೆಗಳು ಹೀಗೆ ಹತ್ತು ಹಲವು ವಿಷಯಗಳ ಮೇಲೆ ಅವರು ತಮ್ಮ ವಾದ ಮಂಡಿಸುತ್ತಿದ್ದರು. ಅವರು ತಮ್ಮ ವಿಚಾರಗಳನ್ನು ಸರಳವಾಗಿ ಮತ್ತು ಮನ ಮುಟ್ಟುವ ರೀತಿಯಲ್ಲಿ ವಿವರಿಸುತ್ತಿದ್ದರು. ಎಂದೂ ವಿಷಯವನ್ನು ಬಿಟ್ಟು ಮಾತನಾಡುತ್ತಿರಲಿಲ್ಲ ಮತ್ತು ತಮ್ಮ ಅಭಿಪ್ರಾಯವನ್ನು ಸಮರ್ಪಕವಾಗಿ ಮತ್ತು ಅತ್ಯಂತ ಪರಿಣಾಮಕಾರಿಯಾಗಿ ಮಂಡಿಸುತ್ತಿದ್ದರು. ಶ್ರೀ ಜೋಶಿಯವರು ಅಪ್ಪಟ ಜನತಂತ್ರವಾದಿಯಾಗಿದ್ದರು ಮತ್ತು ರಾಜಕೀಯವೂ ಸೇರಿದಂತೆ ಜನಜೀವನದ ಎಲ್ಲ ರಂಗಳಲ್ಲಿಯೂ ನೈತಿಕತೆಯನ್ನು ಮತ್ತು ನ್ಯಾಯಪರವಾದ ಮೌಲ್ಯಗಳನ್ನು ಪ್ರತಿಪಾದಿಸುತ್ತಿದ್ದರು. ರಾಜಕೀಯ ಪಕ್ಷಗಳ ಸದಸ್ಯರ ಪಕ್ಷಾಂತರವನ್ನು ರಾಷ್ಟ್ರ ಜೀವನದ ಪತನ ಹಾಗೂ ಅಪಮೌಲ್ಯದ ಲಕ್ಷಣ ಎಂದು ಅವರು ಭಾವಿಸುತ್ತಿದ್ದರು. ಅದನ್ನು ಬರಿಯ ಶಾಸನವೊಂದರಿಂದ ಸರಿಪಡಿಸಲು ಅಸಾಧ್ಯವೆಂದು ಅವರು ಅಭಿಪ್ರಾಯಪಟ್ಟಿದ್ದರು. ಜೋಶಿಯವರ ವಿಚಾರಧಾರೆ ಮತ್ತು ಅವರ ವಿಶ್ಲೇಷಣೆ ಎಷ್ಟೊಂದು ವಾಸ್ತವವಾಗಿದೆ ಎನ್ನುವುದಕ್ಕೆ ಪಕ್ಷಾಂತರ ನಿಷೇಧ ಶಾಸನ ಜಾರಿಗೆ ಬಂದುದೇ ನಿದರ್ಶನವಾಗಿದೆ. ಈ ನಿಟ್ಟಿನಲ್ಲಿ ಸುದೀರ್ಘ ಕಾಲ ಅನೇಕರು ಪಟ್ಟ ಪ್ರಯತ್ನ ಮತ್ತು ಪರಿಶ್ರಮಗಳ ಫಲವಾಗಿ ೧೯೮೫ರಲ್ಲಿ ಸಂಸತ್ತು ಪಕ್ಷಾಂತರ ನಿಷೇಧ ಕಾಯ್ದೆಯನ್ನು ಅಂಗೀಕರಿಸಿತು.

ಭಾರತವು ಬಹು ಧೀರ್ಘ ಕಾಲದಿಂದ ಕಂಡಿರುವ ವಿವಿಧತೆಯಲ್ಲಿ ಏಕತೆ ಸಿದ್ಧಾಂತದಲ್ಲಿ ಅವರು ಪೂರ್ತಿ ನಂಬಿಕೆ ಇಟ್ಟವರಾಗಿದ್ದರು. ಭಾವೈಕ್ಯತೆಯ ತತ್ವಕ್ಕೆ ಅವರು ಬಹಳ ಒತ್ತು ನೀಡಿದ್ದರು. ಜಮ್ಮು ಮತ್ತು ಕಾಶ್ಮೀರದ ಸ್ಥಾನಮಾನ ಕುರಿತ ಗೊತ್ತುವಳಿಯೊಂದರ ಮೇಲೆ ಮಾತನಾಡುತ್ತಾ ಎಸ್.ಎಂ.ಅವರು*

*.... ನಮ್ಮ ಸಂವಿಧಾನದ ವೈಲಕ್ಷಣಗಳಲ್ಲಿ ಒಂದೆಂದರೆ ವೈವಿಧ್ಯತೆಯಲ್ಲಿ ಏಕತೆ. ನಾವು ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಅಂಗೀಕರಿಸಿದ ಮೇಲೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಪ್ರತ್ಯೇಕ ಅಸ್ತಿತ್ವವನ್ನು ಹೊಂದಿದ್ದಾನೆಂದೇ ಅದರ ಅರ್ಥ. ಪ್ರತಿಯೊಬ್ಬರೂ ಪ್ರಪ್ರತ್ಯೇಕ ಆತ್ಮಗಳನ್ನು ಹೊಂದಿದ್ದಾರೆ. ಆದರೆ ನಮ್ಮ ರಾಷ್ಟ್ರದ ಆತ್ಮ ಮಾತ್ರ ಒಂದೇ ಆಗಿದೆ. ಹಾಗಾಗಿ ಪ್ರತಿಯೊಬ್ಬನೂ ತನ್ನ ಆತ್ಮವನ್ನು ರಾಷ್ಟ್ರದ ಆತ್ಮದೊಂದಿಗೆ ಸಮೀಕರಿಸಿಕೊಳ್ಳಬೇಕು.

## ಭಾರತೀಯ ಸಮಾಜವಾದಿ ಚಳವಳಿಯ ವಕ್ತಾರನಾಗಿ

ಎಸ್.ಎಂ. ಅವರು ಮನೋವೃತ್ತಿಯಿಂದ ಓರ್ವ ಕಾರ್ಯಕರ್ತ, ಸಂಘಟಕ. ಮಾನವತಾವಾದಕ್ಕೆ ತಮ್ಮನ್ನು ಅರ್ಪಿಸಿಕೊಂಡ ಓರ್ವ ಆದರ್ಶವಾದಿ. ಮಾರ್ಕ್ಸ್ ಸಿದ್ಧಾಂತದಿಂದ ಬಹಳಷ್ಟು ಪ್ರಭಾವಿತರಾಗಿದ್ದರೂ ಕೂಡಾ ಅವರು ಯಾವಾಗಲೂ ಸಮಸ್ಯೆಗಳಿಗೆ ತಮ್ಮದೇ ಆದ ರೀತಿಯಲ್ಲಿ ಪರಿಹಾರ ಕಂಡುಕೊಳ್ಳುತ್ತಿದ್ದರು. ಎಸ್.ಎಂ.ಅವರು ಸಮಾಜವಾದವನ್ನು ಸ್ವಂತದ ಜೀವನದಲ್ಲೂ ಅನುಸರಿಸುತ್ತಿದ್ದರು.

ಸಮಾಜವಾದ ಅವರ ಪಾಲಿಗೆ ಎಂದೂ ಕೇವಲ ಒಂದು ಬೌದ್ಧಿಕ ಸಿದ್ಧಾಂತವಾಗಿರಲಿಲ್ಲ. ಅವರು ತ್ರಿಕರಣಪೂರ್ವಕವಾಗಿ ಸಮಾಜವಾದಕ್ಕೆ ತಮ್ಮನ್ನು ಸಮರ್ಪಿಸಿಕೊಂಡಿದ್ದರು. ದಲಿತರು, ದುರ್ಬಲರು ಮತ್ತು ಶೋಷಿತರ ಜೀವನ ಸ್ಥಿತಿಯ ಸುಧಾರಣೆಗೆ ಸಮಾಜವಾದ ಒಂದು ಪರಿಣಾಮಕಾರಿ ಸಾಧನ ಎಂದು ನಿಚ್ಚಳವಾಗಿ ನಂಬಿದ್ದವರು. ಈ ಉದ್ದೇಶಕ್ಕಾಗಿ ಸಮಾಜವಾದದ ಸೂತ್ರಗಳನ್ನು ಮತ್ತು ಗಾಂಧಿವಾದದಲ್ಲಿ ಅಂತರ್ನಿಹಿತವಾಗಿದ್ದ ಮಾನವತಾವಾದದ ನೈತಿಕ ಮೌಲ್ಯಗಳನ್ನು ಅವರು ಮೈಗೂಡಿಸಿಕೊಂಡಿದ್ದರು. ಈ ಎರಡು ಸಿದ್ಧಾಂತಗಳನ್ನು ಅತ್ಯಂತ ಜಾಣ್ಮೆಯಿಂದ ಒಂದುಗೂಡಿಸಿದ್ದನ್ನು ಕಂಡು ಅನೇಕರು ಅವರನ್ನು "ಸಮಾಜವಾದಿಗಳ ನಡುವಣ ಗಾಂಧೀವಾದಿ ಮತ್ತು ಗಾಂಧೀವಾದಿಗಳ ನಡುಣ ಸಮಾಜವಾದಿ" ಎಂದು ಕರೆಯುತ್ತಿದ್ದರು. ಈ ಮೊದಲೇ ಹೇಳಿರುವಂತೆ ಅವರು ದೇಶದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ವಿಚಾರಧಾರೆಯಿಂದ ಆಕರ್ಷಿತರಾಗಿದ್ದರು. ಅನಂತರದಲ್ಲಿ ಅವರು ಜಯಪ್ರಕಾಶ್‌ನಾರಾಯಣ್, ಡಾ. ರಾಮ ಮನೋಹರ್ ಲೋಹಿಯಾ, ಎನ್.ಜಿ. ಗೋರೆ,

* ಲೋಕಸಭೆಯಲ್ಲಿ ನಡೆದ ಚರ್ಚೆ ಡಿಸೆಂಬರ್ ೬, ೧೯೬೮ ಸಿಸಿ ೨೫೯-೨೬೬.

ಯೂಸೂಫ್ ಮೆಹರುಲಿ ಮತ್ತಿತರರೊಂದಿಗೆ ಸೇರಿ ಕಾಂಗ್ರೆಸ್ ಪಕ್ಷದಲ್ಲೇ ಕಾಂಗ್ರೆಸ್ ಸೋಷಲಿಸ್ಟ್ ಗುಂಪನ್ನು ಸಂಘಟಿಸಿದರು. ಸ್ವಾತಂತ್ರ್ಯ ಹೋರಾಟಕ್ಕೆ ಇನ್ನು ಹೆಚ್ಚಿನ ವೇಗವನ್ನು ನೀಡುವುದು ಅದರ ಉದ್ದೇಶವಾಗಿತ್ತು.

ಎಸ್.ಎಂ. ಅವರು ಇನ್ನು ಸೆರೆಮನೆಯಲ್ಲಿದ್ದಾಗಲೇ ಕಾಂಗ್ರೆಸ್ ಪಕ್ಷದೊಳಗಿನ ಸಮಾಜವಾದಿಗಳ ಈ ಗುಂಪು ಪುಣೆಯಲ್ಲಿ ಸಭೆ ಸೇರಿ ಒಂದು ಸ್ವಯಂ ಸೇವಕರ ಸಂಘಟನೆಯನ್ನು (ರಾಷ್ಟ್ರ ಸೇವಾದಳ) ಆರಂಭಿಸಿತು. ರಾಷ್ಟ್ರದ ಯುವಕರಲ್ಲಿ ರಾಷ್ಟ್ರಪ್ರೇಮದ ಸ್ಫೂರ್ತಿ, ಉತ್ಸಾಹಗಳನ್ನು ತುಂಬುವುದು ಅದರ ಉದ್ದೇಶವಾಗಿತ್ತು. ೧೯೪೦ರಲ್ಲಿ ಜೈಲಿನಿಂದ ಬಿಡುಗಡೆ ಹೊಂದಿದ ಎಸ್.ಎಂ. ಅವರಿಗೆ ಈ ಸಂಘಟನೆಯ ಅಧ್ಯಕ್ಷ ಪದವಿಯನ್ನು ವಹಿಸಲಾಯಿತು. ಅವರ ನಾಯಕತ್ವದಲ್ಲಿ ಈ ಸಂಘಟನೆಗೆ ಒಂದು ಹೊಸ ವೇಗ ಒದಗಿತು. ಅದು ವಿದ್ಯಾರ್ಥಿಗಳು ಮತ್ತು ಯುವ ಸಮುದಾಯದಲ್ಲಿ ಜಾತ್ಯಾತೀತತೆಯ ಮೌಲ್ಯಗಳನ್ನು ತುಂಬಿತು. ಈ ಚಳವಳಿ ಎಷ್ಟು ಶಕ್ತಿಶಾಲಿಯಾಗಿ ಬೆಳೆಯಿತೆಂದರೆ ೧೯೪೭ ರಲ್ಲಿ ಮಹಾರಾಷ್ಟ್ರದ ಸತಾರದಲ್ಲಿ ನಡೆದ ರ್‍ಯಾಲಿಯೊಂದರಲ್ಲಿ ಸುಮಾರು ಐವತ್ತು ಸಾವಿರ ಸ್ವಯಂ ಸೇವಕರು ಹಾಜರಾಗಿದ್ದರು. ಸ್ವಾತಂತ್ರ್ಯಾನಂತರದಲ್ಲಿ ಸರ್ಕಾರವು ಈ ಸಂಘಟನೆಯ ಮೇಲೆ ನಿಷೇಧ ಹೇರಿತ್ತು. ಆದರೆ ಜೋಶಿಯವರ ಪ್ರಯತ್ನಗಳಿಂದಾಗಿ ಈ ನಿಷೇಧವನ್ನು ತೆಗೆದುಹಾಕಲಾಯಿತು.

೧೯೪೭ ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದು ಅವರ ಕನಸು ನನಸಾಯಿತು. ಆದರೂ ಆಗ ತಾನೇ ಅಸ್ತಿತ್ವಕ್ಕೆ ಬಂದ ಸರ್ಕಾರದ ನಿಲುವು ಧೋರಣೆಗಳ ವಿಷಯದಲ್ಲಿ ಈ ಸಮಾಜವಾದಿಗಳಿಗೆ ತೀವ್ರ ಭೇದ ಎದ್ದಿತು. ಸರ್ಕಾರದ ಸಾಮಾಜಿಕ, ಆರ್ಥಿಕ ಧೋರಣೆಯಂತೂ ಅವರಿಗೆ ಒಪ್ಪಿತವಾಗಿರಲಿಲ್ಲ. ೧೯೪೮ರ ಏಪ್ರಿಲ್ ತಿಂಗಳಿನಲ್ಲಿ ನಾಸಿಕ್‌ದಲ್ಲಿ ಜರುಗಿದ ಸಮ್ಮೇಳನದಲ್ಲಿ ಸಮಾಜವಾದಿಗಳು ಕಾಂಗ್ರೆಸ್‌ನಿಂದ ಪ್ರತ್ಯೇಕವಾಗಲು ನಿರ್ಧರಿಸಿದರು. ಆಗ ಅಸ್ತಿತ್ವಕ್ಕೆ ಬಂದ ಪಕ್ಷವೇ ಸೋಷಿಯಲಿಸ್ಟ್ ಪಾರ್ಟಿ (ಎಸ್.ಪಿ). ಎಸ್.ಎಂ. ಅವರು ಹೊಸ ಪಕ್ಷದ ಮಹಾರಾಷ್ಟ್ರ ಘಟಕದ ಅಧ್ಯಕ್ಷರಾಗಿ ನಿಯುಕ್ತರಾದರು. ಸೋಸಿಯಲಿಸ್ಟ್ ಪಾರ್ಟಿಯ ನಾಯಕರಾಗಿ ಇವರು ಜನಸಮುದಾಯದ ದುಃಖ ದುಮ್ಮಾನಗಳಿಗೆ ದನಿಯಾದರು. ರಾಷ್ಟ್ರ ಸೇವಾ ದಳದ ಕಾರ್ಯಕರ್ತರ ಪಡೆಯೊಂದಿಗೆ ಎಸ್.ಎಂ. ಗ್ರಾಮಾಂತರ ಪ್ರದೇಶಗಳಲ್ಲಿ ಶ್ರಮದಾನ ಕೈಗೊಂಡರು. ಮಹಾರಾಷ್ಟ್ರದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಾಗ ಅವರು ಹಗಲಿರುಳು ಪರಿಹಾರ ಕಾರ್ಯಕ್ಕಾಗಿ ಶ್ರಮಿಸಿದರು.

ಎಲ್ಲ ಸಮಾನ ಮನಸ್ಕ ಪಕ್ಷಗಳು ಒಂದುಗೂಡಬೇಕೆಂಬುದೇ ಜೋಶಿಯವರ ಆಶಯವಾಗಿತ್ತು. ಸೋಶಿಯಲಿಸ್ಟ್ ಪಾರ್ಟಿ ಮತ್ತು ಕಿಸಾನ್ ಮಜ್ದೂರ್ ಪ್ರಜಾ ಪಾರ್ಟಿ

(ಕೆ.ಎಂ.ಪಿ. ಪಾರ್ಟಿ)ಗಳು ವಿಲಿನಗೊಳ್ಳಬೇಕೆಂದು ಅವರು ಬಯಸಿದರು. ಈ ಕೆ.ಎಂ.ಪಿ. ಪಾರ್ಟಿಯನ್ನು ಪ್ರಜಾ ಸೋಷಿಯಲಿಸ್ಟ್ ಪಾರ್ಟಿ (ಪಿ.ಎಸ್.ಪಿ) ಎಂದು ಕರೆಯುತ್ತಿದ್ದರು. ಅನಂತರದ ದಿನಗಳಲ್ಲಿ ಪ್ರಜಾ ಸೋಷಿಯಲಿಸ್ಟ್ ಪಕ್ಷ ಎಂದು ರಚಿತವಾಗಿ ಡಾ. ರಾಮ ಮನೋಹರ ಲೋಹಿಯಾ ಅವರು ಸೈದ್ಧಾಂತಿಕ ಕಾರಣಗಳಿಂದಾಗಿ ತಮ್ಮ ಬೆಂಬಲಿಗರೊಂದಿಗೆ ಪಕ್ಷವನ್ನು ಬಿಟ್ಟು ಹೋದರು.

೧೯೬೨ ರಲ್ಲಿ ಚೀನಾದ ದಾಳಿಯಾದ ಮೇಲೆ ಸೋಷಿಯಲಿಸ್ಟ್ ಪಾರ್ಟಿಯ ಧುರೀಣರಾದ ಎಸ್.ಎಂ. ಅವರು ತಮ್ಮ ಬೆಂಬಲಿಗರಿಗೆ ರಾಷ್ಟ್ರಕ್ಕಾಗಿ ಭಾರಿ ದೊಡ್ಡ ತ್ಯಾಗಕ್ಕೆ ಸಿದ್ಧರಾಗಬೇಕೆಂದು ಕರೆ ಕೊಟ್ಟರು. ಅದೇ ವೇಳೆಯಲ್ಲಿ ದೇಶದಲ್ಲಿ ಸಮಾಜವಾದಿ ಚಳವಳಿಯನ್ನು ಬಲಪಡಿಸಬೇಕಾದ ಅಗತ್ಯವನ್ನು ಅವರು ಒತ್ತಿ ಹೇಳಿದರು. ಇದು ಜನತೆಗೆ ಹೊಸ ಭರವಸೆಯನ್ನು ನೀಡಿ ದೇಶಕ್ಕೆ ಪರ್ಯಾಯ ವ್ಯವಸ್ಥೆಯೊಂದನ್ನು ಒದಗಿಸುವುದೆಂದು ಅವರು ನಂಬಿದ್ದರು. ದೇಶದಲ್ಲಿ ಸಾಮಾಜಿಕ, ಆರ್ಥಿಕ, ಪರಿವರ್ತನೆ ನಡೆದು ಹೊಸ ಯುಗವೊಂದು ಉದಯಿಸುವುದೆಂದೂ ಇದು ವಿದೇಶಿ ಅಕ್ರಮಣವನ್ನು ತಡೆದು ಆಂತರಿಕ ಸಂಘಟನೆಯನ್ನು ತಡೆಯುವುದೆಂದು ಭಾವಿಸಿದ್ದರು. ೧೯೬೩ ರಲ್ಲಿ ಭೂಪಾಲ್‌ನಲ್ಲಿ ನಡೆದ ಪಕ್ಷದ ಅಧಿವೇಶನವು ಈ ರಾಜಕೀಯ ಕಾರ್ಯಾಚರಣೆಯ ತೀವ್ರಗಾಮಿ ಧೋರಣೆಯನ್ನು ಅನುಮೋದಿಸಿತು. ಇದೇ ಅಧಿವೇಶನದಲ್ಲಿ ಜೋಶಿಯವರು ಪಕ್ಷದ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡರು.

ಪ್ರಜಾ ಸೋಷಿಯಲಿಸ್ಟ್ ಪಾರ್ಟಿಯ ಅಧ್ಯಕ್ಷರಾಗಿ ಜೋಶಿಯವರು ದೇಶದಲ್ಲಿ ಎಲ್ಲ ಸಮಾಜವಾದಿ ಶಕ್ತಿಗಳನ್ನು ಒಂದುಗೂಡಿಸಲು ನಿರಂತರ ಶ್ರಮ ವಹಿಸಿದರು. ಪಕ್ಷದ ನಾಯಕತ್ವದೊಂದಿಗೆ ಭಿನ್ನಾಭಿಪ್ರಾಯ ಹೊಂದಿದ್ದ ಅಶೋಕ ಮೆಹ್ತಾ ಅವರೂ ಸೇರಿದಂತೆ ಹಲವು ಸದಸ್ಯರು ಪಕ್ಷವನ್ನು ತೊರೆದು ಹೋದರು. ೧೯೬೪ ರ ಜೂನ್ ತಿಂಗಳಿನಲ್ಲಿ ಸುದೀರ್ಘ ಚರ್ಚೆ ಮತ್ತು ಸಮಾಲೋಚನೆಗಳು ನಡೆದು ಸಂಯುಕ್ತ ಸೋಷಿಯಲಿಸ್ಟ್ ಪಾರ್ಟಿ (ಎಸ್.ಎಸ್.ಪಿ) ಅಸ್ತಿತ್ವಕ್ಕೆ ಬಂದಿತು. ಮತ್ತೆ ಎಸ್.ಎಂ. ಅವರೇ ಅದರ ಅಧ್ಯಕ್ಷರಾಗಿ ಆಯ್ಕೆಯಾಗಿ ೧೯೬೯ ರವರೆಗೂ ಮುಂದುವರೆದರು. ಈ ಅವಧಿಯಲ್ಲಿ ದೇಶದುದ್ದಕ್ಕೂ ಅವರು ಪ್ರವಾಸ ಕೈಗೊಂಡರು.

೧೯೭೭ ರಲ್ಲಿ ಜನತಾ ಪಕ್ಷವನ್ನು ಅಸ್ತಿತ್ವಕ್ಕೆ ತರುವಲ್ಲಿ ಜಯಪ್ರಕಾಶ್ ನಾರಾಯಣ್ ಮತ್ತು ಇತರರ ಜೊತೆ ಜೋಶಿಯವರೂ ಅಪಾರ ಶ್ರಮ ವಹಿಸಿದ್ದರು. ಮುಂದಿನ ವರ್ಷ ಮಹಾರಾಷ್ಟ್ರದಲ್ಲಿ ಪಿ.ಡಿಎಫ್ ಸಂಪುಟ ರಚನೆಯಲ್ಲೂ ಅವರು ಅತ್ಯಂತ ಪ್ರಮುಖ ಪಾತ್ರ ವಹಿಸಿದ್ದರು. ಈ ಎಲ್ಲ ಕಾರಣಗಳಿಂದಾಗಿ ಜೋಶಿಯವರು ಭಾರತೀಯ ಸಮಾಜವಾದಿ ಚಳವಳಿಯ ಶಿಲ್ಪಿಗಳಲ್ಲಿ ಒಬ್ಬರೆಂದು ಮಾನ್ಯರಾಗಿದ್ದಾರೆ.

## ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆ ವಿರುದ್ಧ ಹೋರಾಟ

ಎಸ್.ಎಂ. ಅವರು ಡಾ. ಅಂಬೇಡ್ಕರ್ ಅವರ ವಿಚಾರಧಾರೆ ಮತ್ತು ರಾಜಕೀಯ ಚಟುವಟಿಕೆಗಳಿಂದ ಗಾಢವಾಗಿ ಪ್ರಭಾವಿತರಾಗಿದ್ದರು. ಅಸ್ಪೃಶ್ಯರಿಗೆ ಸಾರ್ವಜನಿಕ ಬಾವಿಗಳಿಂದ ನೀರು ಸೇದುವ ಮತ್ತು ದೇವಸ್ಥಾನಗಳಲ್ಲಿ ಅವರಿಗೆ ಪ್ರವೇಶಾವಕಾಶ ಕಲ್ಪಿಸುವುದೇ ಮೊದಲಾದ ಪೌರ ಹಕ್ಕುಗಳನ್ನು ಕೊಡಿಸುವ ನಿಟ್ಟಿನ ಚಳವಳಿಯ ಮಾರ್ಗವನ್ನು ಅದರ ರೀತಿ ನೀತಿಗಳನ್ನು ಜೋಶಿಯವರು ಮೆಚ್ಚಿಕೊಂಡಿದ್ದರು. ೧೯೨೯ರಲ್ಲಿ ಯೂತ್ ಲೀಗ್‌ನ ಕಾರ್ಯದರ್ಶಿಯಾಗಿ ಎಸ್.ಎಂ. ಅವರು ಪುಣೆಯಲ್ಲಿನ ಪಾರ್ವತಿ ದೇವಸ್ಥಾನವನ್ನು ಪ್ರವೇಶಿಸುವ ಅಸ್ಪೃಶ್ಯರ ಹಕ್ಕನ್ನು ಸ್ಥಾಪಿಸಲು ಸತ್ಯಾಗ್ರಹವೊಂದನ್ನು ಸಂಘಟಿಸಿದರು. ಸುಮಾರು ಮೂರು ಸಾವಿರಕ್ಕೂ ಹೆಚ್ಚು ಕಟ್ಟಾ ಹಿಂದೂಗಳು ಇಪ್ಪತ್ತೈದು ಮಂದಿ ಸತ್ಯಾಗ್ರಹಿಗಳ ಪ್ರವೇಶಕ್ಕೆ ತಡೆಒಬಡ್ಡಿ ಅವರನ್ನು ಹೊರಗಟ್ಟಿದರು. ಅದಾದ ಕೆಲ ದಿನಗಳ ಮೇಲೆ ಸವರ್ಣೀಯ ಹಿಂದೂಗಳು ಸಂಘಟಿಸಿದ್ದ ಸಾರ್ವಜನಿಕ ಸಭೆಯೊಂದರಲ್ಲಿ ಜೋಶಿಯವರನ್ನು ಥಳಿಸಿದರು. ಅಸ್ಪೃಶ್ಯತೆಯ ಅಮಾನುಶ ಪದ್ಧತಿಯನ್ನು ಪ್ರಶ್ನಿಸಿದ್ದೇ ಅವರ ಅಪರಾಧವಾಗಿತ್ತು.

ಅದೇನಿದ್ದರೂ ಈ ಯಾವ ಅಡೆತಡೆಗಳು, ಜೋಶಿಯವರನ್ನು ಹಿಮ್ಮೆಟ್ಟಿಸಲಿಲ್ಲ, ದೀನ ದಲಿತರ ಹಕ್ಕುಗಳಿಗಾಗಿ ಹೋರಾಡುವ ದೃಢ ಸಂಕಲ್ಪವನ್ನು ಮಾಡಿ ಬಿಟ್ಟಿದ್ದರು. ಎಲ್ಲೇ ಅನ್ಯಾಯ ನಡೆದರೂ ತೊಂದರೆಗೆ ಒಳಗಾದವರ ರಕ್ಷಣೆಗೆ ಅವರು ಧಾವಿಸುತ್ತಿದ್ದರು. ಸಮಾಜದ ನತದೃಷ್ಟರು ಮತ್ತು ಶೋಷಿತರ ಬಗೆಗಿನ ಅನುಕಂಪ, ಮಾನವೀಯತೆಗಳು ಅವರ ವ್ಯಕ್ತಿತ್ವದಲ್ಲೇ ಸೇರಿ ಹೋಗಿದ್ದವು.

ಸ್ವಾತಂತ್ರ್ಯ ಹೋರಾಟದ ಸಂದೇಶವನ್ನು ಜನತೆಗೆ ಮಟ್ಟಿಸುವ ಸಲುವಾಗಿ ೧೯೩೬ರಲ್ಲಿ ಅವರು ಗ್ರಾಮಾಂತರ ಪ್ರದೇಶಗಳಿಗೆ ಪ್ರವಾಸ ಹೋದರು. ಈ ಚಳವಳಿ ಗ್ರಾಮಾಂತರ ಪ್ರದೇಶಗಳಲ್ಲಿನ ಜನರ ಸಮಸ್ಯೆಗಳನ್ನು ಅರಿತುಕೊಳ್ಳಲು ಅದರಲ್ಲೂ ಕುರಿತಾಗಿ ರೈತರು ಮತ್ತು ಕಾರ್ಮಿಕ ವರ್ಗಗಳ ಪರಿಸ್ಥಿತಿಯನ್ನು ಅರಿಯುವ ಅವಕಾಶ ಕಲ್ಪಿಸಿಕೊಟ್ಟಿತು. ಮುಂದಿನ ವರ್ಷಗಳಲ್ಲಿ ಅವರು ತಮ್ಮ ಸೇವೆಯನ್ನು ಈ ಜನಸಮುದಾಯದ ವಿಮೋಚನೆಗಾಗಿ ಮುಡುಪಾಗಿಟ್ಟರು. ೧೯೩೭ರಲ್ಲಿ ಕಾಂಗ್ರೆಸ್ ಸರ್ಕಾರ ಅಧಿಕಾರದಲ್ಲಿದ್ದಾಗಲೇ ಎಸ್.ಎಂ. ಅವರು ರೈತರ ಮೋರ್ಚಾವೊಂದನ್ನು ಸಂಘಟಿಸಿ ರೈತರ ಪರವಾದ, ಪುರೋಗಾಮಿಯಾದ ಒಕ್ಕಲುತನ ಶಾಸನವೊಂದನ್ನು ತರುವಂತೆ ಒತ್ತಾಯಿಸಿದ್ದರು. ಅನಂತರದಲ್ಲಿ ಅವರು ಭೂದಾನ ಚಳವಳಿಯತ್ತ ಆಕರ್ಷಿತರಾದರು. ಈ ಚಳವಳಿ ಗ್ರಾಮಾಂತರದಲ್ಲಿನ ರೈತರ ಜೀವನದಲ್ಲಿ ಮಹತ್ತರ ಬದಲಾವಣೆಯನ್ನು ತರುವುದೆಂದೂ ಅದು ಅವರ ಸಾಮಾಜಿಕ, ಆರ್ಥಿಕ ಪರಿವರ್ತನೆಗೆ ಮಾರ್ಗ ತೋರುವುದೆಂದೂ ಅವರು ದೃಢವಾಗಿ ನಂಬಿದ್ದರು. ಮಹಾರಾಷ್ಟ್ರದಲ್ಲಿ ಭೂದಾನ ಚಳವಳಿಯ ಕಾರ್ಯಭಾರ ಅವರ ನೇತೃತ್ವದಲ್ಲೇ ನಡೆಯಿತು.

## ಕಾರ್ಮಿಕ ನಾಯಕನಾಗಿ

ಎಸ್.ಎಂ. ಜೋಶಿಯವರು ಓರ್ವ ಉಗ್ರ ಹೋರಾಟಗಾರರಾಗಿದ್ದರು. ವಂಚಿತರು ಮತ್ತು ಶೋಷಿತರ ಹಕ್ಕುಗಳ ಹೋರಾಟಗಾರರಾಗಿದ್ದರು. ಹೀಗಾಗಿ ಸಹಜವಾಗಿಯೇ ಕೈಗಾರಿಕಾ ಕಾರ್ಮಿಕರ ಸಮಸ್ಯೆಗಳು ಮತ್ತು ಅವರ ಯೋಗಕ್ಷೇಮ ಅವರ ಅತ್ಯಂತ ಕಾಳಜಿಯ ವಿಷಯಗಳಲ್ಲಿ ಒಂದಾಗಿತ್ತು. ಕಾರ್ಮಿಕರ ಸಮಸ್ಯೆಗಳಿಗಾಗಿ ಅವರು ನಿರಂತರ ಅವಿಶ್ರಾಂತ ಹೋರಾಟ ನಡೆಸಿದರು. ಈ ವರ್ಗದರಿಗಾದ ಅನ್ಯಾಯ, ಅಕ್ರಮಗಳ ವಿರುದ್ಧ ತಮ್ಮದೇ ಆದ ರೀತಿಯಲ್ಲಿ ಹೋರಾಟ ನಡೆಸಿದರು. ಅದೇ ವೇಳೆಗೆ ರಾಷ್ಟ್ರದ ಆಶೋತ್ತರಗಳಿಗೆ ಅವರು ಪರಮೋಚ್ಚ ಸ್ಥಾನ ನೀಡಿದ್ದರು. ಕಾರ್ಮಿಕರಿಗೆ ತಮ್ಮದೇ ಆದ ಹಕ್ಕುಗಳ ಜೊತೆಗೆ ಕರ್ತವ್ಯಗಳು ಇವೇ ಎಂಬುದನ್ನು ಅವರು ಸದಾ ಒತ್ತಿ ಹೇಳುತ್ತಿದ್ದರು. ಕಾರ್ಮಿಕರು ಇದನ್ನು ತಿಳಿದು ನಡೆದರೆ ಕೈಗಾರಿಕಾ ರಂಗದ ಸರ್ವತೋಮುಖ ಪ್ರಗತಿ ಮತ್ತು ರಾಷ್ಟ್ರದ ಅಭ್ಯುದಯ ಸಾಧ್ಯ ಎಂದು ಅವರು ಭಾವಿಸಿದ್ದರು.

೧೯೬೧ ರಲ್ಲಿ ಕೇಂದ್ರ ಸರ್ಕಾರದ ನೌಕರರು ಕೆಲ ಬೇಡಿಕೆಗಳನ್ನು ಮುಂದಿಟ್ಟು ಮುಷ್ಕರ ಹೂಡುವ ಬೆದರಿಕೆ ಹಾಕಿದಾಗ ಜೋಶಿಯವರು ಅದನ್ನು ಬೆಂಬಲಿಸಲಿಲ್ಲ. ಆದರೆ ಸರ್ಕಾರ ನೌಕರರ ಕನಿಷ್ಠ ಬೇಡಿಕೆಗಳಲ್ಲಿ ಒಂದಾದ ಭತ್ಯೆಗೆ ಸಂಬಂಧಿಸಿದ ಬೇಡಿಕೆಯನ್ನು ಕೂಡಾ ಒಪ್ಪಿಕೊಳ್ಳದೆ ಇದ್ದಾಗ ಅವರು ತಾವೇ ಈ ಮುಷ್ಕರದ ನೇತೃತ್ವ ವಹಿಸಿದರು. ಅತ್ಯಂತ ಪ್ರಾಮಾಣಿಕ ಕಾರ್ಮಿಕ ನಾಯಕರೆಂದು ಸರ್ವ ಮಾನ್ಯರಾಗಿದ್ದ ಜೋಶಿಯವರು ರಕ್ಷಣಾ ಖಾತೆಯ ಅಧೀನದಲ್ಲಿದ್ದ ಯುದ್ಧೋಪಕರಣಗಳ ಕಾರ್ಖಾನೆಗಳ ಕಾರ್ಮಿಕರಿಗೆ ನೀಡುತ್ತಿದ್ದ ಸಲಹೆ ಎಂದರೆ 'ಸರ್ಕಾರಕ್ಕೆ ಬೇಡಿಕೆಗಳನ್ನು ಸಲ್ಲಿಸಿ ಗರಿಷ್ಠತಮ ಉತ್ಪಾದನೆಯ ಕಡೆಗೆ ಗಮನವಿಟ್ಟು ದುಡಿಯಿರಿ' ಎಂಬುದೇ ಆಗಿತ್ತು.

ಅದೇ ವೇಳೆಗೆ ಸಾರ್ವಜನಿಕ ಕ್ಷೇತ್ರದ ಅನೇಕ ಪ್ರಮುಖ ಮತ್ತು ಬೃಹತ್ ಕಾರ್ಮಿಕ ಸಂಘಟನೆಗಳ ನಾಯಕರಾಗಿ ಜೋಶಿ ಶ್ರಮಿಸಿದರು. ಆಲ್ ಇಂಡಿಯಾ ಡಿಫೆನ್ಸ್ ಎಂಪ್ಲಾಯಿಸ್ ಫೆಡರೇಷನ್‌ನ ಮಹಾಕಾರ್ಯದರ್ಶಿಯಾಗಿ, ಆಲ್ ಇಂಡಿಯಾ ಸ್ಟೇಟ್ ಬ್ಯಾಂಕ್ ಎಂಪ್ಲಾಯಿಸ್ ಅಸೋಷಿಯೇಷನ್ಸ್ ಅಧ್ಯಕ್ಷರಾಗಿ ಹಾಗೂ ಸ್ಟೇಟ್ ಟ್ರಾನ್ಸ್‌ಪೋರ್ಟ್ ಕಾಮಗಾರ್ ಸಭಾದ ಅಧ್ಯಕ್ಷರಾಗಿ ಅವರು ಕಾರ್ಯ ನಿರ್ವಹಿಸಿದ್ದರು.

## ರಾಷ್ಟ್ರೀಯವಾದಿಯಾಗಿ

ಕೆಲವರು ಎಸ್.ಎಂ. ಜೋಶಿಯವರನ್ನು ಸಂಕುಚಿತ ದೃಷ್ಟಿಯ ಪ್ರಾದೇಶಿಕ ನಾಯಕರೆಂದೇ ಪರಿಗಣಿಸಿದ್ದರು. ಸಂಯುಕ್ತ ಮಹಾರಾಷ್ಟ್ರ ಚಳವಳಿಯಲ್ಲಿ ಅವರು ವಹಿಸಿದ ಪಾತ್ರದಿಂದಾಗಿಯೂ ಈ ಅಭಿಪ್ರಾಯ ವ್ಯಕ್ತವಾಗಿತ್ತೆನ್ನಬಹುದು. ಆದರೆ

ಜೋಶಿಯವರ ವಿಷಯದಲ್ಲಿ ಈ ಹೇಳಿಕೆ ಸರಿಯಲ್ಲ. ಯಾವ ಮಾನದಂಡದಿಂದ ಅಳೆದರೂ ಎಸ್.ಎಂ. ನಿಸ್ಸಂಶಯವಾಗಿ ಅಸಾಧಾರಣ ದರ್ಜೆಯ ಓರ್ವ ರಾಷ್ಟ್ರೀಯವಾದಿಯಾಗಿದ್ದರು.

ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ದಿನದಿಂದಲೇ ಅವರು ಓರ್ವ ಕ್ರಿಯಾಶೀಲ ಸಂಘಟಕರಾಗಿದ್ದರು. ಈ ಕ್ರಿಯಾಶೀಲತೆಯನ್ನು ಅವರು ಬದುಕಿನುದ್ದಕ್ಕೂ ಉಳಿಸಿಕೊಂಡಿದ್ದರು. ಕಾರ್ಮಿಕ ಪರವಾಗಿರಲಿ, ದಲಿತರ ಪರವಾಗಿರಲಿ, ಮಹಿಳೆಯರ ಪರವಾಗಿರಲಿ ಅಥವಾ ರೈತರ ಬಗೆಗಿರಲಿ ಅಂಥ ಎಲ್ಲಾ ಬಳವಳಿಗಳನ್ನು ತಾವೇ ಸ್ವತಃ ಸಂಘಟಿಸಿ ಅವುಗಳಿಗೆ ಸಮರ್ಥ ನೇತೃತ್ವ ನೀಡಿದರು. ದೇಶದ ಏಕತೆ ಮತ್ತು ಸಮಗ್ರತೆಗೆ ಪ್ರತಿಯೊಂದು ವಿಷಯದಲ್ಲೂ ಮತ್ತು ಅದರ ಮೇಲೆ ಪರಿಣಾಮ ಬೀರುವ ಎಲ್ಲಾ ವಿಷಯಗಳಲ್ಲೂ ಅವರು ಅತೀವ ನಿಷ್ಠೆ ತೋರಿಸುತ್ತಿದ್ದರು. ಅದೇ ವೇಳೆಗೆ ಅವರು ಕೋಮು ಸಾಮರಸ್ಯದ ಓರ್ವ ಕಟ್ಟಾ ಪ್ರತಿಪಾದಕರಾಗಿದ್ದರು.

೧೯೬೭ರ ಎಸ್.ಎಂ. ಅವರು ಓರ್ವ ಸಂಸತ್‌ಸದಸ್ಯನ ನೆಲೆಯಲ್ಲಿ ನಾಗಾ ಸಮಸ್ಯೆಯ ಅಧ್ಯಯನ ಮತ್ತು ಅದಕ್ಕೆ ಪರಿಹಾರ ಕಂಡುಕೊಳ್ಳುವ ಸಲುವಾಗಿ ನಾಗಾಲ್ಯಾಂಡ್‌ಗೆ ಭೇಟಿ ನೀಡಿದರು. ೧೯೭೯ ರಲ್ಲಿ ಮತ್ತೊಮ್ಮೆ ಲೋಕನಾಯಕ ಜಯಪ್ರಕಾಶ ನಾರಾಯಣ್ ಅವರ ಆದೇಶದ ಮೇರೆಗೆ ಈ ಸಮಸ್ಯೆಯ ಬಗ್ಗೆ ನಾಗಾ ಮುಖಂಡ ಎ.ಜೆಡ್. ಪಿಜೋ ಇವರ ಜೊತೆ ಚರ್ಚಿಸಲು ಅವರು ಲಂಡನ್‌ಗೆ ಭೇಟಿ ಇತ್ತರು. ಹೀಗೆ ನಾಗಾಲ್ಯಾಂಡ್ ಸಮಸ್ಯೆಗೆ ಅಂತಿಮ ಇತ್ಯರ್ಥ ಕಂಡುಕೊಳ್ಳಲು ಅವರು ತಮ್ಮದೇ ಅದೇ ರೀತಿಯಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿದ್ದರು.

ಗೋವಾ ವಿಮೋಚನಾ ಸಮಿತಿಯ ಸಂಘಟನೆಯಲ್ಲೂ ಎಸ್.ಎಂ. ಜೋಶಿಯವರು ಅಗ್ರ ಪಾತ್ರ ವಹಿಸಿದ್ದರು. ಅವರ ಆಪ್ತ ಒಡನಾಡಿಗಳಾದ ಎನ್.ಜಿ. ಗೋರೆ ಅವರು ಗೋವಾ ವಿಮೋಚನಾ ಹೋರಾಟ ದನೇತೃತ್ವ ವಹಿಸಿದ್ದರು. ಚೀನಾ ದಾಳಿಯ ನಂತರದಲ್ಲಿ ದೇಶವು ಎದುರಿಸಬೇಕಾಗಿ ಬಂದ ಕಠಿಣತಮ ಕಾಲಾವಧಿಯಲ್ಲಿ ಎಸ್.ಎಂ. ಆವರು ತಾವು ಪ್ರತಿಪಕ್ಷದಲ್ಲಿದ್ದರು ಕೂಡಾ ಪ್ರಜಾ ಸೋಷಿಯಲಿಸ್ಟ್ ಪಾರ್ಟಿಯ ಇತರ ಮುಖಂಡರೊಂದಿಗೆ ಸರ್ಕಾರಕ್ಕೆ ಎಲ್ಲಾ ರೀತಿಯ ಬೆಂಬಲ ನೀಡಿದರು. ಅದೇ ವೇಳೆಗೆ ಮಾತೃಭೂಮಿಯ ಹಿತರಕ್ಷಣೆಗಾಗಿ ಇನ್ನು ಹೆಚ್ಚಿನ ತ್ಯಾಗಕ್ಕೆ ಸಿದ್ಧರಾಗಿ ನಿಲ್ಲುವಂತೆ ತಮ್ಮ ಅನುಯಾಯಿಗಳಿಗೆ ಕರೆ ನೀಡಿದರು. ರಾಷ್ಟ್ರದ ಬಗ್ಗೆ, ಅವರಿಗಿದ್ದ ಕಾಳಜಿ ಮತ್ತು ಬಡವರು, ನೊಂದವರು, ನ್ಯಾಯ ವಂಚಿತರು ಹಾಗೂ ದಲಿತ ಸಮುದಾಯದ ಬಗ್ಗೆ ಅವರಿಗಿದ್ದ ಕಳಕಳಿ ಅವರನ್ನು ಇತರೆಲ್ಲ ನಾಯಕರಿಗಿಂತ ಭಿನ್ನರಾಗಿ ನಿಲ್ಲುವಂತೆ ಮಾಡಿತು. ಅದೇ ರೀತಿ ಭಾರತಮಾತೆಯ ನಿಜವಾದ ಸುಪುತ್ರ ಎಂಬುದನ್ನು ತೋರಿಸಿಕೊಟ್ಟಿತು.

೧೯೭೬ರಲ್ಲಿ ಅವರಿಗೆ ೭೦ ವರ್ಷತುಂಬಿದ ಸಂದರ್ಭದಲ್ಲಿ ಜೋಶಿಯವರನ್ನು ಸಾರ್ವಜನಿಕವಾಗಿ ಸನ್ಮಾನಿಸಲಾಯಿತು. ಅವರ ನಿಸ್ವಾರ್ಥ ಸೇವೆಯನ್ನು ಪ್ರಶಂಶಿಸಿ ಎರಡು ಕೃತಿಗಳನ್ನು ಹೊರ ತರಲಾಯಿತು. ಅವರು ವಿವಿಧ ವಿಷಯಗಳ ಮೇಲೆ ವಿವಿಧ ಸಂದರ್ಭಗಳಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಆಯ್ದು ಈ ಸಂದರ್ಭದಲ್ಲಿ ಕೃತಿ ರೂಪದಲ್ಲಿ ಪ್ರಕಟಿಸಲಾಯಿತು.

## ಲೇಖಕರಾಗಿ

ಓರ್ವ ಶ್ರೇಷ್ಠ ವಾಗ್ಮಿ ಹಾಗೂ ಪ್ರಖರ ವಿಚಾರಧಾರೆಯ ಸಮರ್ಥ ವಕ್ತಾರರಾಗಿದ್ದುದರ ಜೊತೆಗೆ ಓರ್ವ ಚಿಂತನ ಶೀಲ ಲೇಖಕರೂ ಆಗಿದ್ದರು. ಸಾರ್ವಜನಿಕ ಜೀವನದ ಆರಂಭದ ದಿನಗಳಿಂದಲೇ ಅವರಿಗೆ ಬರವಣಿಗೆಯ ಖಯಾಲಿ ಇತ್ತು. ವಿದ್ಯಾರ್ಥಿದೆಸೆಯಲ್ಲೇ ಅವರು ಅತ್ಯುಚ್ಚ ಮಟ್ಟದ ಸಾಹಿತ್ಯ ಮೌಲ್ಯಗಳನ್ನು ಒಳಗೊಂಡಿದ್ದ ಅನೇಕ ಲೇಖನಗಳನ್ನು ಕಿರ್ಲೊಸ್ಕರ್ ಪತ್ರಿಕೆಗೆ ಕೊಡುತ್ತಿದ್ದರು.

1939ರ ದಶಕದ ಪ್ರಾರಂಭದಲ್ಲೇ ಕೆಲಕಾಲ ಅವರು 'ಫ್ರೀ ಪ್ರೆಸ್ ಜರ್ನಲ್' ದಿನಪತ್ರಿಕೆಯ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದರು. ಅಂದು ಪುಣೆಯ ಕೌನ್ಸಿಲ್ ಹಾಲ್ ನಲ್ಲಿ ನಡೆಯುತ್ತಿದ್ದ ಮಹಾರಾಷ್ಟ್ರ ವಿಧಾನಪರಿಷತ್ತಿನ ಕಲಾಪಗಳನ್ನು ಅವರು ಪತ್ರಿಕೆಗಳಿಗೆ ವರದಿ ಮಾಡುತ್ತಿದ್ದರು. 'ಪೂನಾ ಡೈಲಿ' ಎಂಬ ಹೆಸರಿನ ಇಂಗ್ಲಿಷ್ ದೈನಿಕವೊಂದರ ಸಂಪಾದಕರಾಗಿಯೂ ಕೆಲಕಾಲ ಕಾರ್ಯ ನಿರ್ವಹಿಸಿದರು. ಅದೇ ರೀತಿ 1958 ರಿಂದ 62 ರವರೆಗೆ 'ಲೋಕಮಿತ್ರ' ಪತ್ರಿಕೆ (ಮುಂಬಯಿಯಿಂದ ಪ್ರಕಟವಾಗುತ್ತಿದ್ದ ಒಂದು ಮರಾಠಿ ದಿನಪತ್ರಿಕೆ) ಗೂ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದರು. ಅದಲ್ಲದೆ ಸಮಾಜವಾದವನ್ನು ಕುರಿತಂತೆ ಅನೇಕ ಮರಾಠಿ ನಿಯತಕಾಲಿಕೆಗಳು ಹಾಗೂ ವಾರ್ತಾ ಪತ್ರಿಕೆಗಳಿಗೆ ಉನ್ನತ ದರ್ಜೆಯ ಅನೇಕ ಲೇಖನಗಳನ್ನು ಅವರು ಬರೆಯುತ್ತಿದ್ದರು. 'ಸೋಷಿಯಲಿಸ್ಟ್ ಕ್ವೆಸ್ಟ್ ಫಾರ್ ರೈಟ್ ಪಾತ್' ಎಂಬುದು ಅವರು ಬರೆದ ಸುಪ್ರಸಿದ್ಧ ಕೃತಿ. ಅದಲ್ಲದೆ ಮರಾಠಿಯಲ್ಲಿ 'ಮಿ ಎಸ್.ಎಂ. ' ಎಂಬ ಹೆಸರಿನಲ್ಲಿ ತಮ್ಮ ಆತ್ಮ ಚರಿತ್ರೆಯನ್ನು ಅವರು ಬರೆದಿರುವರು. ಅದು ೧೯೮೪ರಲ್ಲಿ ಪ್ರಕಟಗೊಂಡಿತು. ಇದಲ್ಲದೆ ಮರಾಠಿಯಲ್ಲಿ 'ಅನಕಿ ವೇಗ್ಲಿ ಮಾನಸೆ' ಎಂಬ ಶೀರ್ಷಿಕೆಯ ಕೃತಿಯೊಂದನ್ನು ರಚಿಸಿದ್ದಾರೆ. ಈ ಕೃತಿಯನ್ನು ಜೋಶಿಯವರು ವಿಧಿವಶರಾದ ಮುನ್ನಾ ದಿನದಂದು ಅವರ ಆಪ್ತ ಸ್ನೇಹಿತ ಎನ್.ಜಿ. ಗೋರೆಯವರೇ ಬಿಡುಗಡೆ ಮಾಡಿದರು.

## ಶ್ರದ್ಧಾಂಜಲಿ

ದೀನದಲಿತರು ಮತ್ತು ಅಸಹಾಯಕರ ಸೇವೆಯಲ್ಲಿ ಅರವತ್ತು ವರ್ಷಗಳನ್ನು ಸವೆಸಿದ ನೂರಾರು ಅವಿಸ್ಮರಣೆಯ ಘಟನೆಗಳ ಅವರ ಬದುಕು, ಮೂಳೆ ಕ್ಯಾನ್ಸರ್‌ನಿಂದಾಗಿ ಎಂಬತ್ತನಾಲ್ಕನೇ ವಯಸ್ಸಿನಲ್ಲಿ ೧೯೮೯ರ ಏಪ್ರಿಲ್ ೧ರಂದು ಪುಣೆಯಲ್ಲಿ ಅಂತ್ಯಗೊಂಡಿತು. ಎಸ್.ಎಂ.ಅವರು ಅಕ್ಷರಶಃ ಸೇವೆ, ನಿಸ್ಪೃಹತೆ, ಸರಳತೆ ಮತ್ತು ಸಮರ್ಪಣಾ ಮನೋಭಾವದ ಪ್ರತೀಕದಂತಿದ್ದರು.

ತಮ್ಮ ಆರು ದಶಕಗಳ ನಿರಂತರ ಸೇವೆಯ ಅವಧಿಯಲ್ಲಿ ಅವರು ಯಾವುದೇ ಸಾರ್ವಜನಿಕ ಅಧಿಕಾರ ಸ್ಥಾನದಲ್ಲಿ ಇಲ್ಲದೇ ಹೋಗಿದ್ದರು. ರಾಷ್ಟ್ರಕ್ಕಾಗಿ ಮತ್ತು ರಾಷ್ಟ್ರದ ಜನತೆಗಾಗಿ ಅವರು ಸಲ್ಲಿಸಿದ ಅಸಾಧಾರಣ ಮತ್ತು ನಿಸ್ವಾರ್ಥ ಸೇವೆಯನ್ನು ಗುರುತಿಸಿ ರಾಜ್ಯಸರ್ಕಾರದ ಎಲ್ಲ ಮರ್ಯಾದೆ ಗೌರವಗಳೊಂದಿಗೆ ಅವರ ಅಂತ್ಯ ಸಂಸ್ಕಾರ ನಡೆಸಲಾಯಿತು. ಅದಾಗಲೇ ಜೋಶಿಯವರು ದೇಶದ ಜನತೆಯ ಹೃದಯಗಳಲ್ಲಿ ಚಿರಸ್ಥಾಯಿಯಾಗಿದ್ದರು. ಇಡೀ ದೇಶ ಅವರ ನಿಧನಕ್ಕೆ ಕಂಬನಿ ಸುರಿಸಿತು. ರಾಷ್ಟ್ರಪತಿಗಳು, ಉಪರಾಷ್ಟ್ರಪತಿಗಳು, ಪ್ರಧಾನಿ, ಸಂಸತ್ತು, ರಾಜ್ಯ ವಿಧಾನ ಮಂಡಲ, ಪತ್ರಿಕೆಗಳು ಮತ್ತು ಜನಜೀವನದ ಎಲ್ಲಾ ಕಾರ್ಯಕ್ಷೇತ್ರಗಳ ಮುಖಂಡರು, ಧುರೀಣರು ಭಾರತದ ಈ ಮಹಾನ್ ಸುಪುತ್ರನ ನಿಧನಕ್ಕಾಗಿ ದುಃಖಿಸಿದರು; ಶ್ರದ್ಧಾಂಜಲಿ ಸಲ್ಲಿಸಿದರು.

ಶ್ರೀ ಎಸ್.ಎಂ. ಜೋಶಿಯವರ ಬಹುಮುಖ ವ್ಯಕ್ತಿತ್ವವನ್ನು ಶ್ಲಾಘಿಸಿ ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರು "ಶ್ರೀ ಜೋಶಿಯವರು ಸರಳ ನಡೆ ಮತ್ತು ಉದಾತ್ತ ಚಿಂತನೆಯ ತತ್ವದ ಸಾಕಾರ ಮೂರ್ತಿಯಾಗಿದ್ದರು. ಅವರು ಸಮಾಜವಾದಿಗಳ ನಡುವಣ ಗಾಂಧೀವಾದಿ ಮತ್ತು ಗಾಂಧೀವಾದಿಗಳ ನಡುವಣ ಸಮಾಜವಾದಿ ಆಗಿದ್ದರು. ಆರೋಗ್ಯಕರ ಕಾರ್ಮಿಕ ಚಳವಳಿಗೆ ಅವರು ನೀಡಿದ ಕೊಡುಗೆಯು ಮುಂಬರುವ ದಿನಗಳಲ್ಲಿ ಬಹುಕಾಲ ಒಂದು ದಾರಿ ದೀಪವಾಗಲಿದೆ" ಎಂದಿದ್ದಾರೆ.

ಅದೇ ರೀತಿ ರಾಜ್ಯಸಭೆಯಲ್ಲಿ ಅಗಲಿದ ಅವರ ಆತ್ಮಕ್ಕೆ ಶ್ರದ್ಧಾಂಜಲಿ ಸಲ್ಲಿಸುತ್ತಾ ಸದನದ ಅಧ್ಯಕ್ಷರಾದ ರಾಷ್ಟ್ರಪತಿ ಡಾ. ಶಂಕರ್‌ದಯಾಳ್ ಶರ್ಮಾ ಅವರು "ಶ್ರೀ ಶ್ರೀಧರ ಮಹಾದೇವ ಜೋಶಿಯವರ ನಿಧನದಿಂದ ಒಂದು ಶಕೆಯೇ ಅಂತ್ಯಗೊಂಡಿದೆ. ಅವರು ಸ್ವಾತಂತ್ರ್ಯಪೂರ್ವದ ಗಾಂಧಿಯುಗ ಮತ್ತು ಸ್ವಾತಂತ್ರ್ಯೋತ್ತರ ಭಾರತದ ಕುರಿತಾಗಿ ಹೇಳುವುದಾದರೆ ಮಹಾರಾಷ್ಟ್ರ ರಾಜಕಾರಣದ ನಡುವಣ ಒಂದು ಅಪೂರ್ವ ಸ್ವರ್ಣರೇಖೆಯಂತಿದ್ದರು.......ಜೋಶಿಯವರ ನಿಧನದಿಂದ ರಾಷ್ಟ್ರವು ಓರ್ವ ಅಪೂರ್ವ ದೇಶಾಭಿಮಾನಿ, ಗಾಂಧೀವಾದಿ ಮತ್ತು ಸಮಾಜವಾದಿಯನ್ನು ಕಳೆದುಕೊಂಡಿದೆ" ಎಂದು

ಬಣ್ಣಿಸಿದರು. ಆಗಿನ ಪ್ರಧಾನಮಂತ್ರಿ ಶ್ರೀ ರಾಜೀವ್ ಗಾಂಧಿಯವರು ಜೋಶಿಯವರ ನಿಧನಕ್ಕೆ ಸಂತಾಪ ಸೂಚಿಸುತ್ತಾ "ಜೋಷಿಯವರ ನಿಧನದಿಂದಾಗಿ ನಾವು ಬಡವರು ಮತ್ತು ದಲಿತಕ ಕ್ಷೇಮ ಚಿಂತನೆಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಓರ್ವ ಮಹಾನ್ ಸ್ವಾತಂತ್ರ್ಯ ಹೋರಾಟಗಾರನನ್ನು ಕಳೆದುಕೊಂಡಿದ್ದೇವೆ... . ದೇಶದ ಪ್ರಗತಿ ಮತ್ತು ಅಭ್ಯುದಯದ ಸಾಧನೆಯ ಧ್ಯೇಯಕ್ಕೆ ಬದ್ಧರಾಗಿದ್ದ ಓರ್ವ ಮಹಾನ್ ರಾಷ್ಟ್ರೀಯವಾದಿಯಾಗಿ ಅವರು ಬಹುಕಾಲ ಜನಮಾನಸದಲ್ಲಿ ಉಳಿಯಲ್ಲಿದ್ದಾರೆ" ಎಂದಿದ್ದಾರೆ.

ಲೋಕಸಭೆಯಲ್ಲಿ ಸ್ಪೀಕರ್ ಡಾ. ಬಲರಾಂ ಜಾಖಡ್ ಅವರು ಜೋಶಿಯವರಿಗೆ ಶ್ರದ್ಧಾಂಜಲಿ ಸಲ್ಲಿಸುತ್ತಾ "ಶ್ರೀ ಜೋಶಿಯವರು ಮೌಲ್ಯಾಧಾರಿತ ರಾಜಕಾರಣದಲ್ಲಿ ದೃಢವಾದ ನಂಬಿಕೆ ಉಳ್ಳವರಾಗಿದ್ದರು. ಸಾಮಾಜಿಕ ನ್ಯಾಯದ ಓರ್ವ ನಿರ್ಭೀತ ಹೋರಾಟಗಾರರಾಗಿದ್ದ ಅವರು ದೀನದಲಿತರು ಮತ್ತು ಹತಭಾಗ್ಯರ ಏಳಿಗೆಗಾಗಿ ಅವಿಶ್ರಾಂತವಾಗಿ ಶ್ರಮಿಸಿದರು. ದೇಶದಲ್ಲಿ ಆರೋಗ್ಯಕರ ಕಾರ್ಮಿಕ ಚಳವಳಿಯೊಂದರ ಉದಯಕ್ಕೆ ಅವರು ನೀಡಿರುವ ಕೊಡುಗೆಯಂತೂ ಮಹತ್ತರವಾದುದು" ಎಂದಿದ್ದಾರೆ.

## ಆಕರಗಳು

**ಕೃತಿಗಳು**

೧. ಸೇನ್ ಮತ್ತು ಎಸ್.ಪಿ (ಸಂಪಾದಕ) ಡಿಕ್ಷನರಿ ಆಫ್ ನ್ಯಾಷನಲ್ ಬಯಾಗ್ರಫೀಸ್ ಸಂಪುಟ ೨ ಕಲ್ಕತ್ತಾ.

ಇನ್ ಸ್ಟಿಟ್ಯೂಡ್ ಆಫ್ ಹಿಸ್ಟಾರಿಕಲ್
ಸ್ಟಡೀಸ್, ೧೯೭೩.

೨. ಎಸ್.ಎಂ. ಜೋಶಿ ಗೌರವ ಗ್ರಂಥ, ೧೯೬೪.

೩. ಹೂ ಈಸ್ ಹೂ ನಾಲ್ಕನೇ ಲೋಕಸಭೆ ೧೯೬೭.

**ದಿನಪತ್ರಿಕೆಗಳು**

೧. ಇಂಡಿಯನ್ ಎಕ್ಸ್‌ಪ್ರೆಸ್ ನವದೆಹಲಿ ಏಪ್ರಿಲ್ ೨, ೧೯೮೯.

೨. ದಿ ಟೈಮ್ಸ್ ಆಫ್ ಇಂಡಿಯಾ (ನವದೆಹಲಿ) ಏಪ್ರಿಲ್ ೨, ೧೯೮೯.

೩. ದಿ ಸ್ಟೆಟ್ಸ್‌ಮನ್ (ನವದೆಹಲಿ) ಏಪ್ರಿಲ್ ೨, ೧೯೮೯.

೪. ದಿ ಫ್ರೀ ಪ್ರೆಸ್ ಜರ್ನಲ್ (ಮುಂಬಯಿ) ಏಪ್ರಿಲ್ ೨, ೧೯೮೯.

೫. ದಿ ನ್ಯಾಷನಲ್ ಹೆರಾಲ್ಡ್ (ನವದೆಹಲಿ) ಏಪ್ರಿಲ್ ೨, ೧೯೮೯.

**ಚರ್ಚೆಗಳು**

ಲೋಕಸಭೆಯ ಚರ್ಚೆಗಳು

ರಾಜ್ಯಸಭೆಯ ಚರ್ಚೆಗಳು

## ಭಾಗ ಎರಡು

## ಲೇಖನಗಳು

### ಎಸ್.ಎಂ. ಜೋಶಿ ಒಂದು ಶ್ರದ್ಧಾಂಜಲಿ - ರಬಿರಾಯ್*

ಓರ್ವ ರಾಜಕೀಯ ನೇತಾರರಾಗಿ ಮತ್ತು ಸಮಾಜವಾದದ ಓರ್ವ ಸಿದ್ಧಾಂತಿಯಾಗಿ ಶ್ರೀ ಎಸ್.ಎಂ. ಜೋಶಿಯವರು ಜನಮಾನಸದಲ್ಲಿ ಚಿರಸ್ಥಾಯಿಯಾಗಿ ಉಳಿಯಲಿದ್ದಾರೆ. ಅವರು ಅತ್ಯಂತ ಸಹೃದಯಿ ಮತ್ತು ಜೀವನದ ಉದಾತ್ತ ಮೌಲ್ಯಗಳನ್ನು ಅಳವಡಿಸಿಕೊಂಡಿದ್ದ ಓರ್ವ ಸಮಗ್ರ ವ್ಯಕ್ತಿಯಾಗಿದ್ದರು. ಅಧುನಿಕ ದೃಷ್ಟಿಕೋನ ಮತ್ತು ವೈಜ್ಞಾನಿಕ ಮನೋಭಾವಗಳೆರಡೂ ಮೇಳವಿಸಿದ್ದ ಉದಾತ್ತ ವ್ಯಕ್ತಿತ್ವದಿಂದಾಗಿ ಅವರು ಓರ್ವ ಚಿಂತಕ ಹಾಗೂ ಅತ್ಯಂತ ಜನಪ್ರಿಯ ನೇತಾರರೆನಿಸಿದ್ದರು. ತಮ್ಮ ಸ್ನೇಹಿತರು ಮತ್ತು ಅಭಿಮಾನಿಗಳ ನಡುವೆ ಎಸ್.ಎಂ. ಎಂದೇ ಚಿರಪರಿಚಿತರಾಗಿದ್ದ ಜೋಶಿಯವರು ಓರ್ವ ರಾಜಕೀಯ ಕ್ರಾಂತಿಕಾರರಾಗಿ ತಮ್ಮ ಜೀವನದುದ್ದಕ್ಕೂ ಸಮಾಜದಲ್ಲಿನ ದೀನದಲಿತರ ಆಶೋತ್ತರಗಳಿಗೆ ಪ್ರತೀಕವಾಗಿ ನಿಂತಿದ್ದರು. ಅವರ ಜೀವನವೆಂದರೆ ಅನೇಕ ಚಳವಳಿಗಳ, ಹೋರಾಟಗಳ ಒಂದು ಸರಣಿಯಾಗಿತ್ತು. ವಸ್ತುತಃ ಅವರು ಭಾರತದಲ್ಲಿನ ಸಮಾಜವಾದಿ ಚಳವಳಿಯ ಸಂಕೇತವಾಗಿದ್ದರು. ಶ್ರೀ ಜಯಪ್ರಕಾಶ್ ನಾರಾಯಣ್ ಅವರು ಜೋಶಿಯವರನ್ನು ಕುರಿತು:

"ಎಸ್.ಎಂ. ಅವರ ಹಿರಿಮೆ ಅವರ ಗಾಢವಾದ ಮಾನವೀಯತೆಯಲ್ಲಿದೆ. ಜೀವನದ ಮೌಲ್ಯಗಳ ಬಗ್ಗೆ ಅವರಿಗಿದ್ದ ಅಪಾರವಾದ ಕಾಳಜಿ, ಅವರ ಪ್ರಾಮಾಣಿಕತೆ ಮತ್ತು ಸರಳತೆ, ಅಸಹಾಯಕರು ಮತ್ತು ದೀನದಲಿತರೊಂದಿಗೆ ಗುರುತಿಸಿಕೊಳ್ಳುವುದು ಅವರ ವ್ಯಕ್ತಿತ್ವದಲ್ಲಿದೆ. ಅಂತಹ ಮಹಾನ್ ವ್ಯಕ್ತಿಯೊಬ್ಬನನ್ನು ಅರಿತಿರುವುದು ಯಾರಿಗಾದರೂ ಒಂದು ಅತೀವ ಸಂತಸದ ಸಂಗತಿಯಾಗಿದೆ, ಅದೊಂದು ಸೌಭಾಗ್ಯವಾಗಿದೆ."

ಎಸ್.ಎಂ. ಅವರು ಶ್ರೀ ಜಯಪ್ರಕಾಶ್ ನಾರಾಯಣ್, ಡಾ. ರಾಮ ಮನೋಹರ ಲೋಹಿಯಾ, ಡಾ. ಸಂಪೂರ್ಣಾನಂದ, ಯೂಸುಫ್ ಮೆಹರುಲಿ, ಶ್ರೀ ಅಶೋಕ್ ಮೆಹ್ತಾ ಮತ್ತು ಆಚಾರ್ಯ ನರೇಂದ್ರ ದೇವ್ ಅವರ ಜತೆ (1934 ರಲ್ಲಿ) ಕಾಂಗ್ರೆಸ್ ಸೋಷಿಯಲಿಸ್ಟ್ ಪಾರ್ಟಿಯ ಸಂಸ್ಥಾಪಕ ಸದಸ್ಯರಾಗಿದ್ದರು. ಮಹಾರಾಷ್ಟ್ರದ ಸುಪ್ರಸಿದ್ಧ ರಾಜಕೀಯ ಚಿಂತಕರಲ್ಲಿ ಒಬ್ಬರಾಗಿದ್ದ ಆಚಾರ್ಯ ಜವಡೇಕರ್ ಅವರ ಸಿದ್ಧಾಂತವನ್ನು ಸ್ವೀಕರಿಸುವವರೆಗೆ ಅವರು ಮಾರ್ಕ್ಸ್‌ವಾದದಲ್ಲಿ ಅಚಲ ನಂಬಿಕೆ ಉಳ್ಳವರಾಗಿದ್ದರು. ಈ ವೇಳೆಗೆ ಅವರು ಮಾವೋ ಸಿದ್ಧಾಂತದ ಇತಿಮಿತಿಗಳನ್ನು ಮನಗಂಡಿದ್ದರು. ಹೀಗಾಗಿ ಮಾರ್ಕ್ಸ್‌ವಾದದ ತೀವ್ರಗಾಮಿತ್ವ ಮತ್ತು ಮಹಾತ್ಮಾ ಗಾಂಧೀಜಿ ಅವರ ಬೋಧನೆಗಳನ್ನು ಸಮೀಕರಿಸಬೇಕೆಂದು

---

* ರಬಿರಾಯ್ ಅವರು ಸಂಸತ್ ಸದಸ್ಯರು ಮತ್ತು ಲೋಕಸಭೆಯ ಮಾಜಿ ಸ್ಪೀಕರ್.

ಪ್ರತಿಪಾದಿಸತೊಡಗಿದ್ದರು. 'ಗಾಂಧಿವಾದದಲ್ಲಿ ಎಲ್ಲವೂ ಕ್ರಮಾಗತವಾಗಿ ನಡೆಯಬೇಕು ಹಾಗಾಗಿ ಅದು ಮಂದಾಗಿಮಿಯಾಗಿದೆ ಎಂಬುದನ್ನು ನಾವು ನೆನಪಿಸಬೇಕು. ಆದರೆ ನಿರ್ದಿಷ್ಟ ಗುರಿಯನ್ನು ಸಾಧಿಸಲು ನಾವು ಹೆಚ್ಚು ಗತಿಶೀಲರಾಗಿ ಮತ್ತು ಕ್ರಾಂತಿಕಾರಿಗಳಾಗಿ ಮುಂದುವರೆಯುವುದು ಇಂದಿನ ಅಗತ್ಯವಾಗಿದೆ' ಎಂದು ಅವರು ಪ್ರತಿಪಾದಿಸಿದ್ದನ್ನು ಇಲ್ಲಿ ಸ್ಮರಿಸಬೇಕು.

ಬಹುಮುಖ ವ್ಯಕ್ತಿತ್ವದ ಎಸ್.ಎಂ. ಅಂಥ ನೇತಾರರ ಮನೋಗತಿ, ಜೀವನ ವಿಧಾನ ಮತ್ತು ಸಂದೇಶವನ್ನು ಸ್ಮರಿಸುವುದು ಪ್ರತಿಯೊಬ್ಬರಿಗೂ ಅಪ್ಯಾಯಮಾನವಾದ ಅನುಭವವಾಗಿದೆ. ಅವರು ಓರ್ವ ಸಮಾಜವಾದಿ ಮಾತ್ರವೇ ಅಲ್ಲ, ಪಾರದರ್ಶಕ ಪ್ರಾಮಾಣಿಕತೆ ಮತ್ತು ಉನ್ನತ ಚಾರಿತ್ರ್ಯದ ಓರ್ವ ಮಹಾನ್ ರಾಜಕೀಯ ನೇತಾರರೂ ಆಗಿದ್ದರು. ಕಟ್ಟಾ ರಾಷ್ಟ್ರೀಯವಾದಿಯಾಗಿದ್ದರು. ಅರ್ಪಣಾ ಮನೋಭಾವದ ಕಾರ್ಮಿಕ ಧುರೀಣರೂ ಆಗಿದ್ದರು. ಇವೆಲ್ಲಕ್ಕಿಂತ ಹೆಚ್ಚಾಗಿ ಜನತಂತ್ರ, ಜಾತ್ಯಾತೀತತೆ, ಸಮಾಜವಾದ ಮತ್ತು ಮಾನವತಾವಾದದ ಮಹೋನ್ನತ ಆದರ್ಶಗಳಿಗೆ ತಮ್ಮ ಬಾಳನ್ನು ಸಮರ್ಪಿಸಿಕೊಂಡ ಓರ್ವ ಮಹಾನ್ ಆದರ್ಶವಾದಿಯಾಗಿದ್ದರು.

ಎಸ್.ಎಂ. ಜೋಶಿ ಓರ್ವ ಸಂಗಾತಿಯಾಗಿ (ಕಾಮ್ರೇಡ್) ನನಗೆ ಪರಿಚಿತರು, ವೈಯಕ್ತಿಕವಾಗಿಯೂ ತೀರಾ ಆತ್ಮೀಯರು. ಯುವಕರ ಸ್ವಯಂ ಸೇವಾ ಸಂಘಟನೆಯಾಗಿದ್ದ ರಾಷ್ಟ್ರ ಸೇವಾದಳ (ಆರ್.ಎಸ್.ಡಿ) ಅವರ ಸ್ಫೂರ್ತಿದಾಯಕ ನಾಯಕತ್ವದಲ್ಲಿ ಸಮಾಜವಾದಿ ಚಳವಳಿಗೆ ಮಹತ್ತರವಾದ ಕೊಡುಗೆಯನ್ನು ನೀಡಿತು. ೧೯೩೫ರ ನಂತರದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ (ಆರ್.ಎಸ್.ಎಸ್) ಪ್ರಭಾವವನ್ನು ತಡೆಹಿಡಿಯುವಲ್ಲಿ ಅದು ಯಶಸ್ವಿಯಾಯಿತು. 1930ರಲ್ಲಿ ಅವರು ರಾಷ್ಟ್ರ ಸೇವಾದಳದ ಅಧ್ಯಕ್ಷರಾದರು. ಅನಂತರದ ದಿನಗಳಲ್ಲಿ ಜಾತ್ಯಾತೀಕ ದೃಷ್ಟಿಕೋನ ಮತ್ತು ರಚನಾತ್ಮಕ ನಿಲುವಿನಿಂದಾಗಿ ಈ ಸಂಘಟನೆ ಅತ್ಯಂತ ಜನಪ್ರಿಯವಾಯಿತು. ಸಮಾಜವಾದಿಗಳು ಕಾಂಗ್ರೆಸ್‌ನ್ನು ಬಿಟ್ಟು ಹೊರಹೋಗಲು ತೀರ್ಮಾನಿಸಿದ ಮೇಲೆ ಮತ್ತು 1948ರ ಏಪ್ರಿಲ್‌ನಲ್ಲಿ ನಾಸಿಕ್‌ನಲ್ಲಿ ನಡೆದ ಸೋಷಿಯಲಿಸ್ಟ್ ಪಾರ್ಟಿ ಸಮ್ಮೇಳನದ ನಂತರದಲ್ಲಿ ಎಸ್.ಎಂ. ಅವರು ಹೊಸ ಪಕ್ಷದ ಮಹಾರಾಷ್ಟ್ರ ಘಟಕದ ಅಧ್ಯಕ್ಷರಾಗಿ ಆಯ್ಕೆಯಾದರು. 1963-64ರಲ್ಲಿ ಅವರು ಪ್ರಜಾ ಸೋಷಿಯಲಿಸ್ಟ್ ಪಕ್ಷದ (ಪಿ.ಎಸ್.ಪಿ) ಚುನಾಯಿತ ಅಧ್ಯಕ್ಷರಾದರು. ೧೯೬೪ರಲ್ಲಿ ಅವರು ಸಂಯುಕ್ತ ಸೋಷಿಯಲಿಸ್ಟ್ ಪಾರ್ಟಿ (ಎಸ್.ಎಸ್.ಪಿ) ಅಧ್ಯಕ್ಷರಾದರು. ೧೯೬೭ರಲ್ಲಿ ಸಂಸತ್ ಸದಸ್ಯರಾಗಿ ಚುನಾಯಿತರಾದರು.

ಸಂಸತ್ ಸದಸ್ಯ ಎಸ್.ಎಂ. ಅವರು ಜನನಾಯಕರಾಗಿ ಅಪಾರ ಜನಪ್ರಿಯತೆ ಗಳಿಸಿದರು. ಸಂಸತ್ತಿನಲ್ಲಿ ರಾಷ್ಟ್ರಪತಿಗಳ ಭಾಷಣದ ಮೇಲಿನ ಚರ್ಚೆಯಾಗಿರಲಿ,

ಮಹಾರಾಷ್ಟ್ರದಲ್ಲಿನ ಭೂ ಸುಧಾರಣಾ ಚಳವಳಿ ಕುರಿತ ವಾದ ವಿವಾದಗಳಾಗಿರಲಿ, ಪರಿಶಿಷ್ಟ ಜಾತಿ ಮತ್ತು ಪಂಗಡಳಿಗೆ ಸಂಬಂಧಿಸಿದ ಪ್ರಶ್ನೆಗಳ ಮೇಲಣ ಚರ್ಚೆಗಳಾಗಿರಲಿ ೧೯೬೭ರ ಅಕ್ರಮ ಚಟುವಟಿಕೆಗಳು (ತಡೆ) ಮಸೂದೆ ಮೇಲಿನ ಚರ್ಚೆಗಳಾಗಲಿ ಅಥವಾ ೧೯೬೯ರಲ್ಲಿ ಲೋಕಸಭೆಯಲ್ಲಿ ಅಂಗೀಕೃತವಾದ ತಿದ್ದುಪಡಿಗಳ ಮೇಲೆ ನಡೆದ ಚರ್ಚೆಗಳಿರಲಿ ಇಂಥ ಎಲ್ಲ ಸಂದರ್ಭಗಳಲ್ಲೂ ಅವರು ಓರ್ವ ಸಮರ್ಥ ವಕ್ತಾರರಾಗಿ ಕಾರ್ಯನಿರ್ವಹಿಸಿದ್ದರು. ಜನರ ಪ್ರಜಾಸತ್ತಾತ್ಮಕ ಹಕ್ಕುಗಳ ವಿಷಯದಲ್ಲಿ ಅವರು ಎಂದೂ ರಾಜಿ ಮಾಡಿಕೊಳ್ಳಲು ಸಿದ್ಧರಿರಲಿಲ್ಲ. ಪರಿಶಿಷ್ಟ ಜಾತಿ ಮತ್ತು ಪಂಗಡಗಳನ್ನು ಕುರಿತಂತೆ ಸರ್ಕಾರದ ಮನೋವೃತ್ತಿಯನ್ನು ಜೋಶಿ ಕಟುವಾಗಿ ವಿಮರ್ಶಿಸುತ್ತಿದ್ದರು.

ರಾಜಕೀಯ ಅಧಿಕಾರವನ್ನು ಜನರ ಕೈಗೆ ಹಸ್ತಾಂತರಿಸುವ ಪ್ರಕ್ರಿಯೆಯ ಪ್ರಾರಂಭದಲ್ಲಿ ಸಂಸದೀಯ ಜನತಂತ್ರ ವ್ಯವಸ್ಥೆ ಒಂದು ತಳಪಾಯದಂತೆ ಕಾರ್ಯ ನಿರ್ವಹಿಸಬೇಕೆಂದು ಅವರು ಬಯಸಿದ್ದರು.

“ಸಂಸತ್ತು ನಿಜವಾಗಿಯೂ ಒಂದು ಬರಡು ನೆಲವಾಗಿದೆ. ಭಾರತದಲ್ಲೂ ಅದರ ಸ್ವಭಾವ ಬದಲಾದೀತೆಂದು ನಾನು ಭಾವಿಸುವುದಿಲ್ಲ. ಆದರೆ ನಮ್ಮ ಸಂಸತ್ತು ಬರಡು ನೆಲವಾಗಿಯೇ ಉಳಿಯಲಿ. ಯಾವ ಕಾರಣಕ್ಕೂ ಅದು ಕುಪುತ್ರನಿಗೆ ಜನ್ಮ ನೀಡುವುದು ಬೇಡ ಎಂಬ ಹಾರೈಕೆಯೊಂದಿಗೆ ನಾನು ಜೀವಿಸಿದ್ದೇನೆ. ಅಂತೂ ಸಂಸತ್ತಿನ ದನಿಯು ದೇಶದ ಜನತೆಯ ಧ್ವನಿಯಾಗಿರಬೇಕೇ ಹೊರತು ಬಾಡಿಗೆಗೆ ಪಡೆದ ಮತದಾರರ ದನಿಯಲ್ಲ. ಅದನ್ನು ಖಾತ್ರಿಪಡಿಸಲು ನಾನು ಅನೇಕ ಮಾರ್ಗಗಳನ್ನು ನಿಮಗೆ ಸೂಚಿಸುತ್ತೇನೆ. ನಾನು ಭಾರತಕ್ಕೆ ಗರಿಷ್ಠತಮ ಪ್ರಯೋಜನ ಲಭ್ಯವಾಗುವಂತಹ ವ್ಯವಸ್ಥೆಯೊಂದನ್ನು ಎದುರು ನೋಡುತ್ತಿದ್ದೇನೆ” ಎಂಬ ಗಾಂಧೀಜಿಯವರ ಮಾತನ್ನು ಎಸ್.ಎಂ. ಜೋಶಿಯವರು ದೃಢವಾಗಿ ನಂಬಿದ್ದರು. ಇದೇ ಸಂದರ್ಭದಲ್ಲಿ ಎಸ್.ಎಂ. ಅವರು ಜನತಂತ್ರವನ್ನು ಇನ್ನು ಹೆಚ್ಚು ವಾಸ್ತವವಾಗಿ ಕಾರಗೊಳ್ಳಲು, ಅಂದರೆ ದೇಶದ ವ್ಯವಹಾರಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಅತ್ಯಂತ ಪರಿಣಾಮಕಾರಿ ಪಾತ್ರ ವಹಿಸಲು ಸಾಧ್ಯವಾಗುವಂತೆ ವ್ಯವಸ್ಥೆಯನ್ನು ಸದೃಢಗೊಳಿಸಲು ಅಪೇಕ್ಷಿಸಿದ್ದರು. ಸಂಸತ್ತು ಕಾಟಾಚಾರದ ಒಂದು ಸಂಸ್ಥೆಯಾಗಿರುವುದನ್ನು ಅವರು ಎಂದೂ ಬಯಸಿರಲಿಲ್ಲ. ನನಗೀಗ ೧೯೧೮ರಲ್ಲಿ ಮಹಾತ್ಮಾಗಾಂಧೀಜಿಯವರು ಜನತಂತ್ರದ ವಿಷಯದಲ್ಲಿ ತಾವು ಹೊಂದಿದ್ದ ಅಭಿಪ್ರಾಯವನ್ನು ಕುರಿತಂತೆ ಸಿ.ಎಫ್. ಅಂಡ್ರೂಸ್ ಅವರಿಗೆ ಬರೆದ ಪತ್ರವೊಂದು ನೆನಪಿಗೆ ಬರುತ್ತದೆ. “ನಾನು ಯಾವುದೇ ಸರ್ಕಾರವನ್ನು ನಂಬುವುದಿಲ್ಲ. ಆದರೆ ಸಂಸದೀಯ ಸರ್ಕಾರವು ಬಹುಶಃ ಸೈನ್ಯಾಧಿಕಾರಿ ಆಡಳಿತಕ್ಕಿಂತ ಹೆಚ್ಚು ಉತ್ತಮವಾಗಿದೆ ಎಂದು ಭಾವಿಸುತ್ತೇನೆ” ಎಂದಿದ್ದರು. ಎಸ್.ಎಂ. ಅವರು ಒಂದಿಷ್ಟೂ ಅಹಮಿಕೆ ಇಲ್ಲದ ಸಜ್ಜನರಾಗಿದ್ದರು. ಎಲ್ಲ

ವರ್ಗಗಳಿಗೂ ಅವರು ಅಷ್ಟೊಂದು ಆಪ್ತರಾಗಲು, ಪ್ರಿಯರಾಗಲು ಅವರ ಸರಳತೆ, ಸುಲಭವಾಗಿ ಜನರ ಕೈಗೆ ಅವರು ಸಿಗುತ್ತಿದ್ದು, ಅವರ ಸ್ನೇಹಪರ ನಡವಳಿಕೆ, ಹಾಸ್ಯಪ್ರವೃತ್ತಿ ಮತ್ತು ಸಮಯೋಚಿತ ನಡವಳಿಕೆಗಳೇ ಕಾರಣವಾಗಿದ್ದವು.

ಎಸ್.ಎಂ. ಅವರು ಅಂದಿನ ಹಿರಿಯ ಧುರೀಣರಾಗಿದ್ದ ಎನ್.ಜಿ. ಗೋರೆ, ರಾಮಮನೋಹರ ಲೋಹಿಯಾ, ಯೂಸುಫ್ ಮೆಹರುಲಿ, ಅಶೋಕ ಮೆಹ್ತಾ, ಅಚ್ಯುತ್ ಪಟವರ್ಧನ್ ಅವರ ಅತ್ಯಂತ ನಿಕಟವರ್ತಿಗಳಾಗಿದ್ದರು. ಜಯಪ್ರಕಾಶನಾರಾಯಣ್ ಅವರು ಜೋಶಿ ಅವರನ್ನು ಕಾಂಗ್ರೆಸ್ ಸೋಷಿಯಲಿಸ್ಟ್ ಪಾರ್ಟಿಯಲ್ಲಿನ ಆರಂಭದ ಮತ್ತು ಅತ್ಯಂತ ಆತ್ಮೀಯ ಒಡನಾಡಿಗಳಲ್ಲಿ ಒಬ್ಬರಾಗಿದ್ದಾರೆಂದು ವರ್ಣಿಸಿದ್ದಾರೆ. ಸಂಸತ್ತಿನಲ್ಲಿ ನಡೆಯುತ್ತಿದ್ದ ಚರ್ಚೆಯ ವೇಳೆಯಲ್ಲಿ ಅವರು ವ್ಯಕ್ತಪಡಿಸುತ್ತಿದ್ದ ನೇರ ಮತ್ತು ನಿರ್ಭೀತಿಯ ಅಭಿಪ್ರಾಯಗಳಿಂದಾಗಿ ಅವರು ಇತರ ರಾಜಕೀಯ ಪಕ್ಷಗಳಿಗೆ ಸೇರಿದ ಸದಸ್ಯರಿಗೂ ಅತ್ಯಂತ ನಿಕಟರಾಗಿದ್ದರು.

## ಸಾಮಾಜಿಕ ಕಾರ್ಯಕರ್ತರಾಗಿ

ಜೋಶಿಯವರು ಅನೇಕ ಸಾರ್ವಜನಿಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರು. ಭೂರಹಿತರು ಮತ್ತು ಸಣ್ಣ ರೈತರ ಅತ್ಯಂತ ಬಲಿಷ್ಠ ಮತ್ತು ಶಕ್ತಿಶಾಲಿ ಸಂಘಟನೆಯೊಂದನ್ನು ಕಟ್ಟುವಲ್ಲಿ ಅವರು ಅಪಾರ ಶ್ರಮ ವಹಿಸಿದ್ದರು. ಸಮಾಜದ ಈ ನ್ಯಾಯವಂಚಿತ ಸಮುದಾಯದವರಿಗೆ ಉದ್ಯೋಗ ಮತ್ತು ಇತರ ಸೌಕರ್ಯಗಳನ್ನು ಒದಗಿಸುವಂತೆ ಸರ್ಕಾರದ ಮೇಲೆ ಒತ್ತಡ ಹೇರಲು ಅವರು ಬಲಿಷ್ಠವಾದ ಸಾಂಸ್ಥಿಕ ಚೌಕಟ್ಟೊಂದನ್ನು ಕಟ್ಟಿದರು. ಆಗ ಅಸ್ತಿತ್ವದಲ್ಲಿದ್ದ ಸಾಮಾಜಿಕ, ಆರ್ಥಿಕ ಸಂರಚನೆಯಲ್ಲಿ ಸದಾ ಎರಡನೇ ದರ್ಜೆ ಪ್ರಜೆಗಳಾಗಿ ಪರಿಗಣಿಸಲ್ಪಡುತ್ತಿದ್ದ ಈ ಅದೃಷ್ಟಹೀನ ಜನರಿಗೆ ಹೋರಾಟದ ಸಾಮರ್ಥ್ಯವನ್ನು ನೀಡಲು ಮತ್ತು ತಮ್ಮ ಬೇಡಿಕೆಗಳ ಬಗ್ಗೆ ಚೌಕಾಶಿ ನಡೆಸಿ ಅವುಗಳನ್ನು ಈಡೇರಿಸಿಕೊಳ್ಳುವ ಶಕ್ತಿಯನ್ನು ಗಳಿಸಲು ಇದು ಅತ್ಯಗತ್ಯ ಎಂದು ಅವರು ಭಾವಿಸಿದ್ದರು. ಜಾತಿವಾದ ಮತ್ತು ಕೋಮುವಾದಗಳಂತಹ ಸಾಮಾಜಿಕ ಅನಿಷ್ಟಗಳ ವಿರುದ್ಧವೂ ಅವರು ದಿಟ್ಟ ಹೋರಾಟ ನಡೆಸಿದರು.

"ಕೋಮುವಾದವು ನಮ್ಮ ಸಾಮಾಜಿಕ, ರಾಜಕೀಯ ವ್ಯವಸ್ಥೆಯ ಒಂದು ಕ್ಯಾನ್ಸರ್ ಗೆಡ್ಡೆಯಂತಿದೆ ಎಂದು ನಾನು ಭಾವಿಸಿದ್ದೇನೆ. ವ್ಯವಸ್ಥಿತವಾದ ಸಾಂಸ್ಥಿಕ ಚೌಕಟ್ಟು ಇಲ್ಲದ ಯಾವುದೇ ರಾಜಕೀಯ ವ್ಯವಸ್ಥೆಯಾದರೂ ಶಿಥಿಲಗೊಳ್ಳುವುದು ನಿಶ್ಚಿತ. ಅಂತಹ ರಾಜಕೀಯ ವ್ಯವಸ್ಥೆ ಬಹುಕಾಲ ಬಾಳಲಾರದು, ಅಲ್ಪಸಂಖ್ಯಾತರ ಸಮಸ್ಯೆಗಳನ್ನು ತಿಳಿದುಕೊಳ್ಳಲು ಮತ್ತು ಅವುಗಳಿಗೆ ಪರಿಹಾರ ಕಂಡುಕೊಳ್ಳಲು ರಾಜಕೀಯ ಪಕ್ಷಗಳು ಬೇರೆ ಬೇರೆ ಹಂತಗಳಲ್ಲಿ

ಅಲ್ಪಸಂಖ್ಯಾತರ ವಿಭಾಗಗಳನ್ನು ಸ್ಥಾಪಿಸುವಂತೆ ಸಮಾಜ ಸುಧಾರಣೆ ಹಾಗೂ ಆರ್ಥಿಕ ಅಭಿವೃದ್ಧಿಯ ವರ್ತುಲಗಳಲ್ಲಿ ಅಂಥವರ ಪರಿಸ್ಥಿತಿಯ ಸುಧಾರಣೆಗೆ ಅವರ ಏಳಿಗೆಗಾಗಿನ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಅವು ಹೇಗೆ ಸಹಾಯಕವಾಗುತ್ತವೆ" ಎಂಬುದನ್ನು ಎಸ್.ಎಂ. ಅವರು ಪ್ರತಿಪಾದಿಸುತ್ತಿದ್ದುದು ಈಗಲೂ ನನ್ನ ನೆನಪಿನಲ್ಲಿ ಅಚ್ಚಳಿಯದೇ ಉಳಿದಿದೆ.

ಎಸ್.ಎಂ. ಅವರು ತಾವೇ ಒಂದು ಸಂಸ್ಥೆಯಂತಿದ್ದರು. ಅವರು ಅತ್ಯಂತ ಪ್ರಭಾವಶಾಲಿ ವ್ಯಕ್ತಿತ್ವವನ್ನು ಹೊಂದಿದ್ದರು. ಪೂರ್ಣಿಯಾ ಜಿಲ್ಲೆಯಲ್ಲಿನ ಕೃಷಿ ಕಾರ್ಮಿಕರ ಪರವಾಗಿ ಅವರು ಹೋರಾಡಿದ ರೀತಿ, ದೀನ ದಲಿತರು ಮತ್ತು ಮಾನವೀಯ ಮೌಲ್ಯಗಳ ಬಗ್ಗೆ ಅವರಿಗಿದ್ದ ಕಳಕಳಿ ಹಾಗೂ ಬದ್ಧತೆ, ಭಾರತೀಯ ಪರಂಪರೆ ಸಂಪ್ರದಾಯಗಳ ಬಗೆಗೆ ಅವರಲ್ಲಿದ್ದ ಅಪಾರ ಗೌರವ, ಮಹಿಳೆಯರ ವಿಷಯದಲ್ಲಿ ಅವರಿಗೆ ಇದ್ದ ಗೌರವಾದರಗಳು ಅವರನ್ನು ಅತ್ಯಂತ ಗೌರವಾನ್ವಿತ ವ್ಯಕ್ತಿಯನ್ನಾಗಿ ಮಾಡಿತು. ಬುದ್ಧಿಜೀವಿಗಳು ಮತ್ತು ವಿದ್ವಾಂಸರ ವಲಯದಲ್ಲೂ ಅವರು ಆದರಣೀಯರಾಗಿದ್ದರು. ಜನಸಾಮಾನ್ಯರ ವಿಷಯದಲ್ಲಿ ಅವರಿಗಿದ್ದ ಕಾಳಜಿ ಅಪಾರ. ತಮ್ಮ ಇಡೀ ಜೀವಮಾನವನ್ನು ಬಡವರ ಸಮಸ್ಯೆಗಳ ಪರಿಹಾರಕ್ಕಾಗಿಯೇ ಅವರು ಮೀಸಲಿಟ್ಟಿದ್ದರು.

"ನಾವಿಂದು ಸಮರಕ್ಕೆ ಸನ್ನದ್ಧರಾಗಿ ನಿಂತಿದ್ದೇವೆ. ಪ್ರಜಾಸತ್ತಾತ್ಮಕ ವಿಧಾನಗಳಲ್ಲಿ ಮತ್ತು ಗಾಂಧೀವಾದದಲ್ಲಿ ನಂಬಿಕೆ ಇರಿಸಿ ದಲಿತರು ಮತ್ತು ಹಸಿದ ಜನ ಸಮುದಾಯದ ಜೊತೆಗೆ ನಿಲ್ಲಬೇಕಾಗಿದೆ. ಲೋಕಸಭಾ ಚುನಾವಣೆಗಳ ಸಂದರ್ಭದಲ್ಲಿ ಪಕ್ಷ ಮುಂದಿಟ್ಟ, ಐತಿಹಾಸಿಕ ಪ್ರಣಾಳಿಕೆಯಲ್ಲಿ ನೀಡಿದ್ದ ಆಶ್ವಾಸನೆಗಳನ್ನು ಈಡೇರಿಸುವ ದಿಸೆಯಲ್ಲಿ ನಾವಿಂದು ಮುಂದಾಗಬೇಕಾಗಿದೆ" ಎಂದು ಅವರು ಪ್ರತಿಪಾದಿಸುತ್ತಿದ್ದರು. ದೇಶದಲ್ಲಿ ಸಮಾಜವಾದಿ ವಿಚಾರಧಾರೆಯನ್ನು ಪ್ರಚುರಪಡಿಸುವಲ್ಲಿ ಅವರು ನೀಡಿದ ಕೊಡಗೆ ಅತ್ಯಮೂಲ್ಯ. ಎಲ್ಲ ಸಮಕಾಲೀನ ಪ್ರಶ್ನೆಗಳನ್ನು ಅವುಗಳ ಐತಿಹಾಸಿಕ ಮತ್ತು ಸಾಮಾಜಿಕ ನೆಲೆಯಲ್ಲಿ ಜನರ ಮುಂದಿಡುವಲ್ಲಿ ಅವರು ನಿಷ್ಣಾತರಾಗಿದ್ದರು. ಅವರ ಮಾತಿನಲ್ಲಿ ಅಂತಹ ಪರಿಣಾಮಕಾರಿ ವಿಶ್ಲೇಷಣೆ ಇರುತ್ತಿತ್ತು. ವಾಸ್ತವವಾಗಿ ಅವರು ಸಮಾಜವಾದದ ಮಹಾನ್ ಹೋರಾಟಗಾರರಾಗಿದ್ದರು. ಅವರು ಕೆಲಸ ನಿರ್ವಹಿಸುತ್ತಿದ್ದ ರೀತಿ, ಅವರ ಮುಕ್ತ ಮನಸ್ಸು ಮತ್ತು ಪಕ್ಷಪಾತವಿಲ್ಲದ ನಿಲುವಿನಿಂದ ಪ್ರಭಾವಿತನಾಗಿದ್ದೇನೆ. ೧೯೮೩ರ ಮೇ ತಿಂಗಳಲ್ಲಿ ಅಸ್ಸಾಂನಲ್ಲಿನ ಪರಿಸ್ಥಿತಿಯನ್ನು ಖುದ್ದಾಗಿ ಅಭ್ಯಸಿಸಲು ಅಲ್ಲಿಗೆ ಬಂದಿದ್ದಾಗ ಎಸ್.ಎಂ. ಅವರು ರಾಜ್ಯದ ಜನತೆಯಲ್ಲಿ ಮಾಡಿಕೊಂಡ ಮನವಿ ಈಗಲೂ ನನ್ನ ನೆನಪಿನಲ್ಲಿದೆ. "ಅಸ್ಸಾಂನ ಜನತೆಯಲ್ಲಿ ತಮ್ಮ ರಾಜ್ಯ ಒಂದು ಅನಾಥ ಶಿಶು ಎಂಬ ಭಾವನೆ ಇರುವುದು ನಿಜಕ್ಕೂ ದುಃಖದ ಸಂಗತಿಯಾಗಿದೆ. ದೇಶದಲ್ಲಿ ಯಾರೊಬ್ಬರೂ ತಮ್ಮ ಪರವಾಗಿ ಯಾವುದೇ ರೀತಿಯ ಕಾಳಜಿ ಹೊಂದಿಲ್ಲ ಎಂದು ಅಸ್ಸಾಮಿಗಳು ಯೋಚಿಸುತ್ತಿದ್ದಾರೆ. ಈ ಮನೋಭಾವನೆ

ಅವರ ಮನಸ್ಸಿನಲ್ಲಿ ದೇಶದ ಎಲ್ಲ ರಾಜಕೀಯ ಪಕ್ಷಗಳ ವಿಷಯದಲ್ಲಿ ದ್ವೇಷವನ್ನು ಹುಟ್ಟಿಸದೇ ಹೋಗಿದ್ದರೂ ಒಂದು ಬಗೆಯ ತಾತ್ಸಾರವನ್ನು ಮೂಡಿಸಿರುವುದು ಮಾತ್ರ ವಾಸ್ತವವಾಗಿದೆ" ಎಂದು ಅವರು ಹೇಳಿದ್ದರು. ಮುಂದುವರಿದು ಅವರು "ಅಸ್ಸಾಂ ಶತಶತಮಾನಗಳಿಂದ ವಿಭಿನ್ನ ಸಮುದಾಯಗಳು, ವಿವಿಧ ಭಾಷೆಗಳನ್ನಾಡುವ ಜನರು ಅತ್ಯಂತ ಸೌಹಾರ್ದಯುತ ವಾತಾವರಣ ಬಾಳಿಬದುಕಿದ ಒಂದು ರಾಜ್ಯವಾಗಿದೆ. ಸಾಸ್ಕೃತಿಕ ಸಮಗ್ರತೆ ಮತ್ತು ಸಾಮರಸ್ಯಕ್ಕೆ ಹೆಸರಾಗಿದ್ದ ಈ ನಾಡು ಈಗ ಸಂಪೂರ್ಣ ಜರ್ಜರಿತವಾಗಿದೆ. ಸಮಯ ಮೀರಿ ಹೋಗುತ್ತಿದ್ದೆ. ಪರಿಸ್ಥಿತಿ ಅತ್ಯಂತ ಸಂಕೀರ್ಣಗೊಳ್ಳುತ್ತಿದ್ದೆ. ತೀವ್ರ ಹತಾಶೆ ಆವರಿಸುತ್ತಿದೆ. ಆದರೆ ಇಲ್ಲಿನ ಪರಿಸ್ಥಿತಿ ಸುಧಾರಿಸಬಹುದೆಂಬ ನಂಬಿಕೆ ಈಗಲೂ ನಮಗಿದೆ. ಎಲ್ಲ ರಾಜಕೀಯ ಪಕ್ಷಗಳು ಮತ್ತು ಸಂಬಂಧಪಟ್ಟ ಸಂಘಟನೆಗಳು ಅಸ್ಸಾಂ ಜನಸಮೂದಾಯದ ಆಶೋತ್ತರಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಇಡೀ ದೇಶದ ಹಿತವನ್ನು ಲಕ್ಷದಲ್ಲಿಟ್ಟುಕೊಂಡು ಒಂದು ವ್ಯಾವಹಾರಿಕ ಪರಿಹಾರ ಕಂಡುಕೊಳ್ಳಲು ನಿರ್ಧರಿಸಿದರೆ ಈಗಲೂ ಅಸ್ಸಾಂ ರಾಜ್ಯ ಈಗ ಎರಗಿರುವ ಸಂಕಟದಿಂದ ಪಾರಾಗಬಲ್ಲದು ಎಂಬ ದೃಢ ವಿಶ್ವಾಸ ನಮಗಿದೆ. ಈ ನಿಟ್ಟಿನಲ್ಲಿ ಅಸ್ಸಾಂನಲ್ಲಿ ಹಾಗೂ ಒಟ್ಟಾರೆಯಾಗಿ ಇಡೀ ದೇಶದಲ್ಲಿ ಸಾರ್ವಜನಿಕ ಅಭಿಪ್ರಾಯ ರೂಪಿಸುವುದು ಈಗ ಅಗತ್ಯವಾಗಿದೆ ಇಡೀ ದೇಶದ ಜನತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ನಾನು ಮತ್ತೊಮ್ಮೆ ಇದೇ ಮನವಿ ಮಾಡ ಬಯಸುತ್ತೇನೆ ಮತ್ತು ಇದು ತೀವ್ರ ಪರಿಣಾಮ ಬೀರಲಿದೆ ಎಂದು ನಂಬಿದ್ದೇನೆ" ಎಂದು ಹೇಳಿದರು.

ರಾಜನೀತಿಯಲ್ಲಿ ಅಧ್ಯಾತ್ಮಿಕ್ರತೆಯನ್ನು ಅವರು ಬೆರೆಸುತ್ತಿದ್ದರು. ರಾಷ್ಟ್ರದ ಸಮಗ್ರತೆಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ಅವರು ಪಕ್ಷಾತೀತ ದೃಷ್ಟಿಯಿಂದ ನೋಡುತ್ತಿದ್ದರು. ಅವರ ಜೀವನ ಸಿದ್ಧಾಂತ ಮತ್ತು ಅನುಷ್ಠಾನದ ಆದರ್ಶಪ್ರಾಯವಾದ ಮಿಶ್ರಣವಾಗಿತ್ತು. ಪುಣೆಗೆ ಸಮೀಪದ ಹಡಪ್‌ಸರ್ ಎಂಬಲ್ಲಿ ನಡೆದ ರ‍್ಯಾಲಿಯೊಂದರಲ್ಲಿ ಪ್ರೊ. ಜಿ.ಪಿ. ಪ್ರಧಾನ್ ಅವರೊಂದಿಗೆ ಮಾತನಾಡುತ್ತಾ "ನೋಡಿ ಪ್ರಧಾನ್ ಅವರೇ, ನೀವು ಅಧ್ಯಯನ ವೇದಿಕೆಗಳಲ್ಲಿ ಮಾತನಾಡುತ್ತೀರಿ. ಅವರಿಗೆ ಉಪದೇಶ ನೀಡುತ್ತೀರಿ. ನೀವು ಎಂದೂ ನಿಮ್ಮ ಕೈಗಳನ್ನು ಕೆಲಸಕ್ಕೆ ಹಚ್ಚುವುದಿಲ್ಲ. ಇನ್ನು ಕೈಗೆ ಕೆಸರಾಗುವ ಯಾವುದೇ ಕೆಲಸಕ್ಕೂ ನೀವು ಹೋಗುವುದೇ ಇಲ್ಲ. ಹಾಗಾಗಿ ಇಲ್ಲಿ ಚರಂಡಿ ಪಾಯಖಾನೆಗಳನ್ನು ಸ್ವಚ್ಛವಾಗಿ ಇರಿಸುವ ಕಾರ್ಯಕ್ಕೆ ನೀವು ಮತ್ತು ನಿಮ್ಮ ಸ್ನೇಹಿತರು ಕೈ ಹಾಕಬೇಕೆಂದು ಮನವಿ ಮಾಡುತ್ತೇನೆ" ಎಂದಿದ್ದರು.

ಭಾಷಾವಾರು ರಾಜ್ಯಗಳ ರಚನೆಯ ಸೂತ್ರಕ್ಕೆ ಜೋಶಿಯವರು ಸಂಪೂರ್ಣ ಬದ್ಧರಾಗಿದ್ದರು. ವಿಕೇಂದ್ರೀಕೃತ ಜನತಂತ್ರ ವ್ಯವಸ್ಥೆಯಲ್ಲಿ ಅವರು ಗಾಢ ನಂಬಿಕೆ ಇಟ್ಟಿದರು. ಭಾಷಾವಾರು ರಾಜ್ಯಗಳ ರಚನೆಯ ಸೂತ್ರಕ್ಕೆ ಅನುಗುಣವಾಗಿ ಮಹಾರಾಷ್ಟ್ರ ಮತ್ತು ಪಂಜಾಬ್

ರಾಜ್ಯಗಳ ರಚನೆಯನ್ನು ಅವರು ಬೆಂಬಲಿಸಿದರು. ನಾಗಾಲ್ಯಾಂಡ್ ವಿಷಯದಲ್ಲಿ ಮಾತುಕತೆ ನಡೆಸಲು ಅವರು ಲಂಡನ್‌ಗೂ ಹೋದರು. ಸಾಮಾಜಿಕವಾಗಿ ಹಿಂದುಳಿದ ಸಮುದಾಯಗಳ ಹಿತರಕ್ಷಣೆಯ ಹೋರಾಟದಲ್ಲಿ ಅವರು ಸದಾ ಮುಂಚೂಣಿಯಲ್ಲಿ ನಿಲ್ಲುತ್ತಿದ್ದರು.

ಸಮನ್ವಿತ ಸಿದ್ಧಾಂತದ ಮತ್ತು ದೃಷ್ಟಿಕೋನದ ಡಾ. ರಾಮ ಮನೋಹರ ಲೋಹಿಯಾ ಅವರು ಪ್ರತಿಪಾದಿಸುತ್ತಿದ್ದ ಕಾರ್ಯತಂತ್ರದಲ್ಲಿ ಎಸ್.ಎಂ. ಅಚಲ ವಿಶ್ವಾಸ ಇಟ್ಟಿದ್ದರು. ಸಮಾಜವಾದ ಮತ್ತು ಸಮಾಜವಾದಿಗಳನ್ನು ಅಂಥ ಮಾವೋ ವಾದದ ಸೆರೆಮನೆಯಿಂದ ಹೊರತರಬೇಕೆಂಬ ಅವರ ಅಭಿಪ್ರಾಯವನ್ನು ಜೋಶಿಯವರು ಸಂಪೂರ್ಣವಾಗಿ ಒಪ್ಪಿಕೊಂಡಿದ್ದರು. ಜನತಾಂತ್ರಿಕ ಸಮಾಜವಾದಿ ಸಿದ್ಧಾಂತವನ್ನು ಸಂಪ್ರದಾಯವಾದ ಮತ್ತು ಕಮ್ಯುನಿಸಂನೊಂದಿಗೆ ತುಲನೆ ಮಾಡುತ್ತಾ.

"ಸಂಪ್ರದಾಯವಾದ ಮತ್ತು ಕಮ್ಯುನಿಸಂ ಸಿದ್ಧಾಂತಗಳಲ್ಲಿ ಸಮಾಜವಾದದ ವಿರುದ್ಧ ಒಂದು ವಿಲಕ್ಷಣ ಸಾಮ್ಯವಿದೆ. ಸಂಪ್ರದಾಯವಾದವು ಸಮಾಜವಾದವನ್ನು ತನ್ನ ಪ್ರಜಾಸತ್ತಾತ್ಮಕ ಪ್ರತಿಸ್ಪರ್ಧಿಯಾಗಿ ಪರಿಗಣಿಸುತ್ತದೆ. ಕಮ್ಯುನಿಸಂ ಸಂಪ್ರದಾಯವಾದಿ ಸರ್ಕಾರ ಮುಂದುವರೆಯುವುದನ್ನು ಅಪೇಕ್ಷಿಸುತ್ತದೆ ಮತ್ತು ಸಮಾಜವಾದಿ ಪಕ್ಷವು ಅಧಿಕಾರಕ್ಕೆ ಬರುವುದನ್ನು ಅದು ವಿರೋಧಿಸುತ್ತದೆ" ಎಂದು ಹೇಳಿದ್ದರು.

೧೯೬೫ರಲ್ಲಿ ವಾರಣಾಸಿಯ ಅಧಿವೇಶನದಲ್ಲಿ ಸಂಯುಕ್ತ ಸೋಷಿಯಲಿಸ್ಟ್ ಪಾರ್ಟಿಯಲ್ಲಿ ಹಲವು ದಶಕಗಳಿಂದ ಅತ್ಯಂತ ಆಪ್ತ ಮತ್ತು ವಿಶ್ವಾಸಾರ್ಹ ಮಿತ್ರರಿಂದ ಬೇರ್ಪಡಲು ತೆಗೆದುಕೊಂಡ ನಿರ್ಧಾರವು ಅವರ ತತ್ವನಿಷ್ಠ ನಿಲುವಿನ ನಿದರ್ಶನವಾಗಿದೆ. ಪ್ರಜಾಸತ್ತಾತ್ಮಕ ಸಮಾಜವಾದಿ ವ್ಯವಸ್ಥೆಯ ಸಲುವಾಗಿನ ಹೋರಾಟದ ಮುಂಚೂಣಿಯಲ್ಲಿ ನಿಂತಿರುವುದಾಗಿ ಹೇಳಿಕೊಂಡಿರುವ ಪಕ್ಷವು ಜನತಾಂತ್ರಿಕ ರೀತಿಯಲ್ಲಿ ಕಾರ್ಯ ನಿರ್ವಹಿಸಬೇಕೆಂಬುದು ಅವರ ನಿಲುವಾಗಿತ್ತು. ಭಾರತದ ರಾಜಕೀಯ ಇತಿಹಾಸದ ನೆಹರು ನಂತರದ ಅತ್ಯಂತ ಸಂದಿಗ್ಧ ಹಂತದಲ್ಲಿ ಸಂಯುಕ್ತ ಸೋಷಿಯಲಿಸ್ಟ್ ಪಾರ್ಟಿ ಡಾ. ಲೋಹಿಯಾ ಅವರ ನಾಯಕತ್ವವೇ ಸೂಕ್ತವೆಂದು ಅವರು ದೃಢವಾಗಿ ನಂಬಿದ್ದರು. ೧೯೬೭ರಲ್ಲಿ ಕಾಂಗ್ರೆಸ್ ಪಕ್ಷವು ಅನೇಕ ರಾಜ್ಯಗಳಲ್ಲಿ ಬಹುಮತ ಕಳೆದುಕೊಂಡು ಲೋಕಸಭೆಗೆ ಅಲ್ಪ ಬಹುಮತದಿಂದ ಆರಿಸಿ ಬಂದಾಗ ಜೋಶಿಯವರು ಈ ಅಂಶವನ್ನು ಒತ್ತಿ ಹೇಳಿದರು.

ಸಮಾಜದ ದುರ್ಬಲ ವರ್ಗದವರ ಹಿತರಕ್ಷಣೆಗಾಗಿ ಸಂಘಟಿಸಿದ ಹಲವಾರು ಚಳವಳಿಗಳಲ್ಲಿ ಜೋಶಿಯವರು ಸ್ವತಃ ಸಕ್ರಿಯ ಪಾತ್ರ ವಹಿಸಿದ್ದರು. ಎಂತಹ ಸಂದರ್ಭದಲ್ಲೂ ಅವರು ಧೃತಿಗೆಟ್ಟವರಲ್ಲ. ಅದೇ ರೀತಿ ಹಾಸ್ಯಪ್ರಜ್ಞೆಯನ್ನು ಬಿಟ್ಟುಕೊಟ್ಟವರಲ್ಲ. ಗಂಭೀರ ಅಸ್ವಸ್ಥತೆಕ್ಕೆ ಒಳಗಾಗಿ ಹಾಸಿಗೆ ಹಿಡಿದಿದ್ದ ಅವರು ಒಂದು ಸಲ "ಓಹ್, ನನ್ನ ದೇಹದೊಳಕ್ಕೆ ಕಾಯಂ ರಕ್ಷಣೆ ಪಡೆಯುವ ಸಲುವಾಗಿ ಓರ್ವ ತೀವ್ರಗಾಮಿ ಪ್ರವೇಶಿಸಿರುವಂತಿದೆ" ಎಂದು ಉದ್ಗರಿಸಿದರು.

ಪುಣೆಯ ಪರ್ವತಿ ದೇವಾಲಯಕ್ಕೆ ಅಸ್ಪೃಶ್ಯರಿಗೆ ಪ್ರವೇಶ ಕಲ್ಪಿಸುವ ಸಲುವಾಗಿ ನಡೆದ ಚಳವಳಿಗೆ ೧೯೩೦ರ ದಶಕದ ಪ್ರಾರಂಭದಲ್ಲೇ ಎಸ್.ಎಂ. ಅವರು ಇತರ ಅನೇಕ ಚಟುವಟಿಕೆಗಳಲ್ಲೂ ಭಾಗಿಯಾಗಿದ್ದರು. ಅವರ ಸ್ಫೂರ್ತಿದಾಯಕ ನಾಯಕತ್ವದಲ್ಲಿ ಅನೇಕ ಕಾರ್ಮಿಕ ಸಂಘಟನೆಗಳು ತಮ್ಮ ಸೈದ್ಧಾಂತಿಕ ಪಾತ್ರಗಳನ್ನು ಪುನರ್ ವಿಮರ್ಶಿಸಿದವು ಮತ್ತು ಸೈದ್ಧಾಂತಿಕ ಚರ್ಚೆಯ ಕೇಂದ್ರಗಳಾಗಿ ಪರಿಣಮಿಸಿದವು.

ಭಾರತದಲ್ಲಿನ ಸಮಾಜವಾದಿ ಚಟುವಟಿಕೆಗೆ ಹೊಸದಿಕ್ಕನ್ನು ನೀಡುವ ದಿಸೆಯಲ್ಲಿ ಎಸ್.ಎಂ. ಅವರು ಅತ್ಯಂತ ಮಹತ್ತರ ಪಾತ್ರ ವಹಿಸಿದ್ದರು. ಬಹುಶಃ ಸಮಾಜವಾದದ ಧ್ಯೇಯ ಸಾಧನೆಯಲ್ಲಿ ಯಾವೊಬ್ಬ ಸಮಾಜವಾದಿಯೂ ಜೋಶಿಯವರಷ್ಟು ಶ್ರಮ ಮತ್ತು ಯಾತನೆ ಪಟ್ಟಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಜಾತಿವಾದ, ಕೋಮುವಾದ ಮತ್ತು ಪ್ರಾದೇಶಿಕವಾದದ ಗಡಿಗಳನ್ನು ದಾಟಿ ಒಂದು ಸಮಗ್ರ ದೃಷ್ಟಿಕೋನವನ್ನು ಅವರು ಬೆಳೆಸಿಕೊಂಡಿದ್ದರು ಮತ್ತು ಈ ನೆಲೆಯಿಂದ ಅವರು ವಾಸ್ತವವಾಗಿಯೂ ಓರ್ವ ವಿಶ್ವಪ್ರಜೆ ಎನಿಸಿದ್ದರು.

ಎಸ್.ಎಂ. ಅವರ ಸ್ಮರಣೆಗೆ ನಾವು ಸಲ್ಲಿಸಬಹುದಾದ ಅತ್ಯುತ್ತಮ ಶ್ರದ್ಧಾಂಜಲಿ ಎಂದರೆ ಅವರ ವಿಚಾರಧಾರೆ ಮತ್ತು ತತ್ವಗಳಿಗೆ ನಮ್ಮನ್ನು ನಾವೇ ಅರ್ಪಿಸಿಕೊಳ್ಳುವುದು ಮತ್ತು ಸಮಾಜದಲ್ಲಿ ಅತ್ಯಂತ ಶೋಷಿತ ವರ್ಗಗಳ ಸಲುವಾಗಿ ಅವರು ಅರ್ಧದಲ್ಲಿ ಬಿಟ್ಟುಹೋದ ಕಾರ್ಯಭಾರಗಳನ್ನು ಪೂರ್ಣಗೊಳಿಸುವುದಾಗಿದೆ.

# ಎಸ್.ಎಂ. ಓರ್ವ ರಾಜರ್ಷಿ

ಶರದ್ ಪವಾರ್

ಎಸ್.ಎಂ. ಜೋಶಿಯವರು ಸ್ವಾಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯನಂತರದ ಯುಗಗಳ ಒಂದು ಪ್ರಮುಖ ಕೊಂಡಿಯಾಗಿದ್ದರು. ಅವರು ಸ್ವಾತಂತ್ರ್ಯ ಹೋರಾಟಕ್ಕೆ ನೀಡಿದ ಸ್ಫೂರ್ತಿ ಸೇವೆ ಹಾಗೂ ಬಲಿದಾನ ಮತ್ತು ಗಾಂಧಿಯುಗದ ಮೌಲ್ಯಗಳನ್ನು ನಮಗೆ ಪದೇಪದೇ ನೆನಪಿಸುವಂತಿದ್ದರು. ಅವರು ಓರ್ವ ಮಹಾನ್ ಮಾನವತಾದಿಯಾಗಿದ್ದರು. ನಿರ್ಭೀತ ವ್ಯಕ್ತಿತ್ವ ಉಳ್ಳವರಾಗಿದ್ದರು. ಸ್ಫಟಿಕದಂತೆ ಪಾರದರ್ಶನ ಪ್ರಾಮಾಣಿಕತೆ ಉಳ್ಳವರಾಗಿದ್ದರು. ಅವರ ಹೃದಯದಲ್ಲಿ ದ್ವೇಷ-ಮತ್ಸರಗಳಿಗೆ ಎಡೆಯೇ ಇರಲಿಲ್ಲ. ಅತ್ಯಂತ ಮಾನವೀಯವಾದ ಒಂದು ನವ ಸಮಾಜವನ್ನು ನಿರ್ಮಿಸುವ ಸಂಕಲ್ಪಕ್ಕೆ ಅವರು ಬದ್ಧರಾಗಿದ್ದರು. ತಮ್ಮ ಈ ಧ್ಯೇಯದ ಬಗೆಗಿದ್ದ ಅಸಾಧಾರಣ ನಿಷ್ಠೆಯಿಂದಾಗಿ ಅವರ, ಓರ್ವ ಆದರ್ಶ ಸಮಾಜ ಸೇವಕರೆನಿಸಿದ್ದರು. ಸಿದ್ಧಾಂತಕ್ಕಿಂತ ಹೆಚ್ಚಾಗಿ ಆದರ್ಶವಾದಕ್ಕೆ ಅವರು ಹೆಚ್ಚು ಬೆಲೆ ಕೊಡುತ್ತಿದ್ದರು. ವಿಸ್ತೃತ ಸಾಮಾಜಿಕ, ಆರ್ಥಿಕ ಸಮಸ್ಯೆಗಳಲ್ಲಿ ಅವರಿಗೆ ಮಾನವೀಯ ಆಸಕ್ತಿ ಇತ್ತು. ಈ ಎಲ್ಲ ಸಮಸ್ಯೆಗೂ ರಾಜಕೀಯ ಪರಿಹಾರ ಬಯಸುತ್ತಿದ್ದರಿಂದ ಅವರು ರಾಜಕಾರಣದಲ್ಲಿ ತೊಡಗಿದ್ದರು.

ಎಸ್.ಎಂ. ಅವರು ನಿಸ್ಸಂಶಯವಾಗಿಯೂ ಓರ್ವ ಶ್ರೇಷ್ಠ ಸಮಾಜವಾದಿಯಾಗಿದ್ದರು. ಅವರಲ್ಲಿ ಎಂದೂ ಅಂಧಾನುಕರಣೆ ಇರಲಿಲ್ಲ. ಸಮಾಜವಾದದಲ್ಲೇ ಅವರು ತಾವು ನಂಬಿಕೊಂಡು ಬಂದಿದ್ದ ಮಾನವೀಯ ಮತ್ತು ನೈತಿಕೆ ಮೌಲ್ಯಗಳಿಗೆ ಅಭಿವ್ಯಕ್ತಿಯನ್ನು ಕಂಡು ಕೊಳ್ಳುತ್ತಿದ್ದರು. ಅದೇ ವೇಳೆಗೆ ದೀನದಲಿತರ ಮತ್ತು ಶೋಷಿತರ ವಿಷಯದಲ್ಲಿ ಹೊಂದಿದ್ದ ಕಾಳಜಿ, ಅನುಕಂಪಗಳಿಗೆ ಅದು ಅವರಿಗೆ ಮಾಧ್ಯಮವಾಗುತ್ತಿತ್ತು. ಈ ನೈತಿಕ ಮೌಲ್ಯಗಳ ಬಗ್ಗೆ ಅವರಿಗಿದ್ದ ಕಾಳಜಿ ಗಾಂಧೀಜಿಯವರ ಬೋಧನೆಯತ್ತ ಮತ್ತು ಸಾಮೂಹಿಕ ಕಾರ್ಯತಂತ್ರಗಳತ್ತ ಅವರನ್ನು ಆಕರ್ಷಿಸಿತು. ತಾವು ಹೊಂದಿರುವ ಧ್ಯೇಯದಷ್ಟೇ ಅದನ್ನು ಸಾಧಿಸುವ ದಾರಿಯೂ ಪರಿಶುದ್ಧವಾಗಿರಬೇಕೆಂದು ಬಯಿಸಿದ್ದರು. ಸತ್ಯ, ಅಹಿಂಸೆ ಮತ್ತು ಸತ್ಯಾಗ್ರಹಗಳ ಮೇಲೆ ಗಾಂಧೀಜಿಯವರು ನೀಡುತ್ತಿದ್ದ ಒತ್ತು ಇದಕ್ಕೆ ಕಾರಣವಾಗಿತ್ತು. ಇದರಿಂದಾಗಿ ಎಸ್.ಎಂ. ಅವರು ಈಗ ಸಮಾಜವಾದಿಗಳ ನಡುವಣ ಗಾಂಧೀವಾದಿ ಮತ್ತು ಗಾಂಧೀವಾದಿಗಳ ನಡುವಣ ಸಮಾಜವಾದಿ ಎಂದು ಖ್ಯಾತರಾದರು.

ಎಸ್.ಎಂ. ಅವರು ಮಹಾರಾಷ್ಟ್ರ ವಿಧಾನಸಭೆಗೆ ಎರಡು ಬಾರಿ ೧೯೫೭ ಮತ್ತು ೧೯೬೨ರಲ್ಲಿ ಹಾಗೂ ೧೯೬೭ರಲ್ಲಿ ಲೋಕಸಭೆಗೆ ಆಯ್ಕೆಯಾದರು. ಅವರು ಸಂಸದೀಯ ಪ್ರಜಾಪ್ರಭುತ್ವದ ಮೌಲ್ಯಗಳಲ್ಲಿ ದೃಢವಾದ ನಂಬಿಕೆ ಇರಿಸಿದ್ದ ಓರ್ವ

ಧುರೀಣರಾಗಿದ್ದರು. ಅವರು ಸಾಂಪ್ರದಾಯಿಕ ನೆಲೆಯ ಓರ್ವ ಸಂಸದೀಯ ಪಟುವಾಗಿರಲಿಲ್ಲ. ರಾಜಕಾರಣವನ್ನು ಕೇವಲ ಚುನಾವಣಾ ಚಟುವಟಿಕೆಗಳ ಮತ್ತು ಸಂಸದೀಯ ಚರ್ಚೆಗಳ ನೆಲೆಯಿಂದ ನೋಡಿದವರಲ್ಲ. ಸಂಸತ್ತಿನ ಮತ್ತು ವಿಧಾನಸಭೆಗಳಲ್ಲಿನ ಚರ್ಚೆಗಳಿಗೆ ಅವರು ಸದಾ ಮಹತ್ವದ ಕೊಡುಗೆ ನೀಡುತ್ತಿದ್ದರು. ಅವರ ಮಾತುಗಳು ಮಾಹಿತಿಪೂರ್ಣವಾಗಿರುತ್ತಿದ್ದವು. ವೈಚಾರಿಕ ವಿಶ್ಲೇಷಣೆಯಿಂದ ಕೂಡಿರುತ್ತಿದ್ದವು. ಸದನದಲ್ಲಿ ಅವರ ಮಾತುಗಳನ್ನು ಎಲ್ಲರೂ ಗಮನವಿಟ್ಟು ಗೌರವದಿಂದ ಆಲಿಸುತ್ತಿದ್ದರು. ಆದರೆ ಸಂಸತ್ತಾಗಲಿ, ವಿಧಾನಸಭೆಯಾಗಲಿ ಜನರ ಅಭಿಪ್ರಾಯಗಳನ್ನು ಬಿಂಬಿಸಲು ಒಂದು ಉಪಯುಕ್ತ ವೇದಿಕೆಯಾಗಿದ್ದರೂ, ಕಾರ್ಯಾಂಗವು ಜನರ ಆಶಯಗಳಿಗೆ ಪ್ರತಿಕ್ರಿಯಿಸುವಂತೆ ಮಾಡುವಲ್ಲಿ ವಾಸ್ತವವಾಗಿ ಅಷ್ಟೊಂದು ಪರಿಣಾಮಕಾರಿ ಮಾಧ್ಯಮವಲ್ಲ ಎಂಬ ಅಂಶವನ್ನು ಅವರು ಮನಗಂಡಿದ್ದರು. ಹಾಗಾಗಿ ಶಾಸನಸಭೆಯನ್ನು ಜನರ ಬೇಡಿಕೆಗಳನ್ನು ಧ್ವನಿಸುವ ಒಂದು ವೇದಿಕೆಯನ್ನಾಗಿ ಇಟ್ಟುಕೊಂಡು ಅದೇ ವೇಳೆಗೆ ಹೊರಗಡೆ ಜನಾಂದೋಲನವನ್ನು ಸಂಘಟಿಸುವ ಮೂಲಕ ಜನಕತೆಯ ಅಧಿಕಾರವನ್ನು ಸ್ಥಾಪಿಸಲು ಅವರು ಪ್ರಯತ್ನಿಸುತ್ತಿದ್ದರು. ಇಂತಹ ಎರಡು ಹಂತಗಳ ಕಾರ್ಯತಂತ್ರ ಮಾತ್ರವೇ ಜನರ ಆಶೋತ್ತರಗಳನ್ನು ಕಾರ್ಯರೂಪಕ್ಕೆ ತರಬಲ್ಲದು ಮತ್ತು ಅವರ ಅಗತ್ಯಗಳಿಗೆ ಸರಕಾರ ಕಿವಿಗೊಡುವಂತೆ ಮಾಡಬಲ್ಲದು ಎಂದು ಅವರು ಭಾವಿಸಿದ್ದರು.

ವಿಧಾನಸಭೆಯಲ್ಲಿ ಅವರು ಮುಕ್ತ ಮಾತು ನಿರ್ಭೀತ ವಿಮರ್ಶೆಗೆ ಹೆಸರಾದವರು. ಸರ್ಕಾರ ತನ್ನ ನೀತಿಗಳಲ್ಲಿ ಅಥವಾ ಕಾರ್ಯಗಳಲ್ಲಿ ತಪ್ಪೆಸಗಿದಾಗಲೆಲ್ಲ ಸರ್ಕಾರವನ್ನು ಜಾಲಾಡಿ ಬಿಡುತ್ತಿದ್ದರು. ಅವರ ಭಾಷಣಗಳಲ್ಲಿ ದ್ವೇಷ ಅಥವಾ ಸಂಕುಚಿತ ವ್ಯವಸ್ಥೆಯ ಕ್ಷುಲ್ಲಕ ಅಂಶಗಳು ಎಂದೂ ಇರುತ್ತಿರಲಿಲ್ಲ. ಅವರು ಸದಾ ಸದನದ ಗೌರವವನ್ನು ಕಾಯುತ್ತಿದ್ದುರು. ಸದಸ್ಯರು ಹಕ್ಕುಗಳನ್ನು ರಕ್ಷಿಸುತ್ತಿದ್ದರು. ೧೯೫೭ರಲ್ಲಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯು ರಾಜ್ಯ ವಿಧಾಸಭೆಯ ಸದಸ್ಯರ ಮೇಲೆ ನಡೆಸಿದ ಅನುಚಿತ ಟೀಕೆಯ ವಿರುದ್ಧ ಮಂಡಿಸಿದ ಹಕ್ಕುಚ್ಯುತಿ ನಿರ್ಣಯವನ್ನು ಅವರು ಬಲವಾಗಿ ಬೆಂಬಲಿಸಿದ್ದರು. ಅದೇ ರೀತಿ ೧೯೫೭ರಲ್ಲಿ ಪ್ರಭಾತ್ (ಪುಣೆ) ಪತ್ರಿಕೆಯ ಸಂಪಾದಕರ ವಿರುದ್ಧ ಮಂಡಿಸಿದ್ದ ಹಕ್ಕುಚ್ಯುತಿ ನಿರ್ಣಯವನ್ನು ಅವರು ಬೆಂಬಲಿಸಿದ್ದರು. ಪತ್ರಿಕೆಯ ಸಂಪಾದಕರು ತಮ್ಮ ಮಿತ್ರರಾಗಿದ್ದು ಸಂಯುಕ್ತ ಮಹಾರಾಷ್ಟ್ರ ಸಮಿತಿಯಲ್ಲಿ ಒಡನಾಡಿಯಾಗಿದ್ದರೂ ಕೂಡ ಅವರು ಅದನ್ನು ಪರಿಗಣನೆಗೆ ತೆಗೆದುಕೊಂಡಿರಲಿಲ್ಲ. ವಿರೋಧ ಪಕ್ಷಗಳು ರಚನಾತ್ಮಕವಾಗಿ ಕಾರ್ಯನಿರ್ವಹಿಸಬೇಕೆಂದು ಜೋಶಿಯವರು ಹೇಳುತ್ತಿದ್ದರು. ೧೯೬೦ರಲ್ಲಿ ಸೋಲಾಪುರದ ನರ್ಸಿಂಗ್ ಗಿರ್ಜಿ ಮಿಲ್ಸ್‌ನ್ನು ಮುಚ್ಚಿ ಸುಮಾರು ಐದು ಸಾವಿರ ಕಾರ್ಮಿಕರು ನಿರುದ್ಯೋಗಿಗಳಾದರು. ಜೋಶಿಯವರು ಈ ಪ್ರಶ್ನೆಯನ್ನು ವಿಧಾನಸಭೆಯಲ್ಲಿ ಪ್ರಸ್ತಾಪಿಸಿದರು. ಅವರ ಈ ಉಪಕ್ರಮದಿಂದಾಗಿ ಮಹಾರಾಷ್ಟ್ರ ಸರ್ಕಾರವು ಗಿರಣಿ ಕಾರ್ಮಿಕರ ಪುನರ್‌ವಸತಿಗಾಗಿ ಯೋಜನೆಯೊಂದನ್ನು

ರೂಪಿಸಿ ಹೊಸ ಆಡಳಿತ ಮಂಡಳಿಯನ್ನು ನೇಮಕ ಮಾಡಿತು. ಎಸ್.ಎಂ. ಅವರು ಈ ಸಮಿತಿಯ ಸದಸ್ಯರಲ್ಲಿ ಒಬ್ಬರಾಗಿದ್ದರು. ಇದರಿಂದಾಗಿ ಗಿರಣಿಯ ಪರಿಸ್ಥಿತಿ ಸುಧಾರಿಸಿ ಮತ್ತೆ ಅದು ಲಾಭದಾಯಕವಾಗಿ ನಡೆಯತೊಡಗಿತು. ಮುಂದನ ವರ್ಷಗಳಲ್ಲಿ ರೋಗಗ್ರಸ್ತ ಬಟ್ಟೆ ಗಿರಣಿಗಳ ಪುನರುತ್ಥಾನಕ್ಕಾಗಿ ಸರ್ಕಾರ ಯೋಜಿಸಿದ ಕಾರ್ಯಕ್ರಮಗಳಿಗೆ ಈ ಪ್ರಯೋಗವೇ ನಾಂದಿಯಾಯಿತು.

ರಾಜ್ಯ ವಿಧಾನಸಭೆಯಲ್ಲಿ ಅವರು ಸದಸ್ಯರಾಗಿದ್ದ ದಿನಗಳಲ್ಲಿ ಸಂಯುಕ್ತ ಮಹಾರಾಷ್ಟ್ರ ಚಳವಳಿ ತುರ್ಯಾವಸ್ಥೆಯಲ್ಲಿತ್ತು. ಎಸ್.ಎಂ. ಅವರು ಭಾಷಾವಾರು ರಾಜ್ಯಗಳ ರಚನೆಯ ಕಟ್ಟಾ ಬೆಂಬಲಿಗರಾದಿದ್ದರು. ವಿಧಾನಸಭೆಯಲ್ಲಿ ಈ ಬೇಡಿಕೆಯ ಪರವಾಗಿ ಪ್ರತಿಪಾದಿಸುವುದರ ಜೊತೆಗೆ ಅವರು ಸಂಯುಕ್ತ ಮಹಾರಾಷ್ಟ್ರ ಚಳವಳಿಗೂ ನೇತೃತ್ವ ನೀಡಿದ್ದರು. ಸಂಯುಕ್ತ ಮಹಾರಾಷ್ಟ್ರ ಚಳವಳಿಯ ಪ್ರಧಾನ ಕಾರ್ಯದರ್ಶಿ ಆಗಿಯೂ ನೇಮಕಗೊಂಡರು. ಈ ಸಾಮೂಹಿಕ ಚಳವಳಿ ಶಾಂತಿಯುತವಾಗಿ ಮುಂದುವರೆಯುವಂತೆ ಎಚ್ಚರ ವಹಿಸಿದರು. ಅವರ ವಿಧಾಯಕ ನೇತೃತ್ವದಿಂದಾಗಿಯೇ ಅದು ತನ್ನ ಸ್ಥಿಮಿತವನ್ನು ಕಾಯ್ದುಕೊಂಡಿತು. ಬಹುಕಾಲದಿಂದ ನಡೆದುಕೊಂಡು ಬಂದಿದ್ದ ಈ ಚಳವಳಿ ಭಾಷಾವಾರು ಹಿಂಸಾಚಾರಕ್ಕೆ ತಿರುಗದಂತೆ ಅವರು ನೋಡಿಕೊಂಡರು. ಅದೇನೇ ಇರಲಿ ಮಹಾರಾಷ್ಟ್ರ ಮತ್ತು ಮುಂಬಯಿಯಲ್ಲಿ ವಿಭಿನ್ನ ಭಾಷಾ ಗುಂಪುಗಳ ನಡುವಣ ಸಾಮರಸ್ಯವನ್ನು ಅವರು ಕಾಯ್ದುಕೊಂಡರು. ಚಳವಳಿ ಕಾಲದಲ್ಲಿ ಪೊಲೀಸ್ ಅಧಿಕಾರಿಯೊಬ್ಬರು ಜನರ ರೋಷಕ್ಕೆ ಬಲಿಯಾಗುವುದನ್ನು ತಪ್ಪಿಸಲು ಅವರು ತಮ್ಮ ಜೀವನವನ್ನೇ ಅಪಾಯಕ್ಕೆ ಒಡ್ಡಿದ್ದರು.

ಕಾಂಗ್ರೆಸ್ ಪಕ್ಷದ ನಿಲುವನ್ನು ಅವರು ಬಲವಾಗಿ ವಿರೋಧಿಸುತ್ತಿದ್ದರೂ ಕೂಡಾ ಮಹಾರಾಷ್ಟ್ರದಲ್ಲಿನ ಕಾಂಗ್ರೆಸ್ಸಿಗರು ಸಂಯುಕ್ತ ಮಹಾರಾಷ್ಟ್ರದ ವಿಷಯದಲ್ಲಿ ತಮ್ಮ ಭಾವನೆಗಳ ಪರವಾಗಿಯೇ ಇದ್ದರೆಂದು ಅವರು ಅರಿತಿದ್ದರು. ೧೯೫೭ರ ಸಾರ್ವತ್ರಿಕ ಚುನಾವಣೆಗಳಲ್ಲಿ ಸಮಿತಿಯು ತನ್ನ ಸಾಮರ್ಥ್ಯವನ್ನು ಸಾಬೀತು ಪಡಿಸಿದ ನಂತರದಲ್ಲಿ ಅವರು ತಮ್ಮ ದಾರಿಯನ್ನು ಬದಲಿಸಿದರು. ಆಗ ವೈ.ಬಿ. ಚವಾಣ್ ಅವರು ದ್ವಿಭಾಷಾ ಮುಂಬಯಿ ರಾಜ್ಯದ ಮುಖ್ಯಮಂತ್ರಿಯಾದರು. ೧೯೫೮ರ ನವೆಂಬರ್‌ನಲ್ಲಿ ಛತ್ರಪತಿ ಶಿವಾಜಿಯ ಪ್ರತಿಮೆಯನ್ನು ಅನಾವರಣಗೊಳಿಸಲು ಪ್ರಧಾನಿ ಜವಹರಲಾಲ್ ನೆಹರು ಅವರು ಪ್ರತಾಪ್‌ಘಢ್‌ಗೆ ಭೇಟಿ ಇತ್ತಾಗ ಸಮಿತಿಯು ಮರಾಠಿ ಭಾಷೆಯ ಜನರು ಬೇಡಿಕೆಯನ್ನು ಮುಂದಿಟ್ಟು ಅದರ ಪ್ರಶ್ನಾತೀತ ಅಭಿವ್ಯಕ್ತಿ ಎಂಬಂತೆ ಅಭೂತಪೂರ್ವ ಮತ ಪ್ರದರ್ಶನ ನಡೆಸಿತು. ಅನೇಕರು ಈ ಮತ ಪ್ರದರ್ಶನ ಹಿಂಸಾಚಾರಕ್ಕೆ ತಿರುಗುವುದೆಂದು ಆತಂಕಪಟ್ಟರಾದರೂ ಎಸ್.ಎಂ. ಅವರು ಅತ್ಯಂತ ಆತ್ಮವಿಶ್ವಾಸದಿಂದ ಜನರನ್ನು ಅತ್ಯಂತ ಶಾಂತಿಯುತವಾಗಿ ಮತ್ತು ಗೌರವಪೂರ್ವಕವಾಗಿ ಸಂಘಟಿಸುವಲ್ಲಿ ಯಶಸ್ವಿಯಾದರು. ಅತ್ಯಂತ

ಶಾಂತಿಯುತ, ಅತ್ಯಂತ ಘನಸ್ತಿಕೆಯಿಂದ ಕೂಡಿದ್ದ ಈ ಮತ ಪ್ರದರ್ಶನವು ಅವರಿಗೆ ಭಾರಿ ಶ್ಲಾಘನೆಯನ್ನು ತಂದುಕೊಟ್ಟಿತು. ಅಷ್ಟು ಮಾತ್ರವಲ್ಲ ಅದು ಪಂಡಿತ್ ನೆಹರೂ ಅವರ ಮೇಲೂ ಗಾಢವಾದ ಪ್ರಭಾವ ಬೀರಿತು.

ಎಸ್.ಎಂ. ಅವರು ಸಮಿತಿಯ ನಾಯಕ ಮತ್ತು ಪ್ರಧಾನ ಕಾರ್ಯದರ್ಶಿಯಾಗಿರುತ್ತಾ ಅದರ ಧ್ಯೇಯ ಉದ್ದೇಶಗಳ ಬಗ್ಗೆ ಅತ್ಯಂತ ಸ್ಪಷ್ಟವಾದ ಪರಿಕಲ್ಪನೆ ಹೊಂದಿದ್ದರು. ಅಧಿಕಾರದ ಗ್ರಹಣ ನಮ್ಮ ಗುರಿಯಲ್ಲ. ಸಂಯುಕ್ತ ಮಹಾರಾಷ್ಟ್ರದ ರಚನೆಯೇ ತಮ್ಮ ಏಕೈಕ ಗುರಿ ಎಂಬುದನ್ನು ಅವರು ಚೆನ್ನಾಗಿ ಅರಿತು ಕೊಂಡಿದ್ದರು. ಒಂದು ವೇಳೆ ಸಾರ್ವತ್ರಿಕ ಚುನಾವಣೆಯಲ್ಲಿ ಸಮಿತಿ ಗೆದ್ದು ಬಂದರೂ ಸಂಯುಕ್ತ ಮಹಾರಾಷ್ಟ್ರ ರಚನೆಯ ಗುರಿ ಮುಟ್ಟಿದೊಡನೆ ಅದು ರಾಜೀನಾಮೆ ನೀಡುವುದು ಎಂದು ಕೂಡಾ ಅವರು ಒಮ್ಮೆ ಹೇಳಿದ್ದರು. ಸಮಿತಿಯ ಇತರ ಘಟಕಗಳು ಈ ಸಂಘಟನೆಯನ್ನು ಕಾಂಗ್ರೆಸ್‌ಗೆ ಪರ್ಯಾಯ ರಾಜಕೀಯ ಶಕ್ತಿಯಾಗಿ ಕಟ್ಟುವ ಅಭಿಲಾಷೆ ಹೊಂದಿದ್ದರೂ ಮಹಾರಾಷ್ಟ್ರ ರಾಜ್ಯ ಅಸ್ತಿತ್ವಕ್ಕೆ ಬಂದೊಡನೆ ಅವರು ಸಮಿತಿಯನ್ನು ತ್ಯಜಿಸಿದರು.

ಮುಂದಿನ ದಿನಗಳಲ್ಲೂ ಮಹಾರಾಷ್ಟ್ರ ಮತ್ತು ಕರ್ನಾಟಕ ನಡುವಣ ಗಡಿ ವಿವಾದವನ್ನು ಆಯಾ ಭಾಗಗಳ ಜನತೆಯ ಆಶಯಕ್ಕೆ ಅನುಗುಣವಾಗಿ ಬಗೆಹರಿಸುವ ನಿಟ್ಟಿನಲ್ಲಿ ಅವರು ತಮ್ಮ ಶ್ರಮವನ್ನು ಮೀಸಲಿಟ್ಟರು. ಅವರು ಎಂದೂ ಅಧಿಕಾರಕ್ಕಾಗಿ ತಹತಹಿಸಿದವರಲ್ಲ ಮತ್ತು ಜನಸೇವೆಗೆ ಅದೇ ನೆರವು ಎಂದು ಭಾವಿಸಿದವರೂ ಅಲ್ಲ.

ಎಸ.ಎಂ. ಅವರ ಜೀವನವು ಅನ್ಯಾಯದ ವಿರುದ್ಧ ಹೋರಾಟದ ರಚನಾತ್ಮಕ ಕಾರ್ಯಭಾರದ ಒಂದು ವೀರಗಾಥೆಯಾಗಿದೆ. ಅವರ ಜೀವನದಲ್ಲಿ ಏಳು ಬಾರಿಗೂ ಹೆಚ್ಚು ಸಲ ಅವರು ಜೈಲುವಾಸ ಮತ್ತು ಸ್ಥಾನಬದ್ಧತೆಗೆ ಗುರಿಯಾಗಿದ್ದರು. ಸ್ವಾತಂತ್ರ್ಯ ನಂತರದಲ್ಲೂ ಮೂರು ಬಾರಿ ಅವರು ಸೆರೆಮನೆ ವಾಸ ಅನುಭವಿಸಿದರು. ಕಾರ್ಮಿಕ ಸಂಘಟನೆಯಲ್ಲೂ ಅವರು ಸಕ್ರಿಯ ಪಾತ್ರ ವಹಿಸಿದ್ದರು. ಅನೇಕ ಮುಷ್ಕರಗಳು ಮತ್ತು ಹೋರಾಟಗಳನ್ನು ಯುಶಸ್ವಿಯಾಗಿ ನಿರ್ವಹಿಸಿದ್ದರು. ತಮ್ಮ ಕಾರ್ಮಿಕ ಸಂಘಗಳ ಕಾರ್ಯಕರ್ತರು ಕಾರ್ಯ ಚಟುವಟಿಕೆಗಳು ನಾವು ಇರಿಸಿಕೊಂಡಿದ್ದ ರಾಷ್ಟ್ರೀಯ ಮತ್ತು ಸಾಮಾಜಿಕ ಧ್ಯೇಯಾದರ್ಶಗಳ ಅಂಗಭಾಗ ಎಂದೇ ಅವರು ಪರಿಗಣಿಸಿದ್ದರು. ಅವರು ತಮ್ಮ ಕಾರ್ಯಕ್ಷೇತ್ರದಲ್ಲಿ ಗಾಂಧಿ ಮಾರ್ಗವನ್ನು ಅನುಸರಿಸಲು ಯತ್ನಿಸಿದರು ತಮ್ಮ ಧ್ಯೇಯಧೋರಣೆಗಳ ವಿಷಯದಲ್ಲಿ ಎಂದೂ ಅವರು ರಾಜಿ ಮಾಡಿಕೊಂಡವರಲ್ಲ.

ಅವರು ನೀಡಿದ ಮಹತ್ತರ ಕೊಡುಗೆಗಳಲ್ಲಿ ರಾಷ್ಟ್ರ ಸೇವಾದಳವೂ ಒಂದಾಗಿದೆ. ಅದರ ಮುಖ್ಯಸ್ಥರಾಗಿ ಈ ಸಂಘಟನೆಯನ್ನು ನಡೆಸಿಕೊಂಡು ಬಂದರು. ಜಾತ್ಯಾತೀತ

ಜನತಂತ್ರದ ಮೌಲ್ಯಗಳನ್ನು ಎಳೆಯ ಪೀಳಿಗೆಯಲ್ಲಿ ತುಂಬಬೇಕೆಂಬ ಅವರ ಆಶಯ ಮತ್ತು ಗಾಂಧಿವಾದದ ರಚನಾತ್ಮಕ ಕಾರ್ಯಭಾರದಲ್ಲಿ ಅವರನ್ನು ತೊಡಗಿಸುವ ಅವರ ಕಾಳಜಿಯಿಂದಾಗಿ ಈ ಸಂಘಟನೆ ಮಾನ್ಯತೆ ಪಡೆಯಿತು. ಸಾಮಾಜಿಕ, ಆರ್ಥಿಕ ಪ್ರಗತಿಗೆ ಮತ್ತು ಸಾಮಾಜಿಕ ಸಾಮರಸ್ಯಕ್ಕೆ ಇವೆರಡೂ ಅತ್ಯಗತ್ಯ ಎಂದು ಅವರು ಪರಿಗಣಿಸಿದ್ದರು. ರಾಷ್ಟ್ರ ಸೇವಾದಳವನ್ನು ಒಂದು ರಚನಾತ್ಮಕ ಸ್ವಯಂ ಸೇವಕರ ಪಡೆಯಾಗಿ ಕಟ್ಟುವಲ್ಲಿ ಅವರು ತಮ್ಮ ಗಮನವನ್ನು ಕೇಂದ್ರೀಕರಿಸಿದ್ದರು. ತಮ್ಮ ಹಲವು ವರ್ಷಗಳ ಪರಿಶ್ರಮದಿಂದ ಅನೇಕ ಪ್ರತಿಭಾವಂತ ಮತ್ತು ಸಮರ್ಪಣಾ ಮನೋಭಾವದ ಸಾಮಾಜಿಕ ಕಾರ್ಯಕರ್ತರ ಒಂದು ದೊಡ್ಡ ಪಡೆಯನ್ನೇ ಅವರು ಕಟ್ಟಿದರು. ಮಹಾರಾಷ್ಟ್ರದ ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗವನ್ನು ರಾಷ್ಟ್ರ ಸೇವಾದಳ ಹೆಚ್ಚು ಶ್ರೀಮಂತಗೊಳಿಸಿತು. ಇಂದಿಗೂ ದಳವು ಹಾಕಿಕೊಟ್ಟ ರಚನಾತ್ಮಕ ಸಮಾಜಿಕ ಕಾರ್ಯಭಾರದ ಅತ್ಯುತ್ತಮ ಪರಂಪರೆಯನ್ನು ಈ ಸ್ವಯಂ ಸೇವಕರು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಸಂಯುಕ್ತ ಮಹಾರಾಷ್ಟ್ರ ಚಳವಳಿಯಲ್ಲದೆ ಗೋವಾ ವಿಮೋಚನಾ ಹೋರಾಟವನ್ನು ಎಸ್.ಎಂ. ರವರು ಯಶಸ್ವಿಯಾಗಿ ನಡೆಸಿದರು. ಅದಲ್ಲದೆ ಭೂದಾನ ಚಳವಳಿ ಮತ್ತು ಬಿಹಾರದಲ್ಲಿನ ಭೂ ಅತಿಕ್ರಮಣ ಸತ್ಯಾಗ್ರಹದಲ್ಲೂ ಅವರು ನೇತೃತ್ವ ವಹಿಸಿದ್ದರು. ೧೯೬೭ ರಲ್ಲಿ ಅವರು ಲೋಕಸಭಾ ಸದಸ್ಯರಾಗಿದ್ದಾಗ ನಾಗಾಲ್ಯಾಂಡ್‌ಗೆ ಭೇಟಿ ನೀಡಿ ನಾಗಾಲ್ಯಾಂಡ್ ಸಮಸ್ಯೆಯ ಪರಿಹಾರಕ್ಕೂ ಪ್ರಯತ್ನಿಸಿದರು. ಅಲ್ಲಿನ ಪರಿಸ್ಥಿತಿಯ ಖುದ್ದು ಪರಿಶೀಲನೆಗೆ ಮತ್ತು ೧೯೭೯ರಲ್ಲಿ ಮತ್ತೆ ಅಲ್ಲಿಗೆ ತೆರಳಿದ್ದರು. ಶ್ರೀ ಜಯಪ್ರಕಾಶ್ ನಾರಾಯಣ್ ಅವರ ಸಲಹೆಯ ಮೇರೆಗೆ ಲಂಡನ್‌ಗೆ ತೆರಳಿ ನಾಗಾಲ್ಯಾಂಡ್ ಚಳವಳಿಯ ನಾಯಕ ಶ್ರೀ ಫಿಜೋ ಅವರ ಜೊತೆಗೆ ಚರ್ಚೆ ನಡೆಸಿದರು. ಈ ಸಮಾಲೋಚನೆಗಳು ಭಾರತ ಸರ್ಕಾರ ಮತ್ತು ನಾಗಾಲ್ಯಾಂಡ್ ದಂಗೆಕೋರರ ನಡುವಣ ಅಂತಿಮ ಇತ್ಯರ್ಥಕ್ಕೆ ನೆರವಾದವು.

ಎಸ್.ಎಂ. ಅವರು ಕೋಮು ಸಾಮರಸ್ಯಕ್ಕಾಗಿ ಮತ್ತು ಸಾಮಾಜಿಕ ಸಮಾನತೆಗಾಗಿ ಸತತ ಹೋರಾಟ ನಡೆಸಿದರು. ಈ ಪ್ರಯತ್ನಗಳಲ್ಲಿ ಅನೇಕ ಅಪಾಯಗಳನ್ನು ಎದುರಿಸಿದರು. ಆದರೆ ಅವರು ಎಂದೂ ಧೃತಿಗೆಡಲಿಲ್ಲ. ಮರಾಠವಾಡ ವಿಶ್ವವಿದ್ಯಾಲಯಕ್ಕೆ ಪುನರ್ ನಾಮಕರಣ ಮಾಡುವ ಪ್ರಶ್ನೆಯ ಮೇಲೆ ೧೯೭೮ರಲ್ಲಿ ಎದ್ದ ಗಲಭೆಯ ಸಂದರ್ಭದಲ್ಲಿ ಸವರ್ಣೀಯ ಹಿಂದೂಗಳ ಕೋಪತಾಪಗಳನ್ನು ಅವರು ಎದುರಿಸಿದರು. ಮರಾಠವಾಡ ಪ್ರಾಂತ್ಯದಲ್ಲಿ ವಿಸ್ತೃತ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಒಂದೆಡೆ ಚಪ್ಪಲಿ ಹಾರದೊಂದಿಗೆ ಅವರನ್ನು ಸ್ವಾಗತಿಸಿದ್ದೂ ಉಂಟು. ಆದರೆ ದಲಿತರ ಜೀವಗಳನ್ನು ಸಂರಕ್ಷಿಸುವ ತಮ್ಮ ಕಾರ್ಯಭಾರವನ್ನು ಅವರು ಮುಂದುವರೆಸಿದರು. ಕೊನೆಗೂ ವಿಶ್ವವಿದ್ಯಾಲಯಕ್ಕೆ ಹೊಸ ಹೆಸರು ನೀಡುವ ನಿರ್ಧಾರವನ್ನು ಒಪ್ಪಿಕೊಳ್ಳುವಂತೆ ವಿರೋಧಿಗಳ ಮನ ಒಲಿಸಿದರು. ಇದರ ಫಲಿತಾಂಶ

ಏನಾಯಿತೆಂದರೆ ಜೋಶಿಯವರಿಗೆ ಚಪ್ಪಲಿಯ ಹಾರ ತೊಡಿಸಿದ್ದ ಯುವಕನೇ ಅವರ ಬಳಿಗೆ ಬಂದು ಪಾದ ಮುಟ್ಟಿ ತನ್ನ ತಪ್ಪನ್ನು ಒಪ್ಪಿಕೊಂಡು ತಾನೀಗ ಬದಲಾದ ಮನುಷ್ಯನಾಗಿದ್ದೇನೆ ಎಂದು ಹೇಳಿ ಆದರೆ ಓರ್ವ ಪ್ರಬಲ ಬೆಂಬಲಿಗನಾದ.

ಕಳೆದ ಶತಮಾನದಲ್ಲಿ ನ್ಯಾಯಮೂರ್ತಿ ಎಂ.ಜಿ. ರಾನಡೆ ಅವರು ತಮ್ಮ ಸಮಕಾಲೀನರೊಬ್ಬರನ್ನು ರಾಜರ್ಷಿ ಎಂದು ಬಣ್ಣಿಸಿದ್ದರು. ಆದರೆ ಈಚಿನ ದಿನಗಳಲ್ಲಿ ಸಾರ್ವಜನಿಕ ಜೀವನದಲ್ಲಿ ಅಂತಹ ರಾಜರ್ಷಿಯನ್ನು ನಾವು ಕಂಡಿದ್ದರೆ ಅದು ಎಸ್.ಎಂ. ಜೋಶಿಯವರೇ ಆಗಿದ್ದರು. ಅವರು ನಮ್ಮ ಸಾರ್ವಜನಿಕ ಜೀವನದ ನೈತಿಕ ಮತ್ತು ಮಾರ್ಗದರ್ಶಿ ಶಕ್ತಿಯಾಗಿದ್ದರು. ಅವರ ನೈತಿಕ ಸ್ಫೂರ್ತಿ ಎಂದೂ ಬತ್ತಿದ್ದೇ ಇಲ್ಲ. ಅವರೆಂದು ಸೋಲುಗಳಿಂದ ಧೃತಿಗೆಟ್ಟವರೇ ಅಲ್ಲ. ತಮ್ಮ ಆತ್ಮಸಾಕ್ಷಿಗೆ ಸರಿಯಾಗಿ ಅವರು ನಡೆದುಕೊಂಡವರು. ತಮಗೆ ಪ್ರಿಯರಾದವರ ಪರವಾಗಿ ಅವರ ಹಿತಸಾಧನೆಗಾಗಿ ಹೋರಾಟದಲ್ಲಿ ತಮ್ಮ ಜೀವಮಾನವನ್ನು ಸವೆಸಿದವರು.

## ಅಧ್ಯಾಯ - ೪

## ಎಸ್.ಎಂ. ಅವರಿಗೆ ವಿದಾಯ

**ಪ್ರೊ. ಮಧು ದಂಡವತೆ***

"ಬಣ್ಣ ಕಳೆದುಕೊಳ್ಳುತ್ತಿರುವ ಹೂಗಳು ಮತ್ತು ಉದುರುತ್ತಿರುವ ಎಲೆಗಳ ಋತುವಿನಲ್ಲಿ ಏಕಾಂತದ ಕ್ಷಣಗಳು ಬರುವುದು ಸ್ವಾಭಾವಿಕ. ಅದೇ ರೀತಿ ಸ್ಮರಣೆಯ ಒಂದು ಮೂಲೆಯಲ್ಲಿ ಅಂತಹ ಏಕಾಂತದ ಅನುಭವ ಸಂವೇದನೆಯ ಎಲೆಗಳನ್ನು ಮೀಟುವುದೂ ಸಹಜ. ಅದೇ ರೀತಿ ಮನುಷ್ಯನ ನೆನವು ಕೂಡಾ ಅನೇಕ ವೇಳೆ ದುಃಖದಲ್ಲೂ ಕೂಡ ಚೇತೋಹಾರಿಯಾಗಿರುತ್ತದೆ". ರವೀಂದ್ರನಾಥ ಟಾಗೂರ್.

ಸಮೃದ್ಧ ಅನುಭವಗಳ ಮತ್ತು ಗಾಢ ನಿಷ್ಠೆಯ ಜೀವನ ನಿಜಕ್ಕೂ ಅತ್ಯಂತ ಸುಂದರ. ಆದರೆ ಬದುಕು ಗುಣಪಡಿಸಲಾಗದ ವ್ಯಾಧಿಯ ಸಹಿಸಲಸಾಧ್ಯವಾದ ನೋವಿನಿಂದ ಆವರಿಸಿದಾಗ ಪ್ರತಿಕ್ಷಣವೂ ಅಳಿವು ಉಳಿವಿನ ತೂಗುಯ್ಯಾಲೆಯಾದಾಗ ಆ ದುಃಖ, ಆ ಯಾತನೆ ಅಸಹನೀಯ. ಆ ಕ್ಷಣಗಳಲ್ಲಿ ಸಾವೇ ಒಂದು ಕೊಡುಗೆ. ಅಂತಹ ವರ್ತನೆಯ ಅಂತ್ಯವನ್ನು ಬಳುವಳಿಯಾಗಿ ಪಡೆದ ಎಸ್.ಎಂ. ಜೋಶಿಯವರು ೧೯೮೯ರ ಏಪ್ರಿಲ್ ೧ ರಂದು ಇಹಲೋಕವನ್ನು ತೊರೆದರು.

ಅಂತಿಮ ಯಾತ್ರೆಯಲ್ಲಿ ಅವರ ಶರೀರದ ಮೇಲೆ ಹೂವಿನ ಮಳೆಗರೆದಾಗ ಮತ್ತು ಅವರ ಪಾರ್ಥಿವ ಶರೀರವನ್ನು ವಿದ್ಯುತ್ ಚಿತಾಗಾರದಲ್ಲಿ ಅಗ್ನಿಗೆ ಅರ್ಪಿಸಿದ ಸಂದರ್ಭದಲ್ಲಿ ನನ್ನ ಮನಸ್ಸಿನಲ್ಲಿ ಕೆಲವು ಯೋಚನೆಗಳು ಬಂದವು. ಅವರ ಶರೀರದ ಮೇಲೆ ಹೂವುಗಳನ್ನು ಹಾಕಿರುವುದಾದರೂ ಏಕೆ? ಎಂದು ನನ್ನಲ್ಲೇ ನಾನು ಯೋಚಿಸಿದೆ. ಬದುಕಿನುದ್ದಕ್ಕೂ ಹೂವಿನಂತೆ ಅರಳುತ್ತಲೇ, ಕರ್ಪೂರದಂತೆ ಉರಿಯುತ್ತಲೇ ಇದ್ದವರ ಶರೀರವನ್ನು ದಹನ ಮಾಡುವ ಅಗತ್ಯವಾದರೂ ಏನು ಎಂದು ನನಗನಿಸಿತು. ಬದುಕಿನುದ್ದಕ್ಕೂ ಮೇಣದ ಬತ್ತಿಯಂತೆ ಉರಿದವರು ಅವರು. ಎಸ್.ಎಂ. ಜೋಶಿಯವರದು ಅತ್ಯಂತ ಸ್ಪಂದನಶೀಲ ವ್ಯಕ್ತಿತ್ವವಾಗಿತ್ತು ಅವರು ಬದುಕಿದ್ದ ಮತ್ತು ಕಾರ್ಯ ನಿರ್ವಹಿಸಿದ್ದ ಅವಧಿಯಲ್ಲಿನ ಎಲ್ಲ ಸಂವೇದನೆಗಳು, ಆಗ್ರಹಗಳು ಮತ್ತು ಆಶಯಗಳನ್ನು ಅವರು ಪ್ರತಿಧ್ವನಿಸಿದ್ದರು. ಪ್ರಾರಂಭದಲ್ಲಿ ಅವರ ರಾಜಕೀಯ ಚಿಂತನೆ ಲೋಕಮಾನ್ಯ ಬಾಲಗಂಗಾಧರ ತಿಲಕ್ ಅವರ ತೀವ್ರಗಾಮಿ ರಾಷ್ಟ್ರೀಯವಾದದಿಂದ ಸ್ಫೂರ್ತಿ ಪಡೆದಿತ್ತು. ಅದೇ ದಿಸೆಯಲ್ಲಿ ಅದು ಹದಕ್ಕೆ ಬಂದಿತ್ತು. ಆನಂತರದಲ್ಲಿ ಜೋಶಿಯವರು ರಾಷ್ಟ್ರವ್ಯಾಪಿ (Civil Disobediance) ಅಸಹಕಾರ ಚಳವಳಿ ಮತ್ತು ಸಾಂಸ್ಥಿಕ ರಚನಾತ್ಮಕ ಕಾರ್ಯಭಾರಗಳ ಮೂಲಕ ಸಾಮೂಹಿಕ ಜಾಗೃತಿ ಮೂಡಿಸುವ ಮಹತ್ಮ ಗಾಂಧೀಜಿಯವರ ಕಾರ್ಯಕ್ರಮದ ಮೋಡಿಗೆ ಒಳಗಾದರು. ಬುದ್ಧನ

*ಪ್ರೊ. ಮಧು ದಂಡವತೆ ಮಾಜಿ ಕೇಂದ್ರ ಸಚಿವರು

ದಯೆ ಮತ್ತು ಗಾಂಧೀಜಿಯವರ ಸತ್ಯಾಗ್ರಹದ ಸ್ಫೂರ್ತಿ ಅವರ ಮನಸ್ಸಿಗೆ ನಾಟಿತು. ಅನಂತರದಲ್ಲಿ ಅದು ಅವರ ಮಾನವೀಯ ಮೌಲ್ಯಗಳ ಸಮಾಜವಾದಿ ಪ್ರಜ್ಞೆಯನ್ನು ಸಮೃದ್ಧಗೊಳಿಸಿತು. ೧೯೩೪ರಲ್ಲಿ ಸೋಷಲಿಸ್ಟ್ ಪಾರ್ಟಿಯನ್ನು ಸ್ಥಾಪಿಸಿದವರಲ್ಲಿ ಜೋಶಿಯವರು ಒಬ್ಬರು. ಈ ಸಮಾಜವಾದಿ ಚಳವಳಿಯ ಆರಂಭದ ಹಂತದಲ್ಲಿ ಅವರ ಚಿಂತನೆಯ ಮೇಲೆ ಕಾರ್ಲ್ ಮಾರ್ಕ್ಸ್ ಅವರ ಗಾಢ ಪ್ರಭಾವ ಇದ್ದಿತು. ಆದರೆ ದಿನಕಳೆದಂತೆ ಅವರಲ್ಲಿನ ಸ್ಪಂದನಶೀಲತೆ ಮತ್ತು ಮಾನವೀಯ ಗುಣ ಅವರನ್ನು ಗಾಂಧೀಜಿಯವರ ವಿಚಾರಧಾರೆಯತ್ತ ಸೆಳೆಯಿತು. ಜಯಪ್ರಕಾಶ ನಾರಾಯಣ್ ಅವರಿಗೆ ಆದರ್ಶವಾಗಿ ನಿಂತರು. ಮಾರ್ಕ್ಸ್‌ವಾದಿಯಾಗಿ ತಮ್ಮ ರಾಜಕೀಯ ಜೀವನವನ್ನು ಪ್ರಾರಂಭಿಸಿದ ಜಯಪ್ರಕಾಶ್ ನಾರಾಯಣ್ ಅವರು ಅನಂತರದಲ್ಲಿ ಗಾಂಧೀಜಿಯವರ ವಿಚಾರಧಾರೆಗೆ ಒಲಿದಿದ್ದರು. ಯೂಸಫ್ ಮೆಹರುಲಿ ಅವರಂತೆಯೇ ಎಸ್.ಎಂ. ಜೋಶಿಯವರಗೂ ಕ್ರೌರ್ಯ ಮತ್ತು ಹಿಂಸೆ ಎಂದರೆ ಆಗುತ್ತಿರಲಿಲ್ಲ. ಮೆಹರುಲಿ ಅವರ ಸಮಾಜವಾದದಂತೆಯೇ ಜೊಶಿಯವರ ಸಮಾಜವಾದವು ಕೂಡ ನೈತಿಕ ಮತ್ತು ಮಾನವೀಯ ಮೌಲ್ಯಗಳಿಂದ ಸಮೃದ್ಧವಾಗಿತ್ತು. ಇದೇ ಕಾರಣದಿಂದ ಸಾನೆ ಗುರೂಜಿಯವರ ಜೀವನ ಮತ್ತು ಸಂದೇಶಗಳು ಅವರ ಜೀವನದ ಮೇಲೆ ಗಾಢ ಪರಿಣಾಮ ಬೀರಿದ್ದವು.

ಎಸ್.ಎಂ. ಅವರ ಸಾಹಸ ಮನೋವೃತ್ತಿ ಧೈರ್ಯ ಶೌರ್ಯಗಳು ೧೯೪೨ರಲ್ಲಿ ಅವರು ಭೂಗತ ಚಳವಳಿಯ ನೇತೃತ್ವ ವಹಿಸಿದಾಗ ಅತ್ಯಂತ ಸ್ಫುಟವಾಗಿ ಪ್ರಕಟವಾದವು. ಪ್ರತಿಯೊಂದು ಚಳವಳಿಯಲ್ಲೂ ಅದು ರೈತರ ಆಂದೋಲನವಾಗಿರಲಿ, ಕಾರ್ಮಿಕರು, ಆದಿವಾಸಿಗಳು ಅಥವಾ ದಲಿತರ ಹೋರಾಟವಾಗಿರಲಿ ಅಥವಾ ಮಹಿಳೆಯರ ಚಳವಳಿಯೇ ಆಗಿರಲಿ ಎಲ್ಲ ಕಡೆಗಳಲ್ಲೂ ಅವರು ಪ್ರೇರಕ ಶಕ್ತಿಯಂತೆ ಕಾರ್ಯ ನಿರ್ವಹಿಸಿದರು. ಸಂಯುಕ್ತ ಮಹಾರಾಷ್ಟ್ರ ಚಳವಳಿಗೆ ಅವರು ನೀಡಿದ ನಾಯಕತ್ವವು ಅತ್ಯಂತ ಸ್ಫೂರ್ತಿಯುತವಾಗಿತ್ತು. ಈ ಚಳವಳಿಯಲ್ಲಿ ಎಸ್.ಎಂ. ಜೋಶಿಯವರು ದ್ವಿಪಾತ್ರ ವಹಿಸಬೇಕಾಗಿತ್ತು. ಒಂದೆಡೆಯಿಂದ ಭಾಷಾವಾರು ರಾಜ್ಯದ ರಚನೆಗಾಗಿ ನಡೆದ ಹೋರಾಟವನ್ನು ಅವರು ಮೊನಚುಗೊಳಿಸಬೇಕಾಗಿತ್ತು. ಇನ್ನೊಂಡೆಯಿಂದ ಈ ಆಂದೋಲನವು ವಿವಿಧ ಸಮೂದಾಯಗಳ ಮಧ್ಯೆ ಕಹಿ ಭಾವನೆಗಳಿಗೆ ಮತ್ತು ದ್ವೇಷಕ್ಕೆ ಎಡೆಗೊಡದಂತೆ ಎಚ್ಚರಿಕೆ ವಹಿಸಬೇಕಾಗಿತ್ತು. ಎಸ್.ಎಂ. ಜೋಶಿಯವರು ಜನತಾಂತ್ರಿಕ ಸಮಾಜವಾದಕ್ಕೆ ತೋರಿದ ಅಚಲ ನಿಷ್ಠೆಯಿಂದ ಸಂಯುಕ್ತ ಮಹಾರಾಷ್ಟ್ರದ ಪರಿಕಲ್ಪನೆಗೆ ಹೇಗೆ ಒಂದು ಸಂಕೇತವಾಗಿ ನಿಂತಿದ್ದರೋ ಅದೇ ರೀತಿ ಸಮಾನತೆ (ಸಮತಾ) ಮತ್ತು ಅನುಕಂಪ (ಮಮತಾ) ಗಳಿಗೂ ಅವರು ಪ್ರತೀಕವಾಗಿ ನಿಂತಿದ್ದರು.

ಜೀವನದುದ್ದಕ್ಕೂ ಅವರು ಮಹಾತ್ಮಗಾಂಧಿ ಆಚಾರ್ಯ ನರೇಂದ್ರ ದೇವ್ ಜಯಪ್ರಕಾಶ್ ನಾರಾಯಣ್, ಸಾನೆ ಗುರೂಜಿಯವರ ಮಾನವತಾವಾದದ ಸಂದೇಶಕ್ಕೆ ನಿರಂತರವಾಗಿ ಸ್ಪಂದಿಸಿದ್ದರೋ ಅದೇ ಪ್ರಮಾಣದಲ್ಲಿ ಅವರು ಡಾ. ರಾಮಮನೋಹರ

ಲೋಹಿಯಾ ಅವರ ಸಾಮಾಜಿಕ ಸಮಾನತೆಯ ಸಿದ್ಧಾಂತದಿಂದಲೂ ಅಷ್ಟೇ ಮಟ್ಟಿನ ಸ್ಫೂರ್ತಿಯನ್ನು ಪಡೆದಿದ್ದರು. ಸಮಾಜದ ದುರ್ಬಲ ವರ್ಗಗಳಿಗೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ, ಹಿಂದುಳಿದ ವರ್ಗದವರಿಗೆ ಹಾಗೂ ದಮನಕ್ಕೆ ಒಳಗಾದ ಹಿಂದುಳಿದ ವರ್ಗಗಳಿಗೆ ಸಮಾನ ಅವಕಾಶ ದೊರೆಯಬೇಕೆಂಬ ಸಿದ್ಧಾಂತವನ್ನು ಅವರು ಪೂರ್ತಿಯಾಗಿ ಅಂಗೀಕರಿಸಿದ್ದರು.

ರಾಜಕಾರಣಿಗಳು ಯಾವುದೇ ಒಂದು ರಾಜಕೀಯದಲ್ಲಿ ಸಾಧನೆಯನ್ನು ಮಾಡಿದಾಗ ಅವರಿಗೆ ಪುಷ್ಪಗುಚ್ಛದ ಸ್ವಾಗತ ದೊರೆಯುವುದು ಸಾಮಾನ್ಯ ಆದರೆ ದಲಿತರಿಗಾದ ಅನ್ಯಾಯದ ವಿರುದ್ಧ ಹೋರಾಟದಲ್ಲಿ ಅವರು ಮುಂಚೂಣಿಯಲ್ಲಿದ್ದಾಗ ಅವರು ಪರಂಪರವಾದಿಗಳಿಂದ ಚಪ್ಪಲಿಗಳ ಹಾರವನ್ನು ಸ್ವೀಕರಿಸಬೇಕಾಯಿತು. ಆದರೆ ಈ ಚಪ್ಪಲಿಗಳ ಹಾರವನ್ನು ಅವರ ಸಾಮಾಜಿಕ ಕಳಕಳಿಯಿಂದಾಗಿ ಮತ್ತು ಸಮಾಜವಾದಿ ಪ್ರಜ್ಞೆಯಿಂದಾಗಿ ಒಂದು ಆಭರಣದಂತೆ ಭೂಷಣವಾಗಿ ಪರಿಣಮಿಸಿತು. ೧೯೭೫ರಲ್ಲಿ ತುರ್ತು ಪರಿಸ್ಥಿತಿ ಘೋಷಿತವಾದಾಗ ಅದರ ಕರಾಳ ಛಾಯೆ ಪಸರಿಸಿ ಅದರಲ್ಲಿ ಜಯಪ್ರಕಾಶ್ ನಾರಾಯಣ್ ಮತ್ತು ಎಸ್.ಎಂ. ಜೋಶಿಯವರು ಮತ್ತೆ ಹತ್ತಿರವಾದರು. ಈ ದಿನಗಳಲ್ಲಿ ಎಸ್.ಎಂ. ಜೋಶಿಯವರು ಜಯಪ್ರಕಾಶ್ ನಾರಾಯಣ್ ಅವರ ನಾಯಕತ್ವದ ಅಡಿಯಲ್ಲಿ ಎರಡನೇ ಸ್ವಾತಂತ್ರ್ಯ ಸಮರದ ದೀವಟಿಗೆಯನ್ನು ಮತ್ತೆ ಎತ್ತಿ ಹಿಡಿಯಲು ಸರ್ವ ಪ್ರಯತ್ನ ನಡೆಸಿದರು. ತುರ್ತು ಪರಿಸ್ಥಿತಿಯು ೧೯೭೭ರಲ್ಲಿ ಗೊಂಡಿತು. ಇದು ಜೆಪಿ ಮತ್ತು ಎಸ್.ಎಂ. ಅವರ ಪಾಲಿಗೆ ಅವರ ಜೀವಿತದ ಅವಧಿಯಲ್ಲೇ ಅತ್ಯಂತ ಸಂತಸದ ಕ್ಷಣವಾಗಿತ್ತು.

ಅದೇ ರೀತಿ ಜನತಾ ಸರ್ಕಾರದ ಪತನದ ಕ್ಷಣವು ಅವರ ಪಾಲಿಗೆ ಅಷ್ಟೇ ದುಃಖಕರವಾದ ಮತ್ತು ಕರಾಳವಾದ ಒಂದು ಅನುಭವವಾಗಿತ್ತು. 'ಕೈಯಾರೆ ನೆಟ್ಟು ಬೆಳೆಸಿದ ತೋಟ ತಮ್ಮ ಕಣ್ಣ ಮುಂದೆಯೇ ಸಂಪೂರ್ಣವಾಗಿ ಧ್ವಂಸವಾಗಿ ಹೋಯಿತಲ್ಲ' ಎಂದು ಜಯಪ್ರಕಾಶ್ ನಾರಾಯಣ್ ಅವರು ಆಕ್ರೋಶ ವ್ಯಕ್ತಪಡಿಸಿದರು. 'ಇದೊಂದು ಮಹಾ ದ್ರೋಹ' ಎಂದು ಜೋಶಿಯವರು ಹೇಳಿದರು. ಆದರೆ ಚದುರಿ ಹೋದ ಜನತಾ ಪಕ್ಷವನ್ನು ಮತ್ತೆ ಒಂದುಗೂಡಿಸುವ ದಿಸೆಯ ಪ್ರಯತ್ನದಲ್ಲಿ ಹೊಸ ಆಶಾವಾದವನ್ನು ಕಂಡು ಕೊಂಡರು. ಅಂದಿನ ಅನಿರ್ಣಾಯಕ ಕ್ಷಣಗಳಲ್ಲಿ ಚದುರಿ ಹೋದ ಶಕ್ತಿಗಳೆಲ್ಲವನ್ನು ಒಂದುಗೂಡಿಸಲು ಜೋಶಿಯವರಂತಹ ನೈತಿಕ ಶಕ್ತಿ ಅಗತ್ಯವಾಗಿತ್ತು. ಆದರೆ ಅದೇ ದಿನಗಳಲ್ಲಿ ದೇಶ ಜೋಶಿಯವರನ್ನು ಕಳೆದುಕೊಂಡಿತು.

ಯಾವ ಮೌಲ್ಯಗಳಿಗಾಗಿ ಮತ್ತು ಯಾವ ಸಿದ್ಧಾಂತಗಳಿಗಾಗಿ ಜೋಶಿಯವರು ಬದುಕಿದರೋ ಜೀವನದುದ್ದಕ್ಕೂ ಹೋರಾಟ ನಡೆಸಿದರೋ ಅದು ಮುಂದಿನ ಪೀಳಿಗೆಯವರಿಗೂ ಒಂದು ಪ್ರೇರಕ ಶಕ್ತಿಯಾಗಲಿದೆ. ಜೋಶಿಯವರಂತಹ ವ್ಯಕ್ತಿಗಳು ಮರಣಾನಂತರದಲ್ಲೂ ಚಿರಂಜೀವಿಗಳಾಗಿಯೇ ಉಳಿಯುತ್ತಾರೆ.

## ಅಧ್ಯಾಯ - ೫

# ಎಸ್.ಎಂ. ಜೋಶಿ ಓರ್ವ ಮಹಾನ್ ದೇಶಾಭಿಮಾನಿ

*ಸುರೇಂದ್ರನಾಥ ದ್ವಿವೇದಿ

ದಿವಂಗತ ಎಸ್.ಎಂ. ಜೋಶಿಯವರು ಓರ್ವ ಸಂಸತ್ ಸದಸ್ಯ ಎಂಬುದಕ್ಕಿಂತ ಹೆಚ್ಚಾಗಿ ಓರ್ವ ಸಮಾಜವಾದಿ ನೇತರನೆಂದು ಚಿರಪರಿಚಿತರಾಗಿದ್ದಾರೆ. ದೇಶದ ಸಮಾಜವಾದಿ ಚಳವಳಿಯಲ್ಲಿ ಅವರು ಅತ್ಯಂತ ಹಿರಿಯ ಹಾಗೂ ಘನತೆವೆತ್ತ ಧುರೀಣರಾಗಿದ್ದಾರೆ.

ಅವರು ಬಹುದೀರ್ಘಕಾಲ ಶಾಸಕರಾಗಿ ಕಾರ್ಯನಿರ್ವಹಿಸಿದವರಾದರೂ ಅವರು ಸಂಸತ್ತಿನಲ್ಲಿ ಇದ್ದದ್ದು ಅತಲ್ಪ ಅವಧಿಗೆ. ನಾಲ್ಕನೇ ಲೋಕಸಭೆಯಲ್ಲಿ ಒಂದೇ ಒಂದು ಅವಧಿಗೆ. ನಾನು ಲೋಕಸಭೆಯಲ್ಲಿ ಸಮಾಜವಾದಿ ಗುಂಪಿನ ನಾಯಕನಾಗಿದ್ದೆ. ಈ ಗುಂಪು ಅನಂತರ ಸಂಯುಕ್ತ ಸಮಾಜವಾದಿ ಪಕ್ಷ ಮತ್ತು ಪ್ರಜಾ ಸೋಷಲಿಸ್ಟ್ ಪಾರ್ಟಿಗಳಾಗಿ ವಿಭಜಿತವಾಯಿತು. ನಾನು ಪಿ.ಎಸ್.ಪಿ ಗುಂಪಿನ ನಾಯಕನಾಗಿದ್ದೆ. ಆದರೆ ಲೋಕಸಭೆಯ ಅವಧಿಯುದ್ದಕ್ಕೂ ನಾವೆಲ್ಲರೂ ಒಂದುಗೂಡಿಯೇ ಕಾರ್ಯ ನಿರ್ವಹಿಸಿದೆವು. ನಮ್ಮೆಲ್ಲರಲ್ಲಿ ಹಿರಿಯರಾಗಿದ್ದ ಎಸ್.ಎಂ. ಜೋಶಿಯವರು ಈ ಎರಡು ಗುಂಪುಗಳ ನಡುವೆ ಮತ್ತೆ ಸಹಮತ ಏರ್ಪಡುವಂತೆ ಮಾಡುವಲ್ಲಿ ಮಹತ್ತರ ಪಾತ್ರ ವಹಿಸಿದರು.

ಮೂಲತಃ ಅವರು ಓರ್ವ ಕಾರ್ಮಿಕ ಧುರೀಣ ಹಾಗೂ ರಾಜಕೀಯ ನಾಯಕರಾಗಿದ್ದರು. ಹಾಗಾಗಿ ಸಹಜವಾಗಿಯೇ ಲೋಕಸಭೆಯಲ್ಲಿ ಅವರು ಹೆಚ್ಚಾಗಿ ಕಾರ್ಮಿಕರ ಸಮಸ್ಯೆಗಳ ಬಗ್ಗೆ ಮತ್ತು ರಾಜಕೀಯ ವಿಷಯಗಳ ಮೇಲೆ ಮಾತನಾಡುತ್ತಿದ್ದರು. ಬಹುತೇಕ ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನೇ ಕೇಳುತ್ತಿದ್ದರು. ಲೋಕಸಭೆಯ ಕಲಾಪಗಳಲ್ಲಿ ಹೆಚ್ಚಾಗಿ ಅವರು ಪಾಲ್ಗೊಳ್ಳಲಿಲ್ಲವಾದರೂ ಅವರು ಮಾತನಾಡಿದಾಗಲೆಲ್ಲ ಅಥವಾ ಯಾವುದಾದರೂ ವಿಷಯವನ್ನು ಪ್ರಸ್ತಾಪಿಸಿದಾಗಲೆಲ್ಲ ಪ್ರತಿಯೊಬ್ಬರೂ ತದೇಕ ಚಿತ್ತದಿಂದ ಅವರ ಮಾತಗಳನ್ನು ಆಲಿಸುತ್ತಿದ್ದರು. ಅಷ್ಟು ಮಾತ್ರವಲ್ಲಿ ಸಂಬಂಧಪಟ್ಟ ಕೇಂದ್ರ ಸಚಿವರ ಗಮನವನ್ನು ಅವರು ತಮ್ಮ ಕಡೆಗೆ ಸೆಳೆಯುತ್ತಿದ್ದರು. ಅವರು ಯಾವುದೇ ವಿಷಯವನ್ನಾದರೂ ಪಕ್ಷಾತೀತ ದೃಷ್ಟಿಯಿಂದ ನೋಡುತ್ತಿದ್ದರು. ಅತ್ಯಂತ ವಸ್ತುನಿಷ್ಠವಾಗಿ ಮುಂದಿಡುತ್ತಿದ್ದರು. ಹಾಗಾಗಿ ಅವರ ಮಾತು ಸರ್ಕಾರದ ಮೇಲೆ ಮಾತ್ರದಲ್ಲಿ ಇಡೀ ಸದನದ ಮೇಲೆ ಪರಿಣಾಮ ಬೀರುವಲ್ಲಿ ಶಕ್ತವಾಗುತ್ತಿತ್ತು. ಎಸ್.ಎಂ. ಎಂದೇ ಚಿರಪರಿಚಿತರಾಗಿದ್ದ ನಮ್ಮ ಮಿತ್ರ ಜೋಶಿಯವರು ಸಮಾಜವಾದಿ ಚಳವಳಿಯ ಓರ್ವ

---

*ಶ್ರೀ ಸುರೇಂದ್ರನಾಥ ತ್ರಿವೇದಿ ಅವರು ಅರುಣಾಚಲ ಪ್ರದೇಶದ ಮಾಜಿ ರಾಜ್ಯಪಾಲರು.

ಗಣ್ಯ ನೇತಾರರಾಗಿದ್ದುದ್ದಲ್ಲದೆ ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯ ಓರ್ವ ಖ್ಯಾತ ಧುರೀಣರೂ ಆಗಿದ್ದರು. ತಮ್ಮ ಸುದೀರ್ಘ ರಾಜಕೀಯ ಜೀವನದಲ್ಲಿ ಮಹಾತ್ಮ ಗಾಂಧೀಜಿ, ನೇತಾಜಿ ಸುಭಾಷ್ ಚಂದ್ರ ಬೋಸ್ ಮತ್ತು ಜಹರಲಾಲ್ ನೆಹರು ಅವರೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ದೇಶದ ರಾಜಕಾರಣದಲ್ಲಿ ಅವರು ತಮ್ಮದೇ ಆದ ಒಂದು ಸ್ಥಾನವನ್ನು ಕಲ್ಪಿಸಿಕೊಂಡಿದ್ದರು. ಒಂದು ಹಂತದಲ್ಲಿ ಅವರು ಸಮಗ್ರ ಮಹಾರಾಷ್ಟ್ರದ ಮುಖವಾಣಿಯಾಗಿ, ವಕ್ತಾರರಾಗಿ ನಿಂತಿದ್ದರು. ಅದಕ್ಕೆ ಸಂಯುಕ್ತ ಮಹಾರಾಷ್ಟ್ರ ಸಮಿತಿ ಚಳವಳಿಯನ್ನು ಅತ್ಯಂತ ದಿಟ್ಟತನದಿಂದ ಮತ್ತು ಧೈರ್ಯದಿಂದ ಮುನ್ನಡೆಸಿದ್ದು ಮತ್ತು ಅದರಲ್ಲಿ ಅದ್ಭುತ ಯಶಸ್ಸನ್ನು ಸಾಧಿಸಿದ್ದೇ ಮುಖ್ಯ ಕಾರಣ. ಮಹಾರಾಷ್ಟ್ರದ ಜನರು ಬಹುಮಟ್ಟಿಗೆ ಅವರನ್ನು ಓರ್ವ ದೇವದೂತನಂತೆ ಕಾಣುತ್ತಿದ್ದರು. ಒಂದು ಹಂತದಲ್ಲಿ ಅವರು ಆಧುನಿಕ ಮಹಾರಾಷ್ಟ್ರ ರಾಜ್ಯದ ನಿರ್ಮಾತೃಗಳಲ್ಲಿ ಒಬ್ಬಗಾರಿದ್ದಾರೆ. ಕಾರ್ಮಿಕ ಚಳವಳಿಯೊಂದಿಗೆ ಭಾರತೀಯ ಸಮಾಜವಾದಿ ಚಳವಳಿಯ ಸಂಸ್ಥಾಪಕರಾಗಿಯೇ ಅವರು ಮಾನ್ಯರಾಗಿದ್ದಾರೆ. ಈ ಚಳವಳಿಯಲ್ಲಿ ನಾನು ಮೂವತ್ತು ವರ್ಷಗಳಿಗೂ ಹೆಚ್ಚು ಕಾಲ ಒಟ್ಟಾಗಿ ದುಡದೆವು. ಜೋಶಿಯವರನ್ನು ಆಚಾರ್ಯ ನರೇಂದ್ರದೇವ್, ಜಯಪ್ರಕಾಶ್ ನಾರಾಯಣ ಅವರಂತಹ ಮಹಾನ್ ಸಮಾಜವಾದಿ ನೇತಾರರ ಸಾಲಿಗೆ ಸೇರಿಸಬಹುದಾಗಿದೆ. ಜಯಪ್ರಕಾಶ್ ನಾರಾಯಣ್ ಜೋಶಿಯವರಲ್ಲಿ ಅಪಾರ ವಿಶ್ವಾಸ ಇರಿಸಿದ್ದರು ಮತ್ತು ಜೀವನದ ಕೊನೆಯ ತನಕವೂ ಜಯಪ್ರಕಾಶ್ ನಾರಾಯಣ್ ಅವರ ಅತ್ಯಂತ ನಿಷ್ಠಾವಂತ ಅನುಯಾಯಿಗಳಲ್ಲಿ ಒಬ್ಬರಾಗಿ ಉಳಿದಿದ್ದರು. ಜಯಪ್ರಕಾಶ್ ನಾರಾಯಣ್ ಅವರು ಸಾರ್ವಜನಿಕ ಉದ್ದೇಶಕ್ಕಾಗಿ ಸ್ಥಾಪಿಸಿದ್ದ ಎಲ್ಲ ಟ್ರಸ್ಟ್‌ಗಳು ಮತ್ತು ತಾವು ಭಾಗಿಯಾಗಿದ್ದ ಎಲ್ಲ ಸಂಘಟನೆಗಳ ಹೊಣೆಗಾರಿಕೆಯನ್ನು ಅವರಿಗೆ ವಹಿಸಿಕೊಟ್ಟಿದ್ದರು.

ಎಸ್.ಎಂ. ಅತ್ಯಂತ ಸೌಹಾರ್ದಶೀಲ ಮತ್ತು ಅತ್ಯಂತ ಸ್ನೇಹಮಯಿ ವ್ಯಕ್ತಿತ್ವದವರಾಗಿದ್ದರು. ತಮ್ಮ ಸರಳತೆ ಮತ್ತು ಪ್ರಾಮಾಣಿಕತೆಯಿಂದಾಗಿ ಅವರು ಎಲ್ಲರ ಮನಗೆದ್ದಿದ್ದರು. ವಹಿಸಿಕೊಂಡ ಎಲ್ಲ ಕೆಲಸಗಳನ್ನು ಅವರು ಯಶಸ್ವಿಯಾಗಿಯೇ ಪೂರೈಸಿದ್ದರು. ಅವರು ಅಂದುಕೊಂಡಿದ್ದ ಸಾಂಸ್ಕೃತಿಕ ಚಟುವಟಿಕೆಗಳು ಸೋಷಿಯಲಿಸ್ಟ್ ಪಾರ್ಟಿಗೆ ಮಾತ್ರವಲ್ಲ ಬದಲಾಗಿ ಇಡೀ ದೇಶದ ಜನಸಮುದಾಯವನ್ನು ಪಸರಿಸಿದ್ದವು. ಶ್ರೀಯುತರು ರಾಷ್ಟ್ರ ಸೇವಾದಳದ ಸಂಸ್ಥಾಪಕರಲ್ಲಿ ಒಬ್ಬರಾಗಿದ್ದರು. ಯುವಜನತೆಯಲ್ಲಿ ಸಾರ್ವಜನಿಕ ಸೇವಾಸಕ್ತಿಯನ್ನು ಚಿಗುರಿಸಿ ಅವರನ್ನು ಬೆಳೆಸಿದ್ದೇ ಜೋಶಿಯವರ ಒಂದು ದೊಡ್ಡ ಕೊಡುಗೆ. ಅಂತಹ ಯುವಕರು ಒಂದು ಮಹಾರಾಷ್ಟ್ರದ ಸಾರ್ವಜನಿಕ ವಲಯಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಜೋಶಿಯವರ ಈ ಕೊಡಿಗೆಯನ್ನು ನಾವು ಎಂದಿಗೂ ಮರೆಯುವಂತಿಲ್ಲ. ಗಾಂಧೀಜಿಯವರ ತತ್ವ ಆದರ್ಶಗಳನ್ನು ತಮ್ಮಲ್ಲಿ ರೂಢಿಸಿಕೊಂಡಿದ್ದು ಮಾತ್ರವಲ್ಲ ತಮ್ಮ ಜೀವನದಲ್ಲಿ ಅವುಗಳನ್ನು ಅಳವಡಿಸಿಕೊಂಡದ್ದು ಅವರ ವಿಶೇಷತೆ.

ಜೀವನದುದ್ದಕ್ಕೂ ತಮ್ಮೆಲ್ಲ ಸಮಯ ಮತ್ತು ಶಕ್ತಿಯನ್ನು ರಾಷ್ಟ್ರದ ಮುಂದಿದ್ದ ಧ್ಯೇಯಗಳಿಗಾಗಿಯೇ ಮೀಸಲಿಟ್ಟಿದ್ದ ಅವರು ಸ್ವಂತಕ್ಕೆ ಯಾವುದೇ ಆಸ್ತಿಪಾಸ್ತಿಯನ್ನು ಮಾಡಿಕೊಂಡಿರಲಿಲ್ಲ. ಅವರ ಆರ್ಥಿಕ ಪರಿಸ್ಥಿತಿ ಹೇಗಿತ್ತೆಂದರೆ ಅವರ ಜೀವನದ ಕಟ್ಟ ಕಡೆಯಲ್ಲಿ ಅವರನ್ನು ಕಾಡಿದ ಕ್ಯಾನ್ಸರ್ ಚಿಕಿತ್ಸೆಗೂ ಅವರಲ್ಲಿ ಹಣ ಇರಲಿಲ್ಲ. ಸಾವಿಗೆ ಮುನ್ನ ಅವರು ಅಗಾಧ ಯಾತನೆಗೆ ಗುರಿಯಾದರು. ಆದರೆ ದೇಶದ ಉದ್ದಗಲಗಳಲ್ಲಿ ಇದ್ದ ಅವರ ಸ್ನೇಹಿತರು ಮತ್ತು ಬೆಂಬಲಿಗರು ಸಾಧ್ಯವಾದಷ್ಟು ಮಟ್ಟಿಗೆ ನೆಮ್ಮದಿಯಿಂದ ಇರುವಂತೆ ನೋಡಿಕೊಂಡರು. ಅವರು ಅದೇ ಪ್ರಜ್ಞಾವಸ್ಥೆಯಲ್ಲಿದ್ದ ಕೊನೆಯ ದಿನಗಳಲ್ಲು ಕೂಡಾ ದೇಶದ ಕುರಿತಾಗಿಯೇ ಏನೇನೋ ಗುಣಗುಣಿಸುತ್ತಿದ್ದರೆಂದು ಸದಾ ಅವರ ಹಾಸಿಗೆಯ ಪಕ್ಕದಲ್ಲೇ ಇರುತ್ತಿದ್ದ ಅವರ ಒಡನಾಡಿಗಳು ಹೇಳುತ್ತಿದ್ದರು. ಅವರ ನಿಧನದಿಂದ ನಾವು ಓರ್ವ ಮಹಾನ್ ನಾಯಕನನ್ನು ಕಳೆದುಕೊಂಡಿದ್ದೇವೆ. ಓರ್ವ ಮಹಾನ್ ಮಿತ್ರನನ್ನು ಕಳೆದುಕೊಂಡಿದ್ದೇವೆ. ಅವರ ಅಗಲಿಕೆಯಿಂದ ದೇಶವು ಓರ್ವ ಮಹಾನ್ ಸುಪುತ್ರನನ್ನು ಕಳೆದುಕೊಂಡಂತಾಗಿದೆ.

# ಅಧ್ಯಾಯ - 6

## ನನ್ನ ದೃಷ್ಟಿಯಲ್ಲಿ ಎಸ್.ಎಂ.

ಮಧುಲಿಮಯೇ*

ಆಧುನಿಕ ಭಾರತದ ಇತಿಹಾಸದಲ್ಲಿ ೧೯೩೭ ಒಂದು ಅತ್ಯಂತ ಪ್ರಮುಖ ವರ್ಷವಾಗಿದೆ. ಆ ವರ್ಷದ ಆರಂಭದಲ್ಲಿ ೧೯೩೫ರ ಭಾರತ ಸರ್ಕಾರ ಕಾಯ್ದೆಯಡಿಯಲ್ಲಿ (Government of India Act) ತಾತ್ಪೂರ್ವಕ ಪ್ರಜಾಪ್ರತಿನಿಧಿ ಸಭೆ (ಪ್ರಾವಿಷನಲ್ ಅಸೆಂಬ್ಲಿ) ಗೆ ಚುನಾವಣೆಗಳು ನಡೆದವು. ಮದ್ರಾಸ್, ಸಂಯುಕ್ತ ಪ್ರಾಂತಗಳು (ಇಂದಣ ಇಡೀ ಉತ್ತರಭಾರತ) ಬಿಹಾರ, ಮಧ್ಯಪ್ರದೇಶ ಮತ್ತು ಒರಿಸ್ಸಾಗಳಲ್ಲಿ ಕಾಂಗ್ರೆಸ್ ಪಕ್ಷವು ಸಂಪೂರ್ಣ ಬಹುಮತ ಗಳಿಸಿತು. ಆದರೆ ಮುಂಬಯಿ ಪ್ರಾಂತದಲ್ಲಿ ಎರಡು ಮೂರು ಸ್ಥಾನಗಳು ಕೊರತೆಯಿಂದಾಗಿ ಪೂರ್ಣ ಬಹುಮತ ಗಳಿಸಲು ಅದಕ್ಕೆ ಸಾಧ್ಯವಾಗಿರಲಿಲ್ಲ. ಆದರೆ ಎರಡು ಅಥವಾ ಮೂರು ಮಂದಿ ಸ್ವತಂತ್ರ ಸದಸ್ಯರ ಬೆಂಬಲಗಳಿಸುವುದು ಕಾಂಗ್ರೆಸ್ ಪಕ್ಷದ ಪಾಲಿಗೆ ಅತ್ಯಂತ ಸರಳವಾದ ಕಾರ್ಯಭಾರವಾಗಿತ್ತು. ವಾಯುವ್ಯ ಗಡಿ ಪ್ರಾಂತದಲ್ಲಿ ಕಾಂಗ್ರೆಸ್ ಪಾರ್ಟಿ ೫೦ ಸ್ಥಾನಗಳಲ್ಲಿ ಗೆದ್ದುಕೊಂಡಿತು. ಅಲ್ಲಿ ಇತರ ಗುಂಪುಗಳ ಬೆಂಬಲವನ್ನುಗಳಿಸುವಲ್ಲೂ, ಕಾಂಗ್ರೆಸ್ ಪಕ್ಷ ಯಶಸ್ವಿಯಾಯಿತು. ಅಸ್ಸಾಂನಲ್ಲೂ ಇತರ ಪಕ್ಷಗಳ ಜೊತೆ ಕೈಜೋಡಿಸಿತು. ಹೀಗೆ ಕಾಂಗ್ರೆಸ್ ಪಾರ್ಟಿಯ ನೇತೃತ್ವದಲ್ಲಿ ಎಂಟು ಪ್ರಾಂತ್ಯಗಳಲ್ಲಿ ಸಚಿವ ಸಂಪುಟ ರಚಿಸಲಾಯಿತು. ಜನರು ಅದನ್ನು ಪ್ರವರ್ಧಮಾನಕ್ಕೆ ಬರುತ್ತಿರುವ ಒಂದು ಹೊಸ ಶಕ್ತಿಯಾಗಿ ಕಾಣತೊಡಗಿದರು. ಜನಸಮುದಾಯದಲ್ಲಿ ಉತ್ಸಾಹ ತುಂಬಿತು. ರೈತರು ಮತ್ತು ಕಾರ್ಮಿಕ ಚಳವಳಿಗಳ ಹಿಂದೆ ಚಳವಳಿಗಳನ್ನು ಸಂಘಟಿಸಿದರು. ಅದೇ ವೇಳೆಗೆ ವಾಮವಾದಿಗಳ ಚಟುವಟಿಕೆಗಳೂ ಆರಂಭವಾದವು.

ನನ್ನ ಜೀವನದಲ್ಲೂ ೧೯೩೭ ರ ವರ್ಷ ಪ್ರಮುಖವಾಗಿತ್ತು. ಅದಕ್ಕೆ ಮುಂಚಿನ ಮೂರು-ನಾಲ್ಕು ವರ್ಷಗಳ ಅವಧಿಯನ್ನು ನಾನು ಅಧ್ಯಯನಕ್ಕಾಗಿ ಮೀಸಲಿಟ್ಟಿದ್ದೆ. ಪುಣೆಯ ನಗರ ಗ್ರಂಥಾಲಯ ನನ್ನ ಅಚ್ಚುಮೆಚ್ಚಿನ ತಾಣವಾಗಿತ್ತು. ಆರಂಭದ ದಿನಗಳಲ್ಲಿ ನಾನು ಅಂತಾರಾಷ್ಟ್ರೀಯ ವಿದ್ಯಮಾನಗಳಲ್ಲಿ ವಿಶೇಷ ಆಸಕ್ತಿ ವಹಿಸುತ್ತಿದ್ದೆ. ಇಟಲಿ-ಅಬಿಸ್ಸಿನಿಯನ್ ಯುದ್ಧ ಹಿಟ್ಲರ್‌ನ ನೇತೃತ್ವದಲ್ಲಿ ನಡೆದ ರೀನ್‌ಲ್ಯಾಂಡ್‌ನ ಸ್ವಾಧೀನತೆ, ಚೀನಾದ ಮೇಲೆ ಜಪಾನ್ ನಡೆಸಿದ ದಾಳಿ, ಮತ್ತಿತರ ವಿಷಯಗಳು ನನ್ನ ಅತೀವ ಆಸಕ್ತಿಯ ವಿದ್ಯಮಾನಗಳಾಗಿದ್ದವು. ಆದರೆ ೧೯೩೭ರಲ್ಲಿ ಚುನಾವಣಾ ದೃಶ್ಯಾವಳಿ ನನ್ನಲ್ಲಿ ದೇಶದೊಳಗಿನ ರಾಜಕೀಯದತ್ತ ಆಸಕ್ತಿ ಮೊಳೆಸಿತು. ಆಗ ಪುಣೆ ವಿಧಾನಸಭಾ ಕ್ಷೇತ್ರಕ್ಕೆ ಲೋಕಷಾಹಿ

* ಮಧುಲಿಮಯೇ ಅವರು ಮಾಜಿ ಸಂಸತ್ ಸದಸ್ಯರು.

ಸ್ವರಾಜ್ ಪಕ್ಷ (ಹಿಂದೂ ಮಹಾಸಭಾ ಮತ್ತು ಕೇಸರಿ ಗುಂಪು) ಮತ್ತು ಕಾಂಗ್ರೆಸ್ ಪಕ್ಷಗಳ ನಡುವೆ ತೀವ್ರ ಪೈಪೋಟಿ ಇತ್ತು. ಅಂದಿನ ದಿನಗಳಲ್ಲಿ ಜೆ.ಫೇ ಗಡ್ಗೀಳ್ ಮತ್ತು ದೇವ್ ದಿನಪತ್ರಿಕೆಗಳ ಮುಖಪುಟಗಳ ಶೀರ್ಷಿಕೆಗಳಲ್ಲಿ ಕಂಡು ಬರುತ್ತಿದ್ದ ಪ್ರಮುಖ ಹೆಸರುಗಳಾಗಿದ್ದವು.

ಪುಣೆಯಲ್ಲಿ ನಡೆದ ಎರಡು ಚುನಾವಣಾ ಸಭೆಗಳಲ್ಲಿ ಜೆ.ಫೇ ಮತ್ತು ಗಾಡ್ಗೀಳ್ ಅವರ ಒಂದೆರಡು ಭಾಷಣಗಳನ್ನು ಕೇಳುವ ಸಂದರ್ಭವೂ ನನಗೆ ಒದಿಗಿತ್ತು. ಇದೇ ದಿನಗಳಲ್ಲಿ ತರುಣ ವಾಮವಾದಿ ನಾಯಕರಾದ ಎಸ್.ಎಂ.ಜೋಷಿ, ಎನ್.ಜಿ.ಗೋರೆ, ರಘುನಾಥ್ ಖಾಡಿಲ್ಕರ್, ಕೆ.ಎಸ್.ಫಡ್ಕೆ, ಜಿ.ಪಿ.ಖರೆ ಮತ್ತಿತರ ಹೆಸರುಗಳು ನನ್ನ ಕಿವಿಗೆ ಬಿದ್ದಿದ್ದವು. ಲೋಕಶಾಹಿ ಸ್ವರಾಜ್ ಪಕ್ಷ ಮತ್ತು ಹಿಂದೂವಾದಿಗಳ ಸೋಲು ರಾಷ್ಟ್ರೀಯವಾದಿಗಳಿಗೆ ಭಾರಿ ಸಂತಸವನ್ನೂ ತಂದು ಕೊಟ್ಟಿತ್ತು. ಇದನ್ನು ಬಹುಜನ ಸಮಾಜದ ವಿಜಯ ಎಂದೇ ವರ್ಣಿಸಲಾಯಿತು.

೧೯೩೭ರ ಮಧ್ಯಭಾಗದಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಮೇಲೆ ನಾನು ಫರ್ಗ್ಯುಸನ್ ಕಾಲೇಜ್ ಸೇರಿದೆ. ಇದಾದ ಕೆಲದಿನಗಳಲ್ಲೇ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬಂದಿತು. ಜನರ ನಿರೀಕ್ಷೆಗಳು ಮತ್ತು ಅಶೋತ್ತರಗಳು ಮುಗಿಲು ಮುಟ್ಟಿದವು. ಯುವಕರು ರಾಜಕೀಯ ಕೈದಿಗಳ ಬಿಡುಗಡೆ ವಿಷಯದಲ್ಲಿ ಬಹಳ ಕಾತರರಾಗಿದ್ದರು. ೧೯೨೨ರಲ್ಲಿ ಸ್ಥಾಪಿತವಾದ ಯೂತ್‌ಲೀಗ್‌ನ ಕಾರ್ಯಭಾರ ಆಗ ಅಂತಿಮ ಚರಣವನ್ನು ಪ್ರವೇಶಿಸಿತ್ತು. ೧೯೩೬ ರಲ್ಲಿ ಜೈಲಿನಿಂದ ಬಿಡುಗಡೆಯಾದ ನಂತರದಲ್ಲಿ ಎಸ್.ಎಂ. ಅವರು ಪ್ರಾಂತಿಯ ಯುವ ಮಂಡಳಿಯನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅಖಿಲ ಭಾರತ ವಿದ್ಯಾರ್ಥಿ ಒಕ್ಕೂಟ (ಆಲ್ ಇಂಡಿಯಾ ಸ್ಟೂಡೆಂಟ್ ಫೆಡರೇಷನ್) ಎಂಬ ಹೆಸರಿನಲ್ಲಿ ಹೊಸ ಸಂಘಟನೆಯನ್ನು ಹುಟ್ಟುಹಾಕಿದರು. ಸಾಮ್ರಾಜ್ಯವಾದದ ವಿರೋಧ ಮತ್ತು ರಾಷ್ಟ್ರೀಯವಾದವೇ ಅದರ ತಳಹದಿಯಾಗಿತ್ತು. ಈ ಸಂಘಟನೆ ಪಾಕಿಸ್ತಾನದ ಸಂಸ್ಥಾಪಕರಾದ ಮಹಮ್ಮದ್ ಅಲಿ ಜಿನ್ನ ಅವರ ಕೈಯಿಂದಲೆ ಉದ್ಘಾಟಿಸಲ್ಪಟ್ಟಿತು. ಇದನ್ನು ಕೇಳಿ ನಮ್ಮಲ್ಲಿ ಅನೇಕರು ಆಶ್ಚರ್ಯಪಡಬಹುದು. ೧೯೩೭ ರ ಮಧ್ಯಭಾಗದಲ್ಲಿ ಕಾಂಗ್ರೆಸ್ ತಾತ್ಕಾಲಿಕ ಸ್ವಾಯತ್ತತೆ ಅನುಷ್ಠಾನದ ಪ್ರಯೋಗವನ್ನು ಪ್ರಾರಂಭಿಸುವ ತನಕ ಜಿನ್ನಾ ಸಾಹೇಬರು ಕೂಡಾ ಅಖಂಡ ಭಾರತದ ಕಲ್ಪನೆಯನ್ನೇ ಹೊಂದಿದ್ದರು. ಹಾಗಾಗಿ ರಾಷ್ಟ್ರೀಯ ಏಕತೆ, ಸಮಗ್ರತೆ ಮತ್ತು ಸ್ವಾತಂತ್ರ್ಯಕ್ಕೆ ಬದ್ಧವಾಗಿದ್ದ ಮತ್ತು ಈ ಕಾರ್ಯಭಾರದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಸಂಘಟನೆಯೊಂದರ ಸಭೆಯಲ್ಲಿ ಭಾಗವಹಿಸಲು ಅವರಿಗೆ ಎಳ್ಳಿನ ಮೊನೆಯಷ್ಟು ಅಂಜಿಕೆ ಇರಲಿಲ್ಲ.

ಅಖಿಲಿ ಭಾರತ ವಿದ್ಯಾರ್ಥಿ ಒಕ್ಕೂಟವು ವಾಮವಾದಿಗಳ ಪ್ರಾಬಲ್ಯದಿಂದ ಕೂಡಿತ್ತು. ಕಮ್ಯುನಿಷ್ಟರೂ ಸಂಘಟಿತರಾಗಿರಲಿಲ್ಲ. ಅವರಲ್ಲಿ ಮೂರು ಗುಂಪುಗಳಿದ್ದವು.

ರಾಯಿಸ್ಟ್ ಗುಂಪು, ಕಾಂಗ್ರೆಸ್ ಸೋಷಲಿಸ್ಟ್ ಗುಂಪು ಮತ್ತು ಕಮ್ಯುನಿಸ್ಟ್ ಗುಂಪು. ಈ ಮೂರು ಗುಂಪುಗಳ ಮದ್ದೆ ತೀವ್ರ ಸ್ಪರ್ದೆ ಇದ್ದಿತು. ಆದರೆ ನೈಜ ರಾಷ್ಟ್ರೀಯವಾದ ಮತ್ತು ಸಾಮ್ರಾಜ್ಯವಾದ ವಿರೋಧಿ ನೀತಿಗೆ ಸಂಬಂಧಿಸಿದ ಪ್ರಶ್ನೆಗಳಲ್ಲಿ ಅವರಿಗೆ ಸಂಪೂರ್ಣ ಏಕಾಭಿಪ್ರಾಯವಿದ್ದಿತು. ೧೯೩೭ರ ಮಳೆಗಾಲದಲ್ಲಿ ಅಂಡಮಾನ್ ರಾಜಕೀಯ ಕೈದಿಗಳ ವಿಮೋಚನಾ ದಿನವನ್ನು ಆಚರಿಸಲಾಯಿತು. ಆ ದಿನ ಈಗಲೂ ನನ್ನ ನೆನಪಿನಲ್ಲಿದೆ. ಆ ದಿನ ನಮ್ಮ ಕಾಲೇಜನಲ್ಲಿ ಮುಷ್ಕರವಿತ್ತು ಮತ್ತು ಅದೇ ದಿನ ಸಂಜೆ ಶನಿವಾರ ಬಾಡ್ ಕ್ರಾಸಿಂಗ್ ಬಳಿ ಸಾರ್ವಜನಿಕ ಸಭೆ ಏರ್ಪಾಡಾಗಿತ್ತು. ಆ ಸಭೆಗೆ ನಾನು ನನ್ನ ಮಿತ್ರ ಅರವಿಂದ ಟಿಪ್ನಿಸ್ ಜೊತೆ ಹಾಜರಾಗಿದ್ದೆ. ಆ ಸಭೆಯಲ್ಲಿ ಬಾವು ಫಾಠಕ್ ಎಂಬ ತರುಣ ಕಮ್ಯುನಿಸ್ಟ್ ಮುಖಂಡನೋರ್ವ ಚೆನ್ನಾಗಿ ಮಾತನಾಡಿದ. ಅಂದು ಎಸ್.ಎಂ. ಅವರು ಮಾಡಿದ ಭಾಷಣವಂತೂ ಆಕರ್ಷಣೀಯವಾಗಿತ್ತು. ಅದು ಬೆಂಕಿಯನ್ನು ಉಗುಳುವ ಭಾಷಣವಾಗಿರಲಿಲ್ಲ. ಶಬ್ದಾಡಂಬರದ ವಾಗ್ಝರಿಯೂ ಆಗಿರಲಿಲ್ಲ. ಬದಲಾಗಿ ಅವರ ಪ್ರಾಮಾಣಿಕತೆ. ಧ್ಯೇಯನಿಷ್ಠೆ ಮತ್ತು ದಿಟ್ಟ ಧೋರಣೆಗಳ ಪ್ರತಿಬಿಂಬವಾಗಿತ್ತು. ಏಕೆಂದರೆ ಅವರು ಮಾತನಾಡಿದ ವಿಷಯಗಳು ಅವರ ಹೃದಯಾಂತರಾಳದಿಂದ ಬಂದಿದ್ದವು. ಅವು ನನ್ನ ಎಳೆಯ ಮನಸ್ಸಿನ ಮೇಲೆ ಅಗಾಧ ಪ್ರಭಾವ ಬೀರಿದವು ಹಾಗೂ ಈ ಸಂದರ್ಭದಲ್ಲಿ ಅವರ ಬಗ್ಗೆ ನನ್ನಲ್ಲಿ ಒಡಮೂಡಿದ ಅಭಿಪ್ರಾಯ ನನ್ನ ಜೀವನ ಪರ್ಯಂತವು ಬದಲಾಗದೆ ಹಾಗೆಯೇ ಉಳಿಯಿತು. ಅಂದಿನ ಇತರ ನಾಯಕರಿಗೆ ಹೋಲಿಸಿ ನೋಡಿದರೆ ಪ್ರಾಮಾಣಿಕತೆಯೇ ಜೋಶಿಯವರ ದೊಡ್ಡ ಶಕ್ತಿಯಾಗಿತ್ತು.

ನನ್ನ ಕಾಲೇಜಿನ ಮೊದಲು ವರ್ಷದ ವ್ಯಾಸಂಗದ ಅವಧಿಯಲ್ಲಿ ನಾನು ರಾಜಕೀಯದ ಓರ್ವ ಪ್ರೇಕ್ಷಕನಾಗಿದ್ದೆ. ಆ ದಿನಗಳಲ್ಲಿ ನನ್ನನೆಂದೂ ಸಕ್ರಿಯ ರಾಜಕೀಯದಲ್ಲಿ ನೇರವಾಗಿ ತೊಡಗಿಸಿಕೊಂಡಿರಲಿಲ್ಲ. ಅಂದಿನ ದಿನಗಳಲ್ಲಿ ಎಲ್ಲ ವಿದ್ಯಾರ್ಥಿಗಳು, ಸತ್ಯಾಗ್ರಹಿಗಳೇ ಆಗಿದ್ದರು. ಮತ್ತು ಎಲ್ಲರೂ ರಾಷ್ಟ್ರೀಯವಾದವನ್ನು ಮೈಗೂಡಿಸಿಕೊಂಡಿದ್ದರು ಎಂಬುದು ಇದರ ಅರ್ಥವಲ್ಲ. ಈಗಿನಂತೆಯೇ ಅಂದಿನ ವಿದ್ಯಾರ್ಥಿಗಳಲ್ಲೂ ಆಟೋಟ, ಸಿನಿಮಾ ಮತ್ತಿತರ ವಿಷಯಗಳಲ್ಲಿ ಆಕರ್ಷಣೆ ಇದ್ದೇ ಇದ್ದಿತು. ವಿದ್ಯಾರ್ಥಿ ಸಮುದಾಯದಲ್ಲಿ ಬೆರೆಳಣಿಕೆಯಷ್ಟು ಮಂದಿ ಮಾತ್ರವೇ ಸತ್ಯಾಗ್ರಹಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಆ ದಿನಗಳಲ್ಲಿ ಗೋವರ್ಧನ್ ಪಾರಿಖ್ ಎಂಬುವರು ನನ್ನ ಅಧ್ಯಾಪಕರಾಗಿದ್ದರು. ಅವರು ಓರ್ವ ರಾಯಿಸ್ಟ್ ಆಗಿದ್ದರು. ನಮ್ಮ ತರಗತಿಯಲ್ಲಿ ಒಂದಿಬ್ಬರು ವಿದ್ಯಾರ್ಥಿಗಳಿಗೆ ಕಮ್ಯುನಿಸ್ಟ್‌ರ ಬಗ್ಗೆ ಸಹಾನುಭೂತಿ ಇತ್ತು. ನಾನು ಮತ್ತು ನನ್ನ ಮಿತ್ರರಲ್ಲಿ ಎರಡು-ಮೂರು ಮಂದಿ (ಅರವಿಂದ ಟಿಪ್ನಿಸ್ ಮತ್ತು ಮಧು ಚಾಪೇಕರ್) ಸೋಷಲಿಸ್ಟ್ ಪಕ್ಷದ ಕಡೆಗೆ ಆಕರ್ಷಿತರಾಗಿದ್ದೆವು. ಅದಕ್ಕೆ ಕಾರಣಗಳೂ ಇಲ್ಲದಿರಲಿಲ್ಲ. ಆ ದಿನಗಳಲ್ಲಿ ಒಮ್ಮೆ ಶ್ರೀ ಅಚ್ಯುತ್ ಪಟವರ್ಧನ್ ಎಂಬುವರು ನಮ್ಮ ಕಾಲೇಜಿನಲ್ಲಿ ಅತ್ಯಂತ ಪ್ರಭಾವಶಾಲಿ ಭಾಷಣ ನೀಡಿದ್ದರು. ಅವರ ಭಾಷಣದ ವಿಷಯ

"ದಿಗಂತದಲ್ಲಿ ಯುದ್ಧದ ಕಾರ್ಮೋಡಗಳು" ಎಂಬುದಾಗಿತ್ತು. ಶ್ರೀ ಅಚ್ಯುತ ಪಟವರ್ಧನ್ ಅವರು ಸರಳವಾದ ವಿಷಯವನ್ನು ಕೂಡಾ ಒಂದು ಗಾಢ ಮತ್ತು ಗಂಭೀರ ವಿಷಯವಾಗಿ ಪರಿವರ್ತಿಸಿ ಶ್ರೋತೃಗಳನ್ನು ಮಂತ್ರಮುಗ್ಧರನ್ನಾಗಿಸುವ ಕಲೆಯಲ್ಲಿ ಪರಿಣಿತರಾಗಿದ್ದರು. ಅಂತಹ ಪ್ರೌಢಿಮೆಯ ಇಂಗ್ಲೀಷ್ ಭಾಷಣದ ಪ್ರಭಾವಕ್ಕೆ ನಾನು ಒಳಗಾಗಿದ್ದರೆ ಅದರಲ್ಲಿ ಅಚ್ಚರಿಯೇನೂ ಇಲ್ಲ.

ಆದೇ ರೀತಿ ಇನ್ನೊಂದು ಸಲ ಅಂಡಮಾನ್ ರಾಜಕೀಯ ಕೈದಿಗಳ ವಿಮೋಚನಾ ದಿನ ಸಭೆಯೊಂದರಲ್ಲಿ ಎಸ್.ಎಂ. ಅವರು ಮಾಡಿದ ಭಾಷಣವನ್ನು ನಾನು ಕೇಳಿ ಅಷ್ಟೇ ಪ್ರಭಾವಿತನಾಗಿದ್ದೆ. ನಾನು ಸೋಷಲಿಸ್ಟ್ ಪಾರ್ಟಿಯ ಕಡೆಗೆ ಆಕರ್ಷಿತನಾಗಿದ್ದರೂ ಕೂಡಾ ಈ ಚಳವಳಿಯ ಯುವ ಮುಖಂಡರೊಂದಿಗೆ ಪರಿಚಯಿಸಿಕೊಳ್ಳುವ ಸಂದರ್ಭ ನನಗೆಂದೂ ಬಂದಿರಲೇ ಇಲ್ಲ. ಇದಕ್ಕೆ ಕಾರಣ ನನ್ನ ಅಂತರ್ಮುಖಿ ಪ್ರವೃತ್ತಿ ಮತ್ತು ಸಂಕೋಚ ಸ್ವಭಾವ. ರಾಜಕೀಯ ಶಾಸ್ತ್ರ ಮತ್ತು ಇತಿಹಾಸದಲ್ಲಿ ಶ್ರೀ ಎಚ್.ಡಿ. ಕೇಲವಾಲ ಅವರು ನನ್ನ ಅಧ್ಯಾಪಕರಾಗಿದ್ದರು. ಅವರ ದೆಸೆಯಿಂದಾಗಿ ನಾನು ಎಸ್.ಎಂ.ಜೋಶಿಯವ ಸಂಪರ್ಕಕ್ಕೆ ಬಂದೆ. ನಮ್ಮ ಕಾಲೇಜಿನಲ್ಲಿ ಇತಿಹಾಸ ಸಂಘ ಇದ್ದಿತು ಮತ್ತು ವಾಡಿಕೆಯಂತೆ ವಿದ್ಯಾರ್ಥಿಗಳು ಅಲ್ಲಿನ ಸಭೆಗಳಲ್ಲಿ ತಮ್ಮ ಪ್ರಬಂಧಗಳನ್ನು ಮಂಡಿಸುತ್ತಿದ್ದರು. ಕೇಲವಾಲಜಿ ನನ್ನ ವಿಷಯದಲ್ಲಿ ಅತ್ಯಂತ ದಯಾಪರರಾಗಿದ್ದರು. ಅವರ ಸೂಚನೆ ಮೇರೆಗೆ ನಾನು ಗ್ರೀಕ್ ಸಂಸ್ಕೃತಿ ಮತ್ತು ಆಧುನಿಕ ಪಾಶ್ಚಾತ್ಯ ಸಮಾಜ ಕುರಿತು ಪ್ರಬಂಧ ಬರೆದೆ. ಆ ಉದ್ದೇಶಕ್ಕಾಗಿ ನಾನು ನಮ್ಮ ಕಾಲೇಜಿನ ಗ್ರಂಥ ಭಂಡಾರದಲ್ಲಿದ್ದ ಅನೇಕ ಪುಸ್ತಕಗಳನ್ನು ಓದಬೇಕಾಯಿತು. ಆ ವಿಷಯದಲ್ಲಿ ನನಗೆ ಸಮರ್ಪಕವಾದ ಪರಿಜ್ಞಾನ ಇರಲಿಲ್ಲ. ನನ್ನ ಪ್ರಬಂಧದಲ್ಲಿದ್ದ ಬಹುತೇಕ ವಿಚಾರಗಳು ಮತ್ತು ವಿಷಯಗಳು ಎರವಲು ಪಡೆದವುಗಳೇ ಆಗಿದ್ದವು. ಆದರೂ ಕೂಡಾ ನನ್ನ ಭಾಷಣ ಇತಿಹಾಸ ವಿಭಾಗದ ಉಪನ್ಯಾಸಕರನ್ನು ದಿಗಿಲುಗೊಳಿಸಿತು. ಅವರ ಅದನ್ನು ಬಹುವಾಗಿ ಪ್ರಶಂಸಿದರು. ಅದರಿಂದ ಪ್ರಭಾವಿತರಾಗಿ ನನ್ನ ಉಪನ್ಯಾಸಕರು ೧೯೩೫ ರ ಸಂವಿಧಾನ ಕಾಯ್ದೆಯ ಮೇಲೆ ಪ್ರಬಂಧವೊಂದನ್ನು ಬರೆಯುವಂತೆ ನನಗೆ ಪ್ರಚೋದನೆ ನೀಡಿದರು. ಕೇಲವಾಲಜಿ ಅವರು ವಿಭಿನ್ನ ಸಿದ್ಧಾಂತಗಳ ಪ್ರತಿಪಾದಕರಾಗಿದ್ದ ಮುಖಂಡರನ್ನು ಭೇಟಿಯಾಗುವಂತೆ ಸಲಹೆ ನೀಡಿದರು. ವಾಸ್ತವವಾಗಿ ಆ ಉದ್ದೇಶಕ್ಕಾಗಿ ನಾವು ಎಸ್.ಎಂ.ಅವರನ್ನು ಭೇಟಿಯಾಗಿದ್ದೆವು. ನಾವು ಅವರಿಗೆ ಪತ್ರವೊಂದನ್ನು ಬರೆದು ನಾವು ಅವರಲ್ಲಿಗೆ ಹೋಗುವ ದಿನಾಂಕ ಮತ್ತು ಸಮಯವನ್ನು ತಿಳಿಸಿದ್ದೆವು. ನಾವು ಮೂವರು ಆ ಪತ್ರಕ್ಕೆ ಸಹಿ ಹಾಕಿದ್ದೆವು.

ಎಸ್.ಎಂ. ಅವರು ನಾರಾಯಣ್‌ಪೇಟ್‌ನ ಮನೆಯೊಂದರ ತಾರಸಿಯ ಮೇಲಿನ ಕೊಠಡಿಯೊಂದರಲ್ಲಿ ಏಕಾಂಗಿಯಾಗಿ ವಾಸವಾಗಿದ್ದರು. ಅಲ್ಲಿಯ ತನಕ ತಾರಾಬಾಯಿಜಿ

ಜತೆ ಅವರ ಮದುವೆ ಆಗಿರಲಿಲ್ಲ. ಅವರ ಕೊಠಡಿ ಕಾಲೇಜಿನ ವಿದ್ಯಾರ್ಥಿಗಳ ಕೊಠಡಿಯನ್ನು ಹೋಲುತ್ತಿತ್ತು. ಆದರೆ ಅದು ತುಂಬಾ ಸರಳವಾಗಿತ್ತು. ಅತ್ಯಂತ ಅಚ್ಚುಕಟ್ಟಾಗಿಯೂ ಇದ್ದಿತು. ಒಂದು ಮಂಚ, ಒಂದು ಮೇಜು, ಒಂದು ಕುರ್ಚಿ, ಕೆಲವು ಪುಸ್ತಕಗಳು ಮತ್ತು ಭಾವುಕ ಭಂಗಿಯ ಜವಹರಲಾಲ್ ನೆಹರು ಅವರ ಒಂದು ಜನಪ್ರಿಯ ಭಾವಚಿತ್ರ ಯಾವಾಗಲೂ ಅವರ ಮೇಜಿನ ಮೇಲಿರುತ್ತಿದ್ದವು. ಅವರದು ಎತ್ತರದ ನಿಲುವು, ಆದರೆ ಕೃಶಕಾಯರಾಗಿದ್ದರು. ಗೌರವವರ್ಣ ಕಂದು ಕಣ್ಣುಗಳು, ತಲೆಯಲ್ಲಿ ದಟ್ಟ ಕೂದಲು. ನಾನು ಅವರಿಗೆ ನನ್ನ ಭೇಟಿಯ ಉದ್ದೇಶವನ್ನು ತಿಳಿಸಿದೆ. ಆದರೆ ೧೯೩೫ರ ಸಂವಿಧಾನ ಕಾಯಿದೆ ಕುರಿತು ಅವರು ನನ್ನೊಂದಿಗೆ ಹೆಚ್ಚೇನನ್ನು ಚರ್ಚಿಸಲಿಲ್ಲ. ಬದಲಾಗಿ ಈ ಕಾಯ್ದೆಯ ಕುರಿತು ಓದುವಂತೆ ಸಣ್ಣ ಟಿಪ್ಪಣಿಯೊಂದನ್ನು ನನ್ನ ಇಟ್ಟರು ಆದರೆ ಅವರು ಅವಸರದಲ್ಲೇನೂ ಇರಲಿಲ್ಲ. ನಮ್ಮೊಂದಿಗೆ ಸುದೀರ್ಘ ಕಾಲ ಹರಟೆ ಹೊಡೆದು ನಮ್ಮನ್ನು ಕಳುಹಿಸಿಕೊಟ್ಟರು. ಸ್ವಾತಂತ್ರ್ಯ ಹೋರಾಟ ಕುರಿತು ಬಹಳಷ್ಟು ಮಾತನಾಡಿದರು. ರಾಯ್ ದಿನಾಚರಣೆಗೆ ಸಂದರ್ಭದಲ್ಲಿ ಮುಂಬಯಿಯ ಚೌಪಾಟಿಯಲ್ಲಿ ನಡೆದ ಸಭೆಯೊಂದರಲ್ಲಿ ಮಾತನಾಡಿದ ಸಂದರ್ಭವನ್ನೂ ಅದಕ್ಕಾಗಿ ಎರಡು ವರ್ಷ ಕಠಿಣ ಶಿಕ್ಷೆಗೆ ಗುರಿಯಾದುದನ್ನೂ ತಮಾಷೆಯ ಧಾಟಿಯಲ್ಲಿ ನಮಗೆ ವಿವರಿಸಿದರು. ಅದೇ ವೇಳೆಗೆ ಹದಗೆಡುತ್ತಿರುವ ತಮ್ಮ ಆರೋಗ್ಯವನ್ನು ಕುರಿತು, ತಮ್ಮ ಬದುಕಿನಲ್ಲಿನ ಸುಖ-ದುಃಖಗಳ ಕುರಿತು ನಮ್ಮೊಂದಿಗೆ ಮಾತನಾಡಿದರು.

ಅನಂತರದಲ್ಲಿ ನನ್ನ ಪ್ರಬಂಧದ ಸಂಬಂಧದಲ್ಲಿ ನಾನು ಕನಿಷ್ಠ ಮೂರು ಬಾರಿಯಾದರೂ ಅವರನ್ನು ಭೇಟಿಯಾಗಿದ್ದೆ. ಆದರೆ ನಮ್ಮ ಮಾತುಕತೆಗಳಲ್ಲಿ ಸಂವಿಧಾನ ಕಾಯ್ದೆ ವಿಷಯ ಅಷ್ಟಾಗಿ ಪ್ರಾಮುಖ್ಯ ಪಡೆಯಲೇ ಇಲ್ಲ. ಆದರೆ ನಮ್ಮ ಚರ್ಚೆಯ ಮುಖ್ಯಾಂಶ ಸ್ವಾತಂತ್ರ್ಯ ಹೋರಾಟ ಹಾಗೂ ಸಮಾಜವಾದವೇ ಆಗಿರುತ್ತಿತ್ತು. ಆ ವಿಷಯುದಲ್ಲಿ ಆಗಲೇ ನನಗೆ ವಿಶೇಷ ಆಸಕ್ತಿ ಇತ್ತು. ಅದೇನಿದ್ದರೂ ಎಸ್.ಎಂ.ಅವರೊಂದಿಗಿನ ಭೇಟಿಗಳು ಮತ್ತು ಚರ್ಚೆಗಳು, ಅದರಲ್ಲೂ ಕುರಿತಾಗಿ ಅವರ ವ್ಯಕ್ತಿತ್ವ ನನ್ನ ಮೂಲ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ನನಗೆ ಸಹಾಯಕವಾದುವು.

ಹೊಸವರ್ಷದ ಆರಂಭದ ತಿಂಗಳುಗಳಲ್ಲಿ ಪ್ರಬಂಧಗಳನ್ನು ಬರೆಯುವುದೇ ನನಗೆ ಕೆಲಸವಾಗಿತ್ತು. ಉಳಿದ ತಿಂಗಳುಗಳು ವಾರ್ಷಿಕ ಪರೀಕ್ಷೆಯ ಸಿದ್ಧತೆಯಲ್ಲಿ ಕಳೆದುಹೋದವು. ಹಾಗಾಗಿ ಹಲವು ದಿನಗಳವರಗೆ ನನಗೆ ಎಸ್.ಎಂ. ಅವರ ಮನೆಗೆ ಹೋಗಲಾಗಲಿಲ್ಲ. ಆದರೆ ಪರೀಕ್ಷೆ ಮುಗಿದಂತೆಯೇ ಅವರನ್ನು ಭೇಟಿಯಾಗಲು ಮನೆಗೆ ಹೋದೆ. ನನಗೆ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ಚಟುವಟಿಕೆಗಳಲ್ಲಿ ಭಾಗವಹಿಸುವ ಅಭಿಲಾಷೆಯೂ ಇತ್ತು. ಸಮಾಜವಾದಿಗಳ ಸ್ಟಡಿ ಸರ್ಕಲ್‌ದಲ್ಲಿ ನಡೆಯುವ ಚರ್ಚೆಗಳಲ್ಲಿ ಪಾಲ್ಗೊಳ್ಳಲು ನಾನು ಉತ್ಸುಕನಾಗಿದ್ದೆ. ಎಸ್.ಎಂ.ಅವರ ಮನಸ್ಸಿನಲ್ಲಿ ಅದೇ ವಿಚಾರ

ಇದ್ದಿತ್ತೆಂದು ಕಾಣುತ್ತದೆ. ಅವರ ನನ್ನ ಆಸಕ್ತಿಯನ್ನು ತಿಳಿದಾಗ ಸಹಜವಾಗಿಯೇ ಬಹಳ ಸಂತಸಪಟ್ಟರು. ೧೯೩೮ರ ಮಾರ್ಚ್ ತಿಂಗಳ ಒಂದು ರಾತ್ರಿಯಲ್ಲಿ ನಡೆದ ಘಟನೆಯೊಂದನ್ನು ನಾನೆಂದಿಗೂ ಮರೆಯಲು ಸಾಧ್ಯವಿಲ್ಲ. ಈ ಘಟನೆ ನಿನ್ನೆ ಮೊನ್ನೆ ನಡೆದಂತೆ ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ಸ್ಪಡಿ ಸರ್ಕಲ್‌ನ ಸಭೆಗಳು ಪುಣೆಯಲ್ಲಿನ ನಾರಾಯಣರಾವ್ ಗೋರೆಯವರ ಬಂಗಲೆಯಲ್ಲಿ ನಡೆಯುತ್ತಿದ್ದವು. ಅಲ್ಲಿ ಸೈದ್ಧಾಂತಿಕ ವಿಷಯಗಳ ಮೇಲೆ ಮತ್ತು ವರ್ತಮಾನ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ರಾಜಕಾರಣದ ಬಗ್ಗೆ ಚರ್ಚೆಗಳು ನಡೆಯುತ್ತಿದ್ದವು. ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ಸದಸ್ಯರೂ 'ಲೋಕಶಕ್ತಿ' ರಾಷ್ಟ್ರೀಯ ದಿನಪತ್ರಿಕೆಯ ಉದ್ಯೋಗಿಯೂ ಆಗಿದ್ದ ಶ್ರೀ ಪಿ.ಬಿ.ಗಾಡ್ಗೀಲ್ ಅವರು ಅಲ್ಲಿ ನೆರೆಯುತ್ತಿದ್ದ ಬುದ್ಧಿ ಜೀವಿಗಳನ್ನು, ಉದ್ದೇಶಿಸಿ ಅನೇಕ ವಿಷಯಗಳ ಮೇಲೆ ಉಪನ್ಯಾಸ ನೀಡುತ್ತಿದ್ದರು. ಅವರ ಉಪನ್ಯಾಸದ ನಂತರ ಅಲ್ಲಿ ಸೇರಿದ್ದ ವಿದ್ಯಾರ್ಥಿಗಳು ಆ ವಿಷಯದ ಮೇಲೆ ಚರ್ಚೆಯ ನಡೆಸುತ್ತಿದ್ದರು. ವಿವಿಧ ಕೋನಗಳಿಂದ ವಿಶ್ಲೇಷಣೆಗಳನ್ನು ನಡೆಸುತ್ತಿದ್ದರು. ಒಂದು ದಿನ ಎಸ್.ಎಂ. ಅವತ್ತು ನನ್ನನ್ನು ಆವರ ಸ್ಪಡಿ ಸರ್ಕಲ್‌ಗೆ ಕರೆದೊಯ್ದರು. ನಾವು ಅಲ್ಲಿಗೆ ಹೋಗುವುದು ಸ್ವಲ್ಪ ತಡವಾಯಿತು. ಆ ಸಂದರ್ಭದಲ್ಲಿ ಪಿ.ಬಿ.ಗಾಡ್ಗೀಲ್ ಅವರು ಆಸ್ಟ್ರೀಯ ಮೇಲಣ ಹಿಲ್ಲರ್‌ನ ಅತಿಕ್ರಮಣದಿಂದಾಗಿ ಉದ್ಭವಿಸಿದ್ದ ಅಂತಾರಾಷ್ಟ್ರೀಯ ಪರಿಸ್ಥಿತಿಯನ್ನು ಕುರಿತು ವಿಶ್ಲೇಷಣೆ ನಡೆಸಿದ್ದರು. ಅವರ ಭಾಷಣದ ನಂತರ ಆ ವಿಷಯದ ಮೇಲೆ ಚರ್ಚೆ ನಡೆಯಿತು. ಕೊನೆಯಲ್ಲಿ ಎಸ್.ಎಂ. ಅವರು ನನ್ನನ್ನು ಅಲ್ಲಿದ್ದವರಿಗೆ ಪರಿಚಯಿಸಿದರು. ನಾರಾಯಣ್ ರಾವ್, ಗೋರೆ ಅವರ ಹೆಂಡತಿ ಸುಮತಿ ಬಾಯಿ, ವಿನಾಯಕ ಕುಲಕರ್ಣಿ, ಮಾಧವ ಲಿಮಯೆ, ಗಂಗಾಧರ ಓಗಲೆ, ಅಣ್ಣಾ ಮಾನೆ ಮತ್ತಿತರರು ಆ ವಿದ್ಯಾರ್ಥಿ ಸಮುದಾಯದಲ್ಲಿದ್ದರು. ಬಂಡು ಅಲಿಯಾಸ್ ಕೇಶವಗೋರೆ ಅವರು ಆಗ ಸ್ಪಡಿಗ್ರೂಪ್‌ನ ಕಾರ್ಯದರ್ಶಿಯಾಗಿದ್ದರು.

೧೯೩೭-೩೯ರ ನಡುವಣ ಅವಧಿಯಲ್ಲಿ ಸೋಷಲಿಸ್ಟ ಪಾರ್ಟಿಯು ಮಾಹಾರಾಷ್ಟ್ರದಲ್ಲಿ ಸ್ವತಂತ್ರವಾಗಿ ಯಾವುದೇ ಮಹತ್ವದ ಕಾರ್ಯವನ್ನು ನಿರ್ವಹಿಸಲಿಲ್ಲ. ಸತರಾ ಜಿಲ್ಲೆಯ ನಾಥ್‌ಘಾಣೇಕರ್, ಪಶ್ಚಿಮ ಖಾಂಡೇಶನ ನಾಥೂಬಾಯಿ ಪರುಳೇಕರ್, ಪೂರ್ವ ಖಾಂಡೇಶನ ವಸಂತ ಭಾಗವತ್ ಮೊದಲಾದವರು ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯಲ್ಲಿದ್ದವರು. ಆದರೆ ವಾಸ್ತವದಲ್ಲಿ ಅವರೆಲ್ಲ ಕಮ್ಯುನಿಸ್ಟ್‌ರಾಗಿ ಪರಿವರ್ತಿರಾಗಿದ್ದರು. ಸೋಲಾಪುರ, ಧುಲಿಯಾ ಅಮಲ್‌ನೇರ್‌ನಲ್ಲಿನ ಜವುಳಿ ಉದ್ಯಮ ಕೇಂದ್ರ ಮತ್ತು ರೈಲ್ವೇ ಕಾರ್ಮಿಕರ ಸಂಘಟನೆಗಳು ಕಮ್ಯುನಿಸ್ಟ್‌ರ ಸ್ವಾಮ್ಯದಲ್ಲಿದ್ದವು. ಮಹಾರಾಷ್ಟ್ರದಲ್ಲಿ ಕಿಸಾನ್ ಸಭಾದಂತಹ ರೈತರ ಸ್ವತಂತ್ರ ಸಂಘಟನೆ ಇನ್ನೂ ಬೇರೂರಿಲಿಲ್ಲ. ಜಮೀನ್ದಾರಿ ಪದ್ಧತಿ ಇಲ್ಲಿ ಪ್ರಬಲವಾಗಿ ಇರದಿದ್ದುದ್ದೇ ಅದಕ್ಕೆ ಕಾರಣವಾಗಿತ್ತು. ಪುಣೆಯಲ್ಲಿದ್ದ

ಸೋಷಲಿಸ್ಟ್‌ಗಳ ಕಾರ್ಯಭಾರವು ಪ್ರಧಾನವಾಗಿ ಸೈದ್ಧಾಂತಿಕ ತಳಹದಿಯದಾಗಿತ್ತು ಮತ್ತು ಅದು ಪಕ್ಷದ ಯುವ ಶಾಖೆಗಷ್ಟೇ ಸೀಮಿತಗೊಂಡಿತ್ತು. ಜನರ ಕೆಲಸ ಕಾರ್ಯಗಳೆಲ್ಲವೂ ಕಾಂಗ್ರೆಸ್ ಪಕ್ಷದ ಮೂಲಕವೇ ನಡೆಯುತ್ತಿದ್ದವು ಎಂದರೆ ಅದು ಉತ್ರೇಕ್ಷೆಯ ಮಾತಲ್ಲ.

ಕಾಂಗ್ರೆಸ್ ಅಧಿಕಾರಕ್ಕೆ ಬಂದಂತೆ ಪಕ್ಷದ ಸಮಿತಿಗಳ ಕಾರ್ಯ ವಿಸ್ತರಿಸಲ್ಪಟ್ಟಿತು. ಸಮಾಜದ ವಿವಿಧ ವೃತ್ತಿ ಕ್ಷೇತ್ರಗಳ ಜನರು ಕಾಂಗ್ರೆಸ್ ಪಕ್ಷವನ್ನು ಸೇರತೊಡಗಿದರು. ಅಧಿಕಾರಕ್ಕೆ ತನ್ನದೇ ಆದ ಆಕರ್ಷಣೆ ಇರುತ್ತದೆ. ಕಾಂಗ್ರೆಸ್ ಪಕ್ಷ ಬೆಳೆಯಲು ಅದೂ ಒಂದು ಪ್ರಮುಖ ಕಾರಣವಾಗಿತ್ತು. 1937-38 ರಲ್ಲಿ ಶಂಕರರಾವ್‌ಮೋರೆ ಅವರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರೆ, ಎಸ್.ಎಂ. ಜೋಶಿಯವರು ಅದರ ಕಾರ್ಯದರ್ಶಿಯಾಗಿದ್ದರು. ಜೊತೆಗೆ ಜೋಶಿಯವರು ಪ್ರಾಂತೀಯ ಪಾರ್ಟಿಯ ಕಾರ್ಯದರ್ಶಿಯಾಗಿಯೂ ಕಾರ್ಯ ನಿರ್ವಹಿಸುತ್ತಿದ್ದು. ಕಾಂಗ್ರೆಸ್ ಸಂಪುಟ ರಚಿತವಾದ ಮೇಲೆ ಎಸ್.ಎಂ.ನೇತೃತ್ವದಲ್ಲಿ ರೈತರ ರ್‍ಯಾಲಿಯೊಂದು ಸಂಘಟಿಸಲ್ಪಟ್ಟಿತು. ಬರಪೀಡಿತ ಪ್ರದೇಶಗಳ ಜನರಿಗೆ ಭೂ ಕಂದಾಯ ಪಾವತಿಯಿಂದ ವಿನಾಯ್ತಿ ನೀಡಬೇಕು, ರೈತರನ್ನು ಒಕ್ಕಲೆಬ್ಬಿಸಬಾರದು, ರೈತರ ಮೇಲಿನ ಸಾಲದ ಹೊರೆಯನ್ನು ತಗ್ಗಿಸಬೇಕು. ಸರ್ಕಾರಿ ಸಂಸ್ಥೆಗಳ ಮೂಲಕ ಅವರಿಗೆ ಸಾಲಗಳನ್ನು ಮಂಜೂರು ಮಾಡಬೇಕು. ಇವೇ ಮುಂತಾದವು ಅವರ ಬೇಡಿಕೆಗಳಾಗಿದ್ದವು. ಜಿಲ್ಲಾ ಕಾಂಗ್ರೆಸ್ ಸಮಿತಿ ಕಚೇರಿಯಲ್ಲಿ ಸ್ವೀಕರಿಸಲಾಗುತ್ತಿದ್ದ ಮನವಿಗಳು ಬಹುತೇಕ ಇದೇ ರೀತಿಯ ದೂರುಗಳನ್ನು ಒಳಗೊಂಡಿರುತ್ತಿದ್ದವು. ಸೋಷಲಿಸ್ಟ್ ಸರ್ಕಲ್‌ಗೆ ಸೇರಿದ ಮೇಲೆ ನಾನು ಕೂಡ ಸಂಜೆಯ ಹೊತ್ತಿನಲ್ಲಿ ಶನಿವಾರ ಪೇಟೆಯ ಕಾಂಗ್ರೆಸ್ ಕಚೇರಿಗೆ ಹೋಗುತ್ತಿದ್ದೆ. ಕ್ರಮೇಣ ಎಸ್.ಎಂ.ಅವರು ತಮ್ಮ ಕೆಲಸ ಕಾರ್ಯಗಳಲ್ಲೂ ನನ್ನ ಸಹಾಯ ಪಡೆಯ ತೊಡಗಿದರು. ಅವರು ನನಗೆ ಪತ್ರ ವ್ಯವಹಾರದ ರೀತಿಯನ್ನು ಕಲಿಸಿಕೊಟ್ಟರು. ಅಲ್ಲೇ ಕಾಂಗ್ರೆಸ್ ಪಕ್ಷದ ಪ್ರಾಂತೀಯ ಕಚೇರಿಯೂ ಕಾರ್ಯ ನಿರ್ವಹಿಸುತ್ತಿತ್ತು. ಹಾಗಾಗಿ ಸಹಜವಾಗಿಯೇ ನನಗೆ ಕಾಂಗ್ರೆಸ್ ಮುಖಂಡರ ಪರಿಚಯ, ಸಂಪರ್ಕ ಆಗ ತೊಡಗಿತು. ಈ ನಾಯಕರನ್ನು ಅತ್ಯಂತ ಹತ್ತಿರದಿಂದ ನೋಡುವ ಸುವರ್ಣಾವಕಾಶ ನನಗೆ ದೊರೆಯಿತ. ನನ್ನಲ್ಲಿದ್ದ ಶೋಧಕ ಪ್ರವೃತ್ತಿಯು ಕಾಂಗ್ರೆಸ್ ನಾಯಕರ ನಡುವಣ ಸಂಬಂಧಗಳನ್ನು ಅಭ್ಯಸಿಸಲೂ ಸಹಾಯಕವಾಯಿತು. ಹಳೇ ಕಾಂಗ್ರೆಸಿಗರಿಗೆ ಮತ್ತು ಗಾಂಧಿವಾದಿಗಳಿಗೂ ಎಸ್.ಎಂ. ಜೋಶಿಯವರ ಸರಳ ಮತ್ತು ಋಜು ಸ್ವಭಾವ ಹಿಡಿಸುತ್ತಿತ್ತು. ಕಾಂಗ್ರೆಸ್ಸಿಗರಿಗೆ ನಾನಾ ಸಾಹೇಬ್‌ರವರ ದಿಟ್ಟತನದ ಮಾತುಗಳು ಮತ್ತು ಅವರ ವ್ಯಂಗ್ಯೋಕ್ತಿಯ ಧಾಟಿ ಹಿಡಿಸುತ್ತಿರಲಿಲ್ಲ. ವಾಮ ಪಂಥೀಯರಲ್ಲಿ ಎಸ್.ಎಂ.ಅವರ ಬಗ್ಗೆ ಭಾರಿ ಗೌರವ ಇತ್ತು. ಆ ದಿನಗಳಲ್ಲಿ ಪುಣೆಯಲ್ಲಿ ಬ್ರಾಹ್ಮಣೇತರ ವಿವಾದ ಸಾಗಿತ್ತು. ಎಸ್.ಎಂ.ಅವರ ವಿಶಾಲ ದೃಷ್ಟಿಕೋನ, ಬಹುಜನ ಸಮಾಜ ಹಾಗೂ ದೀನದಲಿತರ ಬಗ್ಗೆ ಅವರಲ್ಲಿದ್ದ ಅಪಾರ

ಸಹಾನುಭೂತಿಯಿಂದಾಗಿ ಈ ವರ್ಗಗಳು ಜೋಶಿಯವರಿಗೆ ಅತ್ಯಂತ ಹತ್ತಿರವಾದವು. ಆರಂಭದಿಂದಲೂ ಎಸ್.ಎಂ.ಅವರ ಈ ಗುಣಗಳು ನನ್ನ ಮೇಲೆ ಗಾಢವಾದ ಪ್ರಭಾವ ಬೀರಿದ್ದವು. ಅವರ ವ್ಯಕ್ತಿತ್ವದಲ್ಲಿನ ಈ ಅಂಶ ಅನಂತರದ ದಿನಗಳಲ್ಲಿ ಅವರಿಗೆ ವಹಿಸಿಕೊಟ್ಟ ಹೊಣೆಗಾರಿಕೆಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸುವಲ್ಲಿ ಅತ್ಯಂತ ಸಹಾಯಕವಾಯಿತು.

ಹೀಗೆ ಕಾಂಗ್ರೆಸ್ ಪಕ್ಷಕ್ಕಾಗಿ ಕೆಲಸ ಮಾಡುತ್ತಿದ್ದಾಗಲೇ ಅವರು ಸೋಷಲಿಸ್ಟ್‌ಗಳ ಸ್ಟಡಿ ಸರ್ಕಲ್‌ಗಳ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದರು. ಅವರು ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಎಂಗಲ್ಸ್ ಅವರ ಕಮ್ಯೂನಿಸ್ಟ್ ಪ್ರಣಾಳಿಕೆ ಮತ್ತು ಅರ್ಥಶಾಸ್ತ್ರದ ಮೇಲೆ ತರಗತಿಗಳನ್ನು ನಡೆಸುತ್ತಿದ್ದರು ಎಂಬುದು ನನಗಿನ್ನೂ ಚೆನ್ನಾಗಿ ನೆನಪಿದೆ. ನಾವು ಯುವಕರೆಲ್ಲ ಕಾಂಗ್ರೆಸ್ ಪಾರ್ಟಿಯನ್ನು ಸೇರಿದ್ದರಿಂದ ಅಂತಹ ಸಭೆಗಳನ್ನು ನಡೆಸುತ್ತಿದ್ದೆವು. ಈ ಸಭೆಗಳಲ್ಲಿ ವಿವಿಧ ವಿಷಯಗಳು ಚರ್ಚೆಗೆ ಬರುತ್ತಿದ್ದವು. ೧೯೩೮ ರ ಸೆಪ್ಟೆಂಬರ್ ಮಧ್ಯಭಾಗದಲ್ಲಿ ಪಕ್ಷದ ಪರವಾಗಿ ಒಕ್ಕೂಟ ವಿರೋಧಿ ದಿನವನ್ನು ಆಚರಿಸಲಾಯ್ತು. ೧೯೩೫ ರ ಭಾರತ ಸರ್ಕಾರದ ಕಾಯ್ದೆಯಲ್ಲಿ ಒಕ್ಕೂಟದ ಬಗೆಗೆ ಒಂದು ವಿಧಿ ಇದ್ದಿತು. ಆದರೆ ಅದೇ ವೇಳೆಯಲ್ಲಿ ಎರಡನೇ ಮಹಾಯುದ್ಧ ಆರಂಭವಾದುದರಿಂದ ಒಕ್ಕೂಟ ರಚನೆಯಾಗಲಿಲ್ಲ. ಈ ಸಂಬಂಧದಲ್ಲಿ ಶನಿವಾರ ಬಾಡ್ ಚೌಕದಲ್ಲಿ ಸಾರ್ವಜನಿಕ ಸಭೆಯೊಂದು ಜರುಗಿತು. ಈ ಸಭೆಯಲ್ಲಿ ಭಾಷಣ ನೀಡಲು ಮುಂಬಯಿಯಿಂದ ಮೀನೂಮಸಾನಿ ಅವರನ್ನು ಆಹ್ವಾನಿಸಲಾಗಿತ್ತು. ಅವರು ಪಕ್ಷದ ಸದಸ್ಯರೊಂದಿಗೆ ಆ ಸಂದರ್ಭದಲ್ಲಿ ಪ್ರತ್ಯೇಕ ಚರ್ಚೆಗಳನ್ನು ನಡೆಸಿದರು. ಆಗ ಪಕ್ಷಕ್ಕೆ ಪ್ರತ್ಯೇಕ ಕಚೇರಿ ಇರಲಿಲ್ಲ. ಹಾಗಾಗಿ ಅಂತಹ ಸಭೆಗಳು ಹೆಚ್ಚಾಗಿ ನಾನಾ ಸಾಹೇಬ್ ಅಥವಾ ಶಿರುಭವೂ ಅವರ ಕೊಠಡಿಯಲ್ಲಿ ನಡೆಯುತ್ತಿದ್ದವು. ಅವರ ಕೊಠಡಿ ಕಾಂಗ್ರೆಸ್ ಪ್ರಾಂತೀಯ ಕಚೇರಿಯಲ್ಲೇ ಇತ್ತು. ೧೯೩೮ರ ಡಿಸೆಂಬರ್ ತಿಂಗಳಲ್ಲಿ ನಾವು ಅತ್ಯಂತ ಉತ್ಸಾಹದಿಂದ ವಿದ್ಯಾರ್ಥಿ ಸಪ್ತಾಹವನ್ನೂ ಆಚರಿಸಿದೆವು. ವಿದ್ಯಾರ್ಥಿ ಒಕ್ಕೂಟದ ಪುಣೆ ಶಾಖೆಯನ್ನು ನಾವು ಭಾರೀ ಉತ್ಸಾಹ ಮತ್ತು ಹುರುಪಿನಿಂದ ಆರಂಭಿಸಿದೆವು. ಆ ದಿನಗಳಲ್ಲಿ ವಸಂತ ತುಳುಪುಳೆ ಸೋಷಲಿಸ್ಟ್ ಪಾರ್ಟಿಯಲ್ಲಿದ್ದರು. ಅವರನ್ನು ಪಕ್ಷಕ್ಕೆ ಸೇರಿಸಿಕೊಂಡ ವಿಷಯದ ಮೇಲೆ ಪಕ್ಷದಲ್ಲಿ ಬಿಸಿ ಬಿಸಿಯಾದ ಚರ್ಚೆ ನಡೆಯಿತು. ನಾವು ಯುವಕರು ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯನ್ನು ದುರ್ಬಲಗೊಳಿಸುವ ಕಮ್ಯುನಿಸ್ಟ್ ಧೋರಣೆಗೆ ಪ್ರಬಲ ವಿರೋಧ ಒಡ್ಡಿದೆವು. ಮಾಧವ ಲಿಮಯೆ (ಸಿ.ಎಸ್.ಪಿ-ಅಭ್ಯರ್ಥಿ) ಒಂದು ಓಟಿನ ಅಂತರದಿಂದ ಸೋಲುಣ್ಣಬೇಕಾಯಿತು. ಏಕೆಂದರೆ ವಸಂತ ತುಳುಪುಳೆ ಅವರು ತಮ್ಮ ಮತವನ್ನು ಡಿ.ವೈ.ಜೋಶಿಯವರ (ಕಮ್ಯುನಿಸ್ಟ್ ಅಭ್ಯರ್ಥಿ) ಪರವಾಗಿ ಚಲಾಯಿಸಿದ್ದರು. ಅವರ ದ್ವಿಮುಖ ನಿಷ್ಠೆ ನಮ್ಮೆಲ್ಲರಿಗೂ ಅತ್ಯಂತ ನೋವನ್ನು ಉಂಟು ಮಾಡಿತ್ತು.

ಈ ಅವಧಿಯಲ್ಲಿ ವಿದ್ಯಾರ್ಥಿ ಚಳವಳಿಗಳು ಕೋಮುವಾದ, ತೀವ್ರಗಾಮಿ ರಾಜಕೀಯ ಮತ್ತು ಆರ್ಥಿಕ ಕಾರ್ಯಕ್ರಮಗಳ ಮೇಲೆ ಕೇಂದ್ರೀಕೃತವಾಗಿದ್ದವು. ವಾಮಪಂಥೀಯರಲ್ಲೂ ಅನೇಕ ವಿಷಯಗಳ ಪ್ರತಿಸ್ಪರ್ಧೆ ಇತ್ತು. ಆದರೆ ಕೋಮುವಾದದ ವಿಷಯದಲ್ಲಿ ನಾವೆಲ್ಲ ಒಂದೇ ದೃಷ್ಟಿಕೋನ ಉಳ್ಳವರಾಗಿದ್ದೇವು. ಸಾವರ್ಕರ್ ಅವರು ಅಂಡಮಾನ್‌ನಿಂದ ಬಂದಾಗ ಅವರನ್ನು ರತ್ನಗಿರಿ ಜಿಲ್ಲೆಯಲ್ಲಿ ಸ್ಥಾನಬದ್ಧತೆಯಲ್ಲಿ ಇಡಲಾಯಿತು. 1937ರಲ್ಲಿ ಅವರು ಪುಣೆಯ ಮುಕ್ತೇಶ್ವರಕ್ಕೆ ಭೇಟಿ ನೀಡಬೇಕಿತ್ತು. ಪ್ರತಿಯೊಬ್ಬರೂ ಅವರ ಭಾವೀ ಯೋಜನೆಯ ಕುರಿತು ತಿಳಿದುಕೊಳ್ಳಲು ಉತ್ಸುಕರಾಗಿದ್ದರು. ಆದರೆ ಅವರು ರಾಷ್ಟ್ರೀಯ ಚಳವಳಿಯಿಂದ ದೂರ ಸರಿದು ಮತ್ತು ಕೇಳ್ಕರ್ ಅವರಿಂದ ಪ್ರಭಾವಿತರಾಗಿ ಹಿಂದೂ ಮಹಾಸಭಾದಂತಹ ಮೂಲಭೂತವಾದಿ, ಸಂಪ್ರದಾಯವಾದಿ ಮತ್ತು ಪ್ರಗತಿ ವಿರೋಧಿ ವೇದಿಕೆಗೆ ಸೇರುವವರೆಂಬುದು ದಿನದಿಂದ ದಿನಕ್ಕೆ ನಮಗೆ ಸ್ಪಷ್ಟವಾಗುತ್ತಾ ಹೋಯಿತ್ತು. ಹಾಗಾಗಿ ವಿದ್ಯಾರ್ಥಿ ಒಕ್ಕೂಟದ ಪುರೋಗಾಮಿ ಚಿಂತನೆ ಹೊಂದಿದ್ದು ನಾವು ಅವರ ಧಾರ್ಮಿಕ ಕಾರ್ಯಗಳಿಗೆ ಸಂಪೂರ್ಣ ಗೌರವ ತೋರಿಸಲು ಆದರೆ ಆದೀಗಲೇ ತಪ್ಪು ದಿಸೆಯಲ್ಲಿ ಹೋಗುತ್ತಿದ್ದ ಅವರು ಯಾವುದೇ ರಾಜಕೀಯ ಚಟುವಟಿಕೆಗಳಿಗೆ ಯಾವುದೇ ರೀತಿಯ ಬೆಂಬಲ ನೀಡದಿರಲು ನಿರ್ಧರಿಸಿದೆವು. ಆ ದಿನಗಳಲ್ಲಿ ಹಿಂದೂ ಸಿದ್ಧಾಂತದ ಪ್ರತಿಪಾದಕರ ಆಕ್ರಮಣ ಶೀಲ ಮತ್ತು ಅಸಹಿಷ್ಣು ಮನೋವೃತ್ತಿಯಿಂದಾಗಿ ಪುಣೆಯಲ್ಲಿನ ಪರಿಸ್ಥಿತಿ ತೀರಾ ಬಿಗುವಾಗಿತ್ತು.

ಪುಣೆ ನಗರವು ಅಂದಿನ ದಿನಗಳಲ್ಲಿ ಹಿಂದೂ ಸಿದ್ಧಾಂತವಾದಿಗಳ ಪ್ರಬಲ ಕೋಟೆ ಎಂದೇ ಪರಿಗಣಿಸಲ್ಪಟ್ಟಿತ್ತು. ಒಂದೆಡೆಯಲ್ಲಿ ಸಾವರ್ಕರ್, ರಾಷ್ಟ್ರೀಯ ಸ್ವಯಂ ಸೇವಕ ಸಂಘ ಮತ್ತು ಇನ್ನೊಂದೆಡೆಯಲ್ಲಿ ಸಮಾಜವಾದಿಗಳು, ರಾಷ್ಟ್ರೀಯ ವಾದಿಗಳು ಮತ್ತು ವಾಮ ಪಂಥೀಯರು ಪರಸ್ಪರ ಜಗಳ ಕಾಯುತ್ತಿದ್ದರು. ಆರ್.ಎಸ್.ಎಸ್. ನ ಸ್ವಯಂ ಸೇವಕರು ನಮ್ಮ ಮೆರವಣಿಯಗೆಗಳ ಮೇಲೆ ದಾಳಿ ನಡೆಸುತ್ತಿದ್ದರು. ೧೯೩೮ರ ಮೇ ದಿನದಂದು ನಮಗೆ ಅದರ ಪ್ರಥಮ ಅನುಭವವಾಯಿತು. ಆ ದಿನ ಅವರು ನಮ್ಮ ಮೆರಗಣಿಗೆಯ ಮೇಲೆ ದಾಳಿ ನಡೆಸಿದರು. ಇದರ ಫಲಿತಾಂಶವಾಗಿ ತಾತ್ಯಾ (ಸೇನಾಪತಿ) ಬಾಪಟ್ ಮತ್ತು ಎಸ್.ಎಂ.ಜೋಶಿಯವರು ಗಾಯಗೊಂಡರು. ಮುಂದಿನ ಎರಡು ಮೂರು ವರ್ಷಗಳಲ್ಲಿ ಅವರು ಆಚಾರ್ಯ ಅತ್ರೆಯವರ ಮೇಲೆ ಹಲ್ಲೆ ನಡೆಸಿದರು. ಹಾಗೂ ಶಂಕರ ರಾವ್ ದೇವ್ ಅವರ ಸಭೆಯನ್ನೂ ಅಡ್ಡಿಪಡಿಸಿದರು. ಆರ್.ಎಸ್.ಎಸ್. ಸ್ವಯಂ ಸೇವಕರು ಪುಣೆಯಲ್ಲಿ ಸಾರ್ವಜನಿಕ ಸಭೆ ನಡೆಸಲು ಎಂದೂ ಅವಕಾಶ ಕೊಡಲಿಲ್ಲ. ಕೋಮುವಾದವು ಅಲ್ಲಿ ಸಂಪೂರ್ಣವಾಗಿ ರಾಷ್ಟ್ರೀಯವಾದಿಗಳಿಗೆ ವ್ಯಾಪಿಸಿತು. ಇದಕ್ಕೆ ಪ್ರತಿಯಾಗಿ ಪ್ರತಿರೋಧ ಒಡ್ಡಲು ಭಾವುರಾವಡೆ ವಿ.ಎಂ.ಹರ್ಡಿಕರ್, ಶಿರುಬಾವು, ಲಿಮಯೆ, ನಾನಾ ಸಾಹೇಬ್ ಗೋರೆ ಮತ್ತಿತರ ಕಟ್ಟಾ ರಾಷ್ಟ್ರೀಯವಾದಿಗಳು, ಪುರೋಗಾಮಿ

ಸಮಾಜವಾದಿಗಳು ರಾಷ್ಟ್ರಸೇವಾದಳವನ್ನು ಪುನರ್ ಸಂಘಟಿಸಿದರು. ಎಸ್.ಎಂ.ಜೋಶಿಯವರು ಹಿಂದೂ ಸಿದ್ಧಾಂತವಾದಿಗಳ ಪ್ರಬಲ ವಿರೋಧಿಯಾಗಿದ್ದರು. ಆ ದಿನಗಳಲ್ಲಿ ಎಸ್.ಎಂ.ಜೋಶಿ ಅವರಂತಹ ರಾಷ್ಟ್ರೀಯ ನಾಯಕರು ಮತ್ತು ಸಮಾಜವಾದಿ ಧುರೀಣರಿಂದ ನಾವು ಜಾತ್ಯಾತೀತ ರಾಷ್ಟ್ರೀಯವಾದದ ಮೊದಲ ಪಾಠಗಳನ್ನು ಕಲಿತೆವು. ೧೯೪೧ರಲ್ಲಿ ಎಸ್.ಎಂ.ಜೋಶಿಯವರು ಜೈಲಿನಿಂದ ಬಿಡುಗಡೆಗೊಂಡಾಗ ಅವರಿಗೆ ರಾಷ್ಟ್ರಸೇವಾದಳದ ಹೊಣೆಗಾರಿಕೆಯನ್ನು ವಹಿಸಿಕೊಡಲಾಯಿತು.

ನಾವು ಒಂದು ಸವಾಲಾಗಿ ಸಾರ್ವಜನಿಕ ಸಭೆಯೊಂದನ್ನು ಸಂಘಟಿಸಿದೆವು. ಪುಣೆಯಲ್ಲಿನ ಹಿಂದುತ್ವವಾದಿಗಳನ್ನು ಮೇಲ್ನೋಟಕ್ಕೆ ಮೂಲೆಸಂಪು ಮಾಡುವುದೇ ನಮ್ಮ ಗುರಿಯಾಗಿತ್ತು. ಈ ಸಭೆಯಲ್ಲಿ ಜನರು ಆರ್.ಎಸ್.ಎಸ್.ನವರಿಗೆ ಒಂದು ಒಳ್ಳೆಯ ಪಾಠ ಕಲಿಸುವಂತೆ ನಮ್ಮ ನಾಯಕರ ಮೇಲೆ ಒತ್ತಡ ತಂದರು. ಇದಾದ ಕೆಲವು ವರ್ಷಗಳವರೆಗೂ ಆರ್.ಎಸ್.ಎಸ್.ನವರು ಪುಣೆಯಲ್ಲಿ ಯಾವುದೇ ತೊಂದರೆಯನ್ನು ಉಂಟು ಮಾಡಲಿಲ್ಲ.

೧೯೩೯ರ ಸೆಪ್ಟೆಂಬರ್‌ನಲ್ಲಿ ಎರಡನೇ ಜಾಗತಿಕ ಸಮರ ಪ್ರಾರಂಭವಾಯಿತು. ಸಮಾಜವಾದಿಗಳು ಯುದ್ಧ ವಿರೋಧಿ ಚಳವಳಿಯನ್ನು ನಡೆಸಲು ಮುಂದಾದರು. ಸಮಾಜವಾದಿ ಮುಖಂಡರು ಯಾವ ರೀತಿಯಲ್ಲೂ ಸಾಮ್ರಾಜ್ಯವಾದಿ ಯುದ್ಧದಲ್ಲಿ ಸಹಾಯ ನೀಡದಂತೆ ಕಾಂಗ್ರೆಸ್ ಧುರೀಣರಿಗೆ ಕರೆ ನೀಡಿದರು ಹಾಗೂ ಬ್ರಿಟಿಷ್ ಆಳ್ವಿಕೆಯ ವಿರುದ್ಧ ಪೌರ ಅಸಹಕಾರ ಚಳವಳಿಯನ್ನು ಹೂಡಲು ಕರೆಕೊಟ್ಟರು. ಆ ದಿನಗಳಲ್ಲಿ ಜಯಪ್ರಕಾಶ್ ನಾರಾಯಣ್ ಅವರು ಪುಣೆಯಲ್ಲೇ ಇದ್ದರು. ಯುಸೂಫ್ ಮೆಹರುಲಿ ಮತ್ತು ಲೋಹಿಯಾಜಿ ಅವರು ಕೂಡಾ ಅಲ್ಲಿಯೇ ಇದ್ದರು. ಅವರಿಗಾಗಿ ಸಾರ್ವಜನಿಕ ಸಭೆಗಳನ್ನು ಸಂಘಟಿಸಲಾಯಿತು. ಈ ಧುರೀಣರು ಕಾರ್ಮಿಕರ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಇಂತಹ ಸಂಘರ್ಷಮಯ ಹೋರಾಟದ ದಿನಗಳಲ್ಲಿ ಕಾಲೇಜಿನ ಜೀವನ ನನಗೆ ಕಳಾಹೀನವಾಗಿ ಮತ್ತು ಬೇಸರಿಕೆಯದ್ದಾಗಿ ಕಂಡಿತು. ನಾವೆಲ್ಲೂರು ನಮ್ಮ ಇಡೀ ಜೀವನವನ್ನು ಸ್ವಾತಂತ್ರ್ಯ ಚಳವಳಿಗಾಗಿ ಮತ್ತು ಸೇವಾದಳದ ಕಾರ್ಯಕ್ಕಾಗಿ ಸಮರ್ಪಿಸಲು ನಿರ್ಧರಿಸಿದೆವು. ಆದರೆ ಎಸ್.ಎಂ.ಮತ್ತು ಅಚ್ಯುತ್‌ಜಿ ಅವರು ಮೊದಲು ನಾನು ನನ್ನ ಪದವಿ ಪೂರೈಸಬೇಕೆಂದು ಬಯಸಿದ್ದರು. ಆದರೆ ನನ್ನಲ್ಲಿನ ಒತ್ತಾಸೆಯನ್ನು ಹಿಡಿದಿಡಲು ನನ್ನಿಂದ ಸಾಧ್ಯವಾಗಲಿಲ್ಲ. ನಮ್ಮ ದೃಷ್ಟಿಕೋನವನ್ನು ಗಮನದಲ್ಲಿಟ್ಟುಕೊಂಡು ಈ ಧುರೀಣರು ಗಂಗಾಧರ ಓಘಲೆ ಅವರನ್ನು ಅಹಮದ್ ನಗರ ಜಿಲ್ಲೆಯಲ್ಲಿನ ಸಕ್ಕರೆಯ ಗಿರಣಿ ಕೇಂದ್ರಕ್ಕೆ ಕಳುಹಿಸಿಕೊಟ್ಟರು. (ಆ ಸಮಯದಲ್ಲಿ ಅದು ಬೇಲಾಪುರ ರಸ್ತೆಯಲ್ಲಿತ್ತು, ಅದೀಗ ಶ್ರೀರಾಮಪುರವಾಗಿದೆ)

ನಾನು ಮತ್ತು ಅಣ್ಣಾ ಸಾನೆಯವರು ಖಾಂದೇಶ್‌ವನ್ನು ನಮ್ಮ ಕಾರ್ಯಕ್ಷೇತ್ರವಾಗಿ ಆರಿಸಿಕೊಂಡವು. ಸೋಷಿಯಲಿಸ್ಟ್ ಪಾರ್ಟಿ ಅವಸಾನದ ಅಂಚಿಗೆ ತಲುಪಿತ್ತು. ಕಾರ್ಮಿಕ ಚಳವಳಿಯಿಂದ ವಿದ್ಯಾರ್ಥಿ ಸಮುದಾಯದವರೆಗೆ ಎಲ್ಲವೂ ಕಮ್ಯುನಿಸ್ಟ್‌ರಿಂದ ಆವರಿಸಲ್ಪಟ್ಟಿತ್ತು. ಧುಲೀಯಾದ ಕಮ್ಯುನಿಸ್ಟ್‌ರು ರಣದಿವೆಯವರ ಗುಂಪಿಗೆ ಸೇರಿದವರಾಗಿದ್ದರು. ಅಮಲ್‌ನೇರ್ ಗಂಪು ಡಾಂಗೆಯವರಿಗೆ ಸೇರಿದ್ದಾಗಿತ್ತು. ಆದರೆ ಕಟ್ಟುನಿಟ್ಟಾದ ಶಿಸ್ತು ಮತ್ತು ನಿಯಂತ್ರಣದಿಂದಾಗಿ ಕಾರ್ಮಿಕರು ಮತ್ತು ವಿದ್ಯಾರ್ಥಿ ಸಮುದಾಯದಲ್ಲಿ ಪರಸ್ಪರರಲ್ಲಿ ಇದ್ದ ಭಿನಾಭಿಪ್ರಾಯಗಳ ಸುಳಿವು ಯಾರಿಗೂ ಹತ್ತುತ್ತಿರಲಿಲ್ಲ. ಅದೇನಿದ್ದರೂ ಎಲ್ಲ ಸಮಯದಲ್ಲೂ ಅವರ ಮಧ್ಯೆ ಪಿಸುಮಾತು ನಡೆಯುತ್ತಿತ್ತು. ಆ ದಿನಗಳಲ್ಲಿ ಸಾನೆ ಗುರೂಜಿಯವರು ಕಾಂಗ್ರೆಸ್‌ನ ಅತ್ಯಂತ ಜನಪ್ರಿಯ ನಾಯಕರಾಗಿದ್ದರು. ಅವರು ಅಸಾಧಾರಣ ವಾಗ್ಮಿಯಾಗಿದ್ದರು. ಅದಲ್ಲದೆ ಜನರೊಂದಿಗೆ ಹರಟೆ ಹೊಡೆಯುವ ಕಲೆಯೂ ಅವರಿಗೆ ಸಿದ್ಧಿಸಿತ್ತು. ಅಸಾಧಾರಣ ವಾಕ್ಪಟುತ್ವ ಮತ್ತು ಪ್ರಖರ ವಿಚಾರದಿಂದ ಅವರ ಮಾತಿಗೆ ಜನಸಮುದಾಯವನ್ನು ಮಂತ್ರಮುಗ್ಧರನ್ನಾಗಿಸುವ ಸಾಮರ್ಥ್ಯವಿತ್ತು. ಅದರ ಸಾಹಿತ್ಯವು ರಾಷ್ಟ್ರೀಯ ಮನೋಭಾವನೆಯಿಂದ ಸ್ಫೂರ್ತಿ ಪಡೆದಿತ್ತು ಹಾಗೂ ಸಮೃದ್ಧವಾಗಿತ್ತು. ಅದು ಖಾಂದೇಶದ ಜನಸಮುದಾಯದಲ್ಲಿ ಯುವಕರ ವಿಚಾರಧಾರೆಯನ್ನು ಬಹುಮಟ್ಟಿಗೆ ರೂಪಿಸಿಕೊಟ್ಟಿತು. ಆ ದಿನಗಳಲ್ಲಿ ಕಾರ್ಮಿಕ ಮೇಲೆ ವಿಧಿಸಲಾಗಿದ್ದ ವೇತನ ಕಡಿತವನ್ನು ಹಿಂತೆಗೆಸುವಂತೆ ಮಾಡುವ ನಿಟ್ಟಿನಲ್ಲಿ ಅವರು ತಮ್ಮೆಲ್ಲ ಪ್ರಯತ್ನಗಳನ್ನೂ ನಡೆಸಿದರು. ಈ ನಿಟ್ಟಿನಲ್ಲಿ ಜಲಗಾಂವ್‌ನಲ್ಲಿ ರೈತರ ಭಾರಿ ಮೋರ್ಚಾವೊಂದನ್ನು ಅವರು ಸಂಘಟಿಸಿದ್ದರು. ಅವರ ಶಿಷ್ಯಂದಿರಲ್ಲಿ ಅನೇಕರು ಕಮ್ಯುನಿಸ್ಟರಾಗಿ ಪರಿವರ್ತನೆಗೊಂಡಿದ್ದರು. ಕಮ್ಯುನಿಸ್ಟ್ ನೇತಾರ ಡಾಂಗೆ ಅವರೊಂದಿಗೆ ಜೋಶಿಯವರು ಅತ್ಯಂತ ಸೌಹಾರ್ದ ಸಂಬಂದ ಹೊಂದಿದ್ದವರಾಗಿದ್ದರು. ಇಂತಹ ಪ್ರತಿಕೂಲ ಸಂದರ್ಭದಲ್ಲಿ ನಾವು ನಮ್ಮ ಧ್ಯೇಯವನ್ನು ಸಾಧಿಸಬೇಕಿತ್ತು. ಎಸ್.ಎಂ.ಅವರು ಸ್ವತಃ ನಮ್ಮ ಜೊತೆ ಧುಲೀಯಾಕ್ಕೆ ಬಂದರು. ಆರಂಭದಲ್ಲಿ ಕಾಂಗ್ರೆಸ್ಸಿಗರು ಮತ್ತು ಯುವಕರು ನಾವು ಕಾಯಂ ಆಗಿ ಅಲ್ಲೇ ಉಳಿಯುವವರೆಂಬುದನ್ನು ನಂಬಿರಲಿಲ್ಲ. ದೀಪಾವಳಿ ರಜೆಯ ನಂತರ ನಾವು ಆ ಜಾಗ ಬಿಟ್ಟು ಹೋಗುತ್ತೇವೆ ಎಂದು ಅವರು ಭಾವಿಸಿದ್ದರು. ಆದರೆ ನಾವು ದೀಪಾವಳಿಯ ನಂತರ ಅಲ್ಲೇ ಮುಂದುವರೆದವು. ಆಗ ಅವರ ದೃಷ್ಟಿಕೊನ ಬದಲಾಯಿತು. ಅನಂತರದಲ್ಲಿ ಎಸ್.ಎಂ. ಅವರ ಭಾವ ಪಟವರ್ಧನ್ ಅವರು ಧುಲೀಯಾಗೆ ವರ್ಗವಾಗಿ ಬಂದರು. ಅವರು ಬ್ಯಾಂಕ್ ಉದ್ಯೋಗಿಯಾಗಿದ್ದರು. ಅದಾದ ಮೇಲೆ ನರ್ಸ್ ಆಗಿದ್ದ ಎಸ್.ಎಂ. ಅವರ ಕೊನೆಯ ತಂಗಿ ಧುಲೀಯಾದ ಪೌರ ಆಸ್ಪತ್ರೆಯಲ್ಲಿ ನೇಮಕಗೊಂಡರು. ಇದು ಸ್ವಲ್ಪಮಟ್ಟಿಗೆ ಎಸ್.ಎಂ.ಅವರಿಗೆ ಆಧಾರವಾಗಿ ಪರಿಣಮಿಸಿತು. ಹದಿನೇಳು ವರ್ಷದ ನಾನು ಇಷ್ಟು ದೂರದ ಸ್ಥಳವೊಂದರಲ್ಲಿ ವಾಸ್ತವ್ಯವಿದ್ದು ಹೇಗೆ ಕೆಲಸ ಮಾಡಲು ಸಾಧ್ಯವಾದೀತೆ ಎಂದು ಅವರು ಯಾವಾಗಲು ಚಿಂತಿಸುತ್ತಲೇ ಇದ್ದರು. ನಾನು ಎಸ್.ಎಂ. ಅವರ ಭಾವನ

ಮನೆಯಲ್ಲಿ ಪೇಯಿಂಗ್ ಗೆಸ್ಟ್ ಆಗಿ ಊಟ ಮಾಡುತ್ತಿದ್ದೆ. ನಮ್ಮ ಅತ್ಯಂತ ಪರಿಮಿತ ಸಂಪನ್ಮೂಲದಲ್ಲೇ ನಾವು ಅಲ್ಲಿ ವಾಸವಾಗಿದ್ದೆವು. ಈ ಮಧ್ಯೆ ಅಗತ್ಯವಿದ್ದ ಪ್ರವಾಸವನ್ನು ಕೈಗೊಳ್ಳುತ್ತಿದ್ದೆವು. ಇದಾದ ಕೆಲ ಸಮಯದಲ್ಲಿ ನಾವು ಸಾನೆ ಗುರೂಜಿಯವರ ಸಂಪರ್ಕಕ್ಕೆ ಬಂದೆವು.

೧೯೪೦ರ ಮಧ್ಯದಲ್ಲಿ ಕುಲಬಾ ಜಿಲ್ಲೆಯಲ್ಲಿ ಕಿಸಾನ್ ಪರಿಷತ್ತನ್ನು ಸಂಘಟಿಸಲಾಯಿತು. ಈ ಸಂಬಂಧದಲ್ಲಿ ಎಸ್.ಎಂ.ಮತ್ತು ನಮ್ಮ ಎಳೆಯ ಸಂಗಾತಿಗಳು ಗ್ರಾಮದಿಂದ ಗ್ರಾಮಕ್ಕೆ ಸಂಚರಿಸಿದರು. ಎಸ್.ಎಂ. ಬಂಧು ಮತ್ತು ಮಾಧವ್ ಈ ಮೂವರು ಯುದ್ಧ ವಿರೋಧಿ ಭಾಷಣಗಳನ್ನು ಮಾಡಿದ ದೆಸೆಯಿಂದ ಹದಿನೈದು ತಿಂಗಳುಗಳ ಕಾಲ ಸೆರೆಮನೆವಾಸ, ಹನ್ನೆರಡು ತಿಂಗಳುಗಳ ಸೆರೆವಾಸ ಮತ್ತು ದಂಡ ತೆರಲು ತಪ್ಪಿದಲ್ಲಿ ಮತ್ತೆ ಮೂರು ತಿಂಗಳ ಸೆರೆವಾಸಕ್ಕೆ ಗುರಿಯಾದರು. ಇದಾದ ಕೆಲದಿನಗಳ ಮೇಲೆ ಅಣ್ಣಾ ಸಾನೆಯವರು ಗಂಗಾಧರ ಓಘಲೆಯರಿರಿಗೆ ನೆರವಾಗುವ ಸಲುವಾಗಿ ಅಹಮದ್ ನಗರ ಜಿಲ್ಲೆಗೆ ತೆರಳಿದರು. ಖಾಂದೇಶ್ ನಲ್ಲಿ ನಾನೊಬ್ಬನೇ ಉಳಿದುಕೊಂಡೆ. ಆದರೆ ಆ ವೇಳೆಗೆ ಕಾಂಗ್ರೆಸ್ ಸಂಘಟನೆಯಲ್ಲಿನ ಅನೇಕರು ನನ್ನ ಮಿತ್ರರಾಗಿದ್ದರು. ಅದಲ್ಲದೆ ಕೆಲ ವಿದ್ಯಾರ್ಥಿ ಕಾರ್ಯಕರ್ತರನ್ನು ಕೂಡಾ ನಾನು ಸಂಘಟಿಸಿದ್ದೆ. ನಾನು ಮತ್ತು ಮುರಳೀಧರ ಭಾವಸಾರ (ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿ) ಒಟ್ಟಾಗಿ ಸಾಕಿ ತಾಲ್ಲೂಕಿನಲ್ಲಿ ಪ್ರವಾಸ ಕೈಗೊಂಡೆವು. ನಾನೂ ಕೂಡಾ ಯುದ್ಧ ವಿರೋಧ ಭಾಷಣ ಮಾಡಿದ್ದಕ್ಕಾಗಿ ಒಂದು ವರ್ಷದ ಕಠಿಣ ಶಿಕ್ಷೆಗೆ ಗುರಿಯಾಗಬೇಕಾಯಿತು. ಆಗ ನನ್ನನ್ನು ಧುಲೀಯಾ ಜೈಲಿನಲ್ಲಿ ಇರಿಸಲಾಗಿತ್ತು. ಈ ಸೆರೆಮನೆವಾಸದ ಅವಧಿಯಲ್ಲಿ (ಅನಂತರದ ಸೆರೆಮನೆವಾಸದ ಸಂದರ್ಭಗಳಲ್ಲೂ ಕೂಡಾ) ಎಸ್.ಎಂ. ಮತ್ತು ಮೆಹರುಲಿ ನನಗೆ ಪತ್ರಗಳನ್ನು ಬರೆಯುತ್ತಿದ್ದರು. ಪುಸ್ತಕಗಳನ್ನು ಕಳುಹಿಸುತ್ತಿದ್ದರು. ೧೯೪೦ ರಲ್ಲಿ ಮತ್ತೆ ನನಗೆ ಒಂದು ವರ್ಷದ ಸೆರೆಮನೆ ವಾಸದ ಶಿಕ್ಷೆ ಮೀಸಲಾಯಿತು ಮತ್ತು ಜೈಲಿನಲ್ಲಿ 'ಸಿ' ದರ್ಜೆಯ ಕೈದಿಯನ್ನಾಗಿ ಪರಿಗಣಿಸಲಾಯಿತು. ೧೯೪೨ ರಲ್ಲಿ ನನ್ನನ್ನೂ ರಾಜಕೀಯ ಕೈದಿಯನ್ನಾಗಿ ಬಂಧಿಸಿ ಎರಡನೇ ದರ್ಜೆಯ ಕೈದಿಯಂತೆ ನೋಡಿಕೊಳ್ಳಲಾಯಿತು. (ಕೈದಿಗಳಿಗೆ ಆಗ ಒಂದು ಮತ್ತು ಎರಡನೇ ದರ್ಜೆಗಳೆಂಬ ಎರಡು ದರ್ಜೆಗಳು ಮಾತ್ರ ಇದ್ದಿತು). ಈ ಕಾರಣದಿಂದಾಗಿ ಎಸ್.ಎಂ. ಅವರು ಸದಾ ನನ್ನ ಬಗ್ಗೆ ಚಿಂತಿತರಾಗಿದ್ದರು. ಧುಲೀಯಾದಲ್ಲಿ ಅವರ ಸಹೋದರಿ, ಸೋದರ ಮತ್ತು ಸ್ವತಃ ಅವರೇ ನೋಡಲು ಬರುತ್ತಿದ್ದರು. ತಾರಾಜಿಯವರು ತರುತಾಲ್ ಹೆಸರಿನಲ್ಲಿ ಜೈಲಿನಲ್ಲಿದ್ದ ನನಗೆ ಪತ್ರಗಳನ್ನು ಬರೆಯುತ್ತಿದ್ದರು.

೧೯೪೧ರಲ್ಲಿ ಜೈಲಿನಿಂದ ಬಿಡುಗಡೆಯಾದ ಮೇಲೆ ಎಸ್.ಎಂ. ಅವರು ೧೯೪೨ ರ ಆಗಸ್ಟ್ ೯ ರವರೆಗೆ ರಾಷ್ಟ್ರಸೇವಾ ದಳದ ಚಟುವಟಿಕೆಗಳ ಮೇಲೆಯೇ ತಮ್ಮ ಗಮನವನ್ನು

ಕೇಂದ್ರೀಕರಿಸಿದರು. ಸೇವಾದಳದ ಯುವಕರ ಶಾಖೆಗಳು ಅನಂತರದಲ್ಲಿ ಆಗಸ್ಟ್ ಕ್ರಾಂತಿಯಲ್ಲಿ ಭಾಗವಹಿಸಿದವು. ರಾಷ್ಟ್ರೀಯ ಧುರೀಣರು ಬಂಧಿಸಲ್ಪಟ್ಟ ನಂತರದಲ್ಲಿ ದಾದರ್‌ನಲ್ಲಿ ಅಚ್ಯುತ್‌ಜಿಯವರ ಸೋದರ ಮನೆಯಲ್ಲಿ ಜರುಗಿದ ಸಮಾಜವಾದಿ ಕಾರ್ಯಕರ್ತರ ಸಭೆಯಲ್ಲಿ ಚಳವಳಿಯನ್ನು ಭೂಗತವಾಗಿದ್ದುಕೊಂಡೆ ಮುಂದುವರಿಸುವುದೆಂಬ ನಿರ್ಧಾರ ತೆಗೆದುಕೊಳ್ಳಲಾಯಿತು. ಎಸ್.ಎಂ. ಜೋಶಿಯವರಿಗೆ ಮಹಾರಾಷ್ಟ್ರದಲ್ಲಿನ ಭೂಗತ ಚಟುವಟಿಕೆಗಳನ್ನು ನಿರ್ವಹಿಸುವ ಹೊಣೆಗಾರಿಕೆಯನ್ನು ವಹಿಸಲಾಯಿತು. ಆ ದಿನಗಳಲ್ಲಿ ನಾನಾ ಸಾಹೇಬ್ ಅವರು ನಿಜಾಂ ರಾಜ್ಯದ ಜೈಲಿನಲ್ಲಿದ್ದರು. ಎಸ್.ಎಂ. ಅವರು ಗಡ್ಡ ಬೆಳೆಯಿಸಿಕೊಂಡು ಇಮಾಂ ಸಾಹೇಬರ ವೇಷವನ್ನು ತೊಟ್ಟರು. ಅವರ ಈ ಮಾರುವೇಷ ಎಷ್ಟೊಂದು ಸಹಜವಾಗಿತ್ತೆಂದರೆ ಪೊಲೀಸರಿಗೆ ಕೂಡಾ ಅವರ ಗುರುತು ಹಿಡಿಯುವುದು ಅಸಾಧ್ಯವಾಗಿತ್ತು. ೧೯೪೨ರ ಭೂಗತ ಚಳವಳಿಯಲ್ಲಿ ಎಲ್ಲ ಕಡೆಗಳಲ್ಲಿ ಎರಡು ಪ್ರಪ್ರತ್ಯೇಕ ವಿಚಾರ ಧಾರೆಗಳು ಗಾಂಧೀವಾದ ಮತ್ತು ಸಮಾಜವಾದ ಪ್ರಚುರತೆ ಪಡೆದುಕೊಂಡವು. ಈ ಬಿರುಕು ಸಂಘಟನೆಗೆ ಮಾರಕವಾಗಿ ಪರಿಣಮಿಸತೊಡಗಿತು. ಆದರೆ ಎಸ್.ಎಂ. ಅವರು ಗಾಂಧೀವಾದಿಗಳು ಮತ್ತು ಹಳೆ ತಲೆಮಾರಿನ ಕಾಂಗ್ರೆಸ್ಸಿಗರೊಂದಿಗೆ ಉತ್ತಮ ವೈಯಕ್ತಿಕ ಸಂಬಂಧಗಳನ್ನು ಹೊಂದಿದ್ದರಿಂದ ಮಹಾರಾಷ್ಟ್ರದಲ್ಲಿ ಸಂಘರ್ಷ ಕಡಿಮೆಯಾಗಿತ್ತು. ಇದರಿಂದಾಗಿ ಅಣ್ಣಾ ಸಾಹೇಬ್ ಸಹಸ್ರಬುದ್ಧೆ ಅವರಂತಹ ಕಾರ್ಯಕರ್ತರೊಂದಿಗೆ ಕಾರ್ಯನಿರ್ವಹಿಸುವುದು ಸುಲಭಾವಾಯಿತು. ಖಾದಿ ಭಂಡಾರಗಳು ಮತ್ತು ಖಾದಿ ಉತ್ಪಾದನಾ ಕೇಂದ್ರಗಳು ಭೂಗತ ಚಳವಳಿಯ ಆಶ್ರಯಧಾಮಗಳಾಗಿ ಪರಿಣಮಿಸಿದ್ದವು. ಶಿಸ್ತ್ರಾಸ್ತ್ರಾಗಾರಗಳಿಗೆ ಬೇಕಾದ ರಾಸಾಯನಿಕಗಳು ಮತ್ತು ಇತರ ಸರಕುಗಳನ್ನು ಈ ಕೇಂದ್ರಗಳಲ್ಲಿ ಶೇಖರಿಸಿಡಲಾಗುತ್ತಿತ್ತು ಮತ್ತು ಅಲ್ಲಿಂದ ವಿತರಿಸಲಾಗುತಿತ್ತು. ಮಹಾರಾಷ್ಟ್ರದಲ್ಲಿ ಪ್ರತಿರೋಧದ ಧ್ವಜ ಎಲ್ಲ ಕಾಲಗಳಲ್ಲೂ ಹಾರಾಡುತ್ತಿರುವಂತೆ ಎಸ್.ಎಂ. ಜೋಶಿಯವರು ಸತತವಾಗಿ ತಮ್ಮ ಪ್ರಯತ್ನಗಳನ್ನು ಮುಂದುವರಿಸಿದರು. ಅನೇಕ ಕಾರ್ಯಕರ್ತರು ಅವರಿಂದ ಸ್ಫೂರ್ತಿಯನ್ನು ಪಡೆದುಕೊಂಡರು. ಇದಾದ ೧೩-೧೪ ತಿಂಗಳುಗಳಲ್ಲಿ ನಯಿ ಬಜಾರ್‌ನಲ್ಲಿನ ಚುಡೇಲ್ ಹೌಸ್ (ಚಳವಳಿಯ ಸಂದರ್ಭದಲ್ಲೇ ಬಳಸುತ್ತಿದ್ದ ಒಂದು ರಹಸ್ಯ ಸ್ಥಳ) ನಿಂಧ ಎಸ್.ಎಂ. ಅವರ ಜೊತೆಗೆ ನಮ್ಮನ್ನು ಬಂಧಿಸಲಾಯಿತು.

೧೯೪೬ರಲ್ಲಿ ಎಲ್ಲ ಮುಖಂಡರು ಬಿಡುಗಡೆ ಹೊಂದಿದರು. ಸೋಷಲಿಸ್ಟ್ ಪಕ್ಷವನ್ನು ಪುನರ್ ಸಂಘಟಿಸಲಾಯಿತು. ರಾಷ್ಟ್ರ ಸೇವಾದಳದ ಚಳವಳಿ ಇಡೀ ಮಹಾರಾಷ್ಟ್ರಕ್ಕೆ ಪಸರಿಸಿತು. ಸೋಷಲಿಸ್ಟ್ ಪಾರ್ಟಿಯ ಕಾರ್ಯಭಾರವನ್ನು ನಾನಾ ಸಾಹೇಬರು ನೋಡಿಕೊಳ್ಳುವುದೆಂದು ರಾಷ್ಟ್ರಸೇವಾದಳದ ಕಾರ್ಯಭಾರವನ್ನು ಅದರ ಮುಖ್ಯಸ್ಥರಾದ ಎಸ್.ಎಂ. ಅವರು ನಿರ್ವಹಿಸುವರೆಂದು ಸಂಘಟನೆಯ ಕಾರ್ಯಭಾರವನ್ನು ಹಾಕಿಕೊಳ್ಳಲಾಯಿತು. ಎಸ್.ಎಂ. ಅವರು ಪಕ್ಷ ರಾಜಕೀಯಕ್ಕಿಂತ ಹೆಚ್ಚಾಗಿ ರಾಷ್ಟ್ರಸೇವಾದಳ

ಮತ್ತು ಇತರ ರಚನಾತ್ಮಕ ಕಾರ್ಯಗಳಲ್ಲಿ ಹೆಚ್ಚು ಸಕ್ರಿಯವಾಗಿ ತೊಡಗಿದ್ದರು. ಪಕ್ಷ ರಾಜಕೀಯದಲ್ಲಿ ಯುವಕರಾದ ನಾವು ಪಾಲ್ಗೊಳ್ಳುವಂತೆ ಅವರು ಸಹ ಸಮಗೆ ಉತ್ತೇಜನ ನೀಡುತ್ತಿದ್ದರು. ಯುವಕರಿಗೆ ತಮ್ಮ ಸಾಮರ್ಥ್ಯವನ್ನು ತೋರಿಸಿಕೊಡಲು ಸಹಾಯಕವಾಗುವಂತೆ ಅವರಿಗೆ ಹೊಸ ಹೊಸ ಜವಾಬ್ದಾರಿಗಳನ್ನು ವಹಿಸಿಕೊಡಬೇಕೆಂದು ಅವರು ಸದಾ ಒತ್ತಿ ಹೇಳುತ್ತಿದ್ದರು. ೧೯೪೫-೪೭ರಲ್ಲಿ ಸೇವಾದಳ ಮತ್ತು ವಿದ್ಯಾರ್ಥಿ ಕಾಂಗ್ರೆಸ್ ಸಂಘಟನೆಗಳು ಹೆಚ್ಚು ಹೆಚ್ಚು ಬಲಿಷ್ಠವಾಗುತ್ತಾ ಸಾಗಿದವು. ಪಶ್ಚಿಮ ಮಹಾರಾಷ್ಟ್ರ ಮತ್ತು ಮುಂಬಯಿಯಲ್ಲಿ ರಾಷ್ಟ್ರ ಸೇವಾದಳದ ಬೃಹತ್ ರ್‍ಯಾಲಿಗಳನ್ನು ಸಂಘಟಿಸಲಾಯಿತು. ನೂರಾರು ಕಾರ್ಯಕರ್ತರು ಕಾರ್ಮಿಕ ಚಳವಳಿಯ ಮುಂಚೂಣಿಯಲ್ಲಿ ಸೇರಿದರು. ಸಮಾಜವಾದಿಗಳು ಮುಂಬಯಿ ಮತ್ತು ಮಹಾರಾಷ್ಟ್ರದಲ್ಲಿ ಕಾರ್ಮಿಕ ಸಮುದಾಯದ ಮಧ್ಯೆ ತಮ್ಮ ನೆಲೆಗಳನ್ನು ಭದ್ರಪಡಿಸಿಕೊಂಡರು. ಬಟ್ಟೆಗಿರಣಿಗಳ ಮೇಲಿನ ಕಮ್ಯುನಿಸ್ಟರ ಹಿಡಿತಕ್ಕೆ ಪ್ರತಿಯಾಗಿ ಮುಂಬಯಿಯಲ್ಲಿನ ರಾಷ್ಟ್ರೀಯವಾದಿಗಳು ರಾಷ್ಟ್ರೀಯ ಮೀಲ್ ಮಜ್ದೂರ್ ಸಂಘವನ್ನು ಸಂಘಟಿಸಿದರು. ಒಂದು ಹಂತದಲ್ಲಿ ಈ ಸಂಘಟನೆಯ ಇಡೀ ಕಾರ್ಮಿಕ ಸಮುದಾಯದ ಮೇಲೆ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿತಲ್ಲದೆ ಅದರ ಬಹುತೇಕ ಅಭ್ಯರ್ಥಿಗಳು ಕಾರ್ಮಿಕ ಸಂಘಗಳ ಚುನಾವಣೆಯಲ್ಲಿ ಗೆದ್ದು ಬಂದರು.

ಹಿರಿಯ ಧುರೀಣರಾದ ಶಂಕರರಾವ್ ದೇವ್ ಮತ್ತು ಎಸ್.ಕೆ. ಪಾಟೀಲ್ ಅವರು ಈ ಯುವಶಕ್ತಿಯನ್ನು ಮತ್ತು ಕಾರ್ಮಿಕ ಸಾಮರ್ಥ್ಯವನ್ನು ಕಂಡು ನಿಬ್ಬೆರಗಾದರು. ಶಂಕರರಾವ್ ಅವರಂತಹ ನಾಯಕರು ಇಂತಹ ಅಗಾಧ ಶಕ್ತಿಯನ್ನು ನಿಯಂತ್ರಿಸುವುದು ಹೇಗೆಂದು ಸದಾ ಚಿಂತಿತರಾಗಿದ್ದರು. ಅವರು ಎಲ್ಲಿ ತಮ್ಮ ಅಧಿಕಾರವನ್ನು ಹಸ್ತಾಂತರಿಸ ಬೇಕಾಗಿ ಬರಬಹುದೆಂದು ಸದಾ ಚಿಂತಿತರಾಗಿದ್ದರು. ಈ ಧುರೀಣರು ತಾವೇ ಶಾಶ್ವತವಾಗಿ ಅಧಿಕಾರದಲ್ಲಿ ಮುಂದುವರಿಯುತ್ತೇವೆಂದು ಈ ಸಂಘಟನೆಯನ್ನೂ ತಾವೇ ನಿಯಂತ್ರಣದಲ್ಲಿಟ್ಟು ಕೊಳ್ಳುತ್ತೇವೆಂದು ಅದೇ ರೀತಿ ಸರಕಾರ ಅಧಿಕಾರದ ಸೂತ್ರ ತಮ್ಮದೇ ಕೈಗಳಲ್ಲಿ ಇರುವುದೆಂದು ಕನಸು ಕಾಣುತ್ತಿದ್ದರು. ಶಂಕರರಾವ್ ಅವರ ಹೆಮ್ಮೆಗಂತು ಆಕಾಶವೇ ಸೀಮೆಯಾಗಿತ್ತು. ಒಂದು ಹಂತದಲ್ಲಿ ಆಚಾರ್ಯ ಭಾಗವತ್ ಮತ್ತು ಆಚಾರ್ಯ ಜವಡೇಕರ್ ಅವರು ಶಂಕರರಾವ್ ಅವರ ಸಂಗಾತಿಗಳಾಗಿದ್ದರು. ಸಮಾಜವಾದಿಗಳೊಂದಿಗೆ ಸಹಾಯ ಹಸ್ತ ಚಾಚುವಂತೆ ಅವರು ಶಂಕರರಾವ್ ಅವರಿಗೆ ಸಲಹೆ ಮಾಡಿದರು. ಆದರೆ ಅವರು ಅದಕ್ಕೆ ಒಪ್ಪಿಕೊಳ್ಳಲಿಲ್ಲ. ಮಧ್ಯಂತರ ಸರ್ಕಾರದ ರಚನೆಯ ನಂತರ ಕೃಪಲಾನಿಜಿ ಅವರು ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದರು. ಶಂಕರರಾವ್ ಅವರು ಪ್ರಧಾನ ಕಾರ್ಯದರ್ಶಿಯಾಗಿ ನಿಯುಕ್ತರಾದರು. ಇದು ಅಕ್ಷರಶಃ ಅವರ ತಲೆಯನ್ನು ತಿರುಗಿಸಿತು. ಗಾಂಧಿವಾದಿಗಳು ಕಾಂಗ್ರೆಸ್ ಪಕ್ಷದ ಸ್ವರೂಪವನ್ನೇ ಬದಲಿಸಲು ತುದಿಗಾಲಲ್ಲಿ ನಿಂತಿದ್ದರು. ಮತ್ತು ಸೋಷಲಿಸ್ಟ್ ಪಾರ್ಟಿಯ ಪಸರಿಸುತ್ತಿದ್ದ ಪ್ರಭಾವವನ್ನು ನಿಯಂತ್ರಿಸುವುದು ಅವರ ಉದ್ದೇಶವಾಗಿತ್ತು.

ಶಂಕರಾರವ್ ಅವರು ರಾಷ್ಟ್ರ ಸೇವಾದಳದ ಕಾರ್ಯಕ್ಕೆ ಅಡ್ಡಿ ಒಡ್ಡಲು ದೃಢನಿಶ್ಚಯ ಮಾಡಿದ್ದರು. ಸ್ವಾತಂತ್ರ್ಯ ನಂತರದಲ್ಲಿ ಸಮಾಜವಾದಿಗಳು ಇನ್ನು ಮುಂದೆ ಕಾಂಗ್ರೆಸ್‌ನೊಂದಿಗೆ ಕಾರ್ಯ ನಿರ್ವಹಿಸುವುದು ಅಸಾಧ್ಯ ಎಂಬುದನ್ನು ಕ್ರಮೇಣ ಮನಗಂಡರು. ೧೯೪೭ರ ಮಧ್ಯಭಾಗದಲ್ಲಿ ಈ ಸಂಘರ್ಷ ಪರಕಾಷ್ಠೆ ಮುಟ್ಟಿತು. ಮಹಾತ್ಮಗಾಂಧೀಜಿ ಅವರು ಮಧ್ಯಸ್ಥಿಕೆದಾರರಾಗಿ ನಡೆಸಿದ ಪ್ರಯತ್ನಗಳು ಯಾವುದೇ ಫಲ ನೀಡಲಿಲ್ಲ. ಕಟ್ಟಕಡೆಗೆ ಸೇವಾದಳವು ಸ್ವಾಯತ್ತತೆ ಇಲ್ಲವೇ ಕಾಂಗ್ರೆಸ್‌ನ ಅನಿರ್ಬಂಧಿತ ನಿಯಂತ್ರಣ ಪ್ರಶ್ನೆಯ ಮೇಲೆ ಕಾಂಗ್ರೆಸ್‌ನಿಂದ ದೂರ ಸರಿಯಿತು. ೧೯೪೮ ರಲ್ಲಿ ನಾಸಿಕ್ ಅಧಿವೇಶನದಲ್ಲಿ ಸೋಷಲಿಸ್ಟ್ ಪಾರ್ಟಿ ಕಾಂಗ್ರೆಸ್‌ನಿಂದ ಪ್ರತ್ಯೇಕಗೊಂಡು ಹೊರಬಂದಿತು.

ನಾನು ೧೯೪೬-೪೭ ರ ಅವಧಿಯಲ್ಲಿ ಕೃಪಲಾನಿ ಶಂಕರರಾವ್ ದೇವ್ ಅವರಂತಹ ಧುರೀಣರು ವಹಿಸಿದ ಪಾತ್ರ ಕುರಿತು ಯೋಚಿಸುವಾಗ ಮನುಷ್ಯನ ಸ್ವಭಾವ ನಡವಳಿಕೆಗಳು ಅದೆಷ್ಟು ಸಂಕೀರ್ಣ ಎಂಬುದು ಅರ್ಥವಾಗುತ್ತದೆ. ಒಂದೇ ವರ್ಷದ ಅವಧಿಯಲ್ಲಿ ಕೃಪಲಾನಿಯವರಿಗೆ ಅಧಿಕಾರದಲ್ಲಿದ್ದ ಸರ್ದಾರ ಪಟೇಲ್ ಮತ್ತು ನೆಹರು ಅವರೊಂದಿಗೆ ಭಿನ್ನಾಭಿಪ್ರಾಯಲ್ಲಿ ಉಂಟಾಗಿತ್ತು. ಅವರು ರಾಜೀನಾಮೆ ಸಲ್ಲಿಸುವ ಹಂತಕ್ಕೂ ಮುಟ್ಟಿತು. ಈ ನಾಯಕರು ಕಾಂಗ್ರೆಸ್ ಅಧ್ಯಕ್ಷರು ಮತ್ತು ಸಂಘಟನೆಯನ್ನು ಸಂಪೂರ್ಣವಾಗಿ ಅಲಕ್ಷಿಸಿದ್ದಾರೆ ಎಂಬುದೇ ಕೃಪಲಾನಿಯವರ ದೂರಾಗಿತ್ತು. ಶಂಕರರಾವ್ ದೇವ್ ಅವರು ಇನ್ನು ಭ್ರಮನಿರಸನವಾಗುವ ಹಂತ ತಲುಪಿರಲಿಲ್ಲ. ಅವರು ತಮಗೆ ಪಂಡಿತ್ ನೆಹರು ಅವರ ವಿಶೇಷ ಕೃಪಾಶೀರ್ವಾದ ಇದೆ ಎಂಬ ಭ್ರಮೆಯಲ್ಲಿ ಇದ್ದರು. ಅವರು ಅಧ್ಯಕ್ಷ ಚುನಾವಣೆಯಲ್ಲಿ ಪಂಡಿತ್ ನೆಹರು ಅವರ ಬೆಂಬಲ ತಮಗೆ ಸಿಗುವುದೆಂಬ ಸಂಪೂರ್ಣ ಭರವಸೆಯಿಂದ ಇದ್ದರು. ಆದರೆ ನೆಹರು ಅವರು ಟಂಡನ್‌ಜಿ ಅವರ ವಿರುದ್ಧ ಕೃಪಲಾನಿ ಅವರ ಅಭ್ಯರ್ಥಿತನವನ್ನು ಅನುಮೋದಿಸಿದರು. ಆದರೆ ಟಂಡನ್‌ಜಿ ಗೆದ್ದರು. ಕೃಪಲಾನಿ ಸೋತರು. ಕಟ್ಟಕಡೆಗೆ ಕೃಪಲಾನಿಯವರು ಕಾಂಗ್ರೆಸ್‌ನ್ನು ತೊರೆದರು. ಆ ವಾರ ನಂತರದಲ್ಲಿ ಅವರು ಕಿಸಾನ್ ಮಜ್ದೂರ್ ಪ್ರಜಾ ಪಾರ್ಟಿಯನ್ನು ರಚಿಸಿದರು. ಮತ್ತು ಶಂಕರರಾ ದೇವ್ ಅವರು ಸರ್ವೋದಯ ಸಂಘಟನೆಯನ್ನು ಸೇರಿದರು. ಅನಂತರದಲ್ಲಿ ಶಂಕರರಾವ್ ಅವರು ದೆಹಲಿಗೆ ಬಂದಗಾಲೆಲ್ಲಾ ನನ್ನನ್ನು ಭೇಟಿಯಾಗುತ್ತಿದ್ದರು. ಒಮ್ಮೆ ಅವರು ನನ್ನ ಮನೆಯಲ್ಲಿ ಕೆಲ ಕಾಲ ರಾಜಕಾರಣಿಗಳ ಸಭೆಯನ್ನು ಕರೆಯುವಂತೆ ನನ್ನನ್ನು ಕೇಳಿಕೊಂಡರು. ನಾನು ಸಭೆಯನ್ನು ಏರ್ಪಡಿಸಿ ಅನೇಕರಿಗೆ ಆಮಂತ್ರಣಗಳನ್ನು ಕಳುಹಿಸಿಕೊಟ್ಟೆ ಆದರೆ ಯಾರೊಬ್ಬರೂ ಸಭೆಗೆ ಬಂದು ಅವರೊಂದಿಗೆ ಮಾತುಕತೆ ನಡೆಸಲು ಉತ್ಸಾಹ ತೋರಲಿಲ್ಲ. ಕಟ್ಟ ಕಡೆಯಲ್ಲಿ ನಾನು ನನ್ನ ಕೆಲವು ಸಮಾಜವಾದಿ ಮಿತ್ರರನ್ನು ನನ್ನ ಮನೆಗೆ ಬಂದು ಸಭೆಯಲ್ಲಿ ಭಾಗವಹಿಸುವಂತೆ ಬಲವಂತ ಮಾಡಿದೆ. ಆದರೆ ಇದರಿಂದಾಗಿ ನನಗೆ ನಿಜಕ್ಕೂ ಶಂಕರರಾವ್ ಅವರ ಬಗ್ಗೆ ಅನುಕಂಪ ಮೂಡಿತು. ಅವರು ಬಹಳಷ್ಟು ತ್ಯಾಗ ಮಾಡಿದರು. ಅವರು

ತಮ್ಮಲ್ಲಿ ಇದ್ದುದ್ದೆಲ್ಲವನ್ನೂ ದೇಶದ ಸಲುವಾಗಿ ಬಿಟ್ಟುಕೊಟ್ಟರು. ಜೈಲಿನಲ್ಲಿ ಏಟುಗಳನ್ನು ತಿಂದರು. ಅವರು ಅಂತಹ ಆತ್ಮಪ್ರತಿಷ್ಠೆ ಹೊಂದಿದವರಾಗಿದ್ದರು. ೧೯೪೬-೪೭ರ ಅಧಿಕಾರ ಹಸ್ತಾಂತರದ ಈ ಸಂಕ್ರಮಣ ಕಾಲದಲ್ಲಿ ಕೃಪಲಾನಿ ಮತ್ತು ಶಂಕರಾರವ್ ಅವರಂತಹ ಗಾಂಧಿವಾದಿಗಳು ಮಹಾತ್ಮಗಾಂಧೀಜಿ ಅವರ ಅಭಿಲಾಷೆಗೆ ವಿರುದ್ಧವಾಗಿ ಸಮಾಜವಾದಿಗಳ ಜೊತೆ ಸಹಕರಿಸಿ ಕಾರ್ಯ ನಿರ್ವಹಿಸಿದ್ದಲ್ಲಿ ಭಾರತದ ಸ್ವಾತಂತ್ರ್ಯೋತ್ತರದ ಇತಿಹಾಸ ಸಂಪೂರ್ಣ ಬೇರೆಯಾಗಿರುತ್ತಿತ್ತು. ಆದರೆ ರಾಷ್ಟ್ರ ಸೇವಾದಳ ಮತ್ತು ಸಮಾಜವಾದಿಗಳ ಸಮುದಾಯ ಶಂಕರರಾವ್ ಅವರ ಕಣ್ಣಿಗೆ ಕೆಸರಾಗಿತ್ತು. ಅವರಿಗೆ ವಲ್ಲಭಬಾಯಿ ಪಟೇಲ್ ಅವರ ದಾರ್ಷ್ಟ್ಯವಾಗಲಿ ಅಥವಾ ಜವಹರಲಾಲ್ ನೆಹರು ಅವರ ಆಡಳಿತ ಅನುಭವವಾಗಲಿ ಇರಲಿಲ್ಲ.

ಎಸ್.ಎಂ. ಅವರು ಎಂದೂ ವೃತ್ತಿಪರ ಕಾರ್ಮಿಕ ನಾಯಕರಾಗಿರಲಿಲ್ಲ. ಆದರೆ ಕಾಂಗ್ರೆಸ್ ಪಕ್ಷದ ಸಮಾಜವಾದಿ ಬಣದಿಂದ ಹೊರಬಂದ ಮೇಲೆ ಮತ್ತು ಇಂಟಕ್ ಮತ್ತು ಏಟಕ್‌ಗಳಿಗೆ ಪ್ರತಿಯಾಗಿ ಹಿಂದ್ ಮಜ್ದೂರ್ ಸಭಾದ ರೂಪದಲ್ಲಿ ಕಾರ್ಮಿಕರ ಚಳವಳಿಯನ್ನು ಸಂಘಟಿಸಿದ ಮೇಲೆ ಎಸ್.ಎಂ.ಜೋಶಿಯವರು ತಮ್ಮ ಗಮನವನ್ನು ಕಾರ್ಮಿಕ ಸಂಘಗಳ ಸಂಘಟನೆಯತ್ತ ಹರಿಸಿದರು. ಕಡಕಿ ಪ್ರಾಂತ್ಯದಲ್ಲಿ ಅನೇಕ ರಕ್ಷಣ ಉಪಕರಣವನ್ನು ಘಟಕಗಳಿದ್ದವು. ಎಸ್.ಎಂ.ಅವರು ಅಲ್ಲಿನ ಕಾರ್ಮಿಕ ಸಂಘಟನೆಗೆ ಮಹತ್ತರ ಕೊಡುಗೆಯನ್ನು ನೀಡಿದರು. ಜೋಶಿಯವರು ಮತ್ತು ಅವರ ಸಂಗಡಿಗರು ಅಖಿಲ ಭಾರತ ರಕ್ಷಣಾ ಕಾರ್ಮಿಕ ಒಕ್ಕೂಟ ರಚನೆಯ ತಮ್ಮ ಪ್ರಯತ್ನಗಳಲ್ಲು ಯಶಸ್ವಿಯಾದರು. ಹಲವು ವರ್ಷಗಳ ಕಾಲ ಎಸ್.ಎಂ.ಅವರು ಈ ಒಕ್ಕೂಟದ ಪದಾಧಿಕಾರಿಯಯಾಗಿದ್ದರು. ಈ ದಿನಗಳಲ್ಲಿ ರಕ್ಷಣಾ ಇಲಾಖೆಯೊಂದಿಗೆ ನಡೆಯುತ್ತಿದ್ದ ಮಾತುಕತೆಗಳಲ್ಲಿ ಅವರು ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅವರ ಅನೇಕ ಹೋರಾಟಗಳಲ್ಲೂ ಜೋಶಿಯವರು ಸಕ್ರೀಯವಾಗಿ ಪಾಲ್ಗೊಂಡಿದ್ದರು. ಕೇಂದ್ರ ಸರ್ಕಾರಿ ನೌಕರರ ಹೋರಾಟದಲ್ಲೂ ಅವರು ಮಹತ್ವದ ಕೊಡುಗೆ ನೀಡಿದರು. ಆದರೆ ಟ್ರೇಡ್ ಯೂನಿಯನ್ ಚಳುವಳಿಯು ಅವರ ಸ್ವಭಾವಕ್ಕೆ ಒಂದಿಷ್ಟು ಒಗ್ಗುತ್ತಿರಲಿಲ್ಲ ಎಂದು ಹೇಳಿದರೆ ತಪ್ಪಾಗಲಾರದು. ಈ ಚಳವಳಿಯಲ್ಲಿ ತಮ್ಮ ಕರ್ತವ್ಯದ ಒಂದು ಭಾಗವೆಂಬಂತೆ ಅವರು ಭಾಗವಹಿಸಿದ್ದರು. ರಾಣಾ ಭೀಮದೇವ್ ಅವರಂತೆ ನ್ಯಾಯಬಾಹಿರವಾದ ಬೇಡಿಕೆಗಳನ್ನು ಮುಂದಿಡುವುದು ತಪ್ಪು ಪ್ರವೃತ್ತಿಗಳಿಗೆ ಉತ್ತೇಜನ ನೀಡುವುದು, ಜನ ಜಂಗುಳಿಯ ಮನ ಮೆಚ್ಚಿಸುವ ಉದ್ರೇಕಕಾರಿ ಭಾಷಣಗಳನ್ನು ಮಾಡುವುದು ಅವರ ಜಾಯಮಾನ ಆಗಿರಲಿಲ್ಲ. ನಿರ್ದಿಷ್ಟ ಕಾಲಘಟ್ಟದಲ್ಲಿ ದೇಶದಲ್ಲಿನ ಆಗಿನ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಕಾರ್ಮಿಕ ಚಳವಳಿಯನ್ನು ನಡೆಸಬೇಕು. ಅದೇ ರೀತಿ ಅಸಂಘಟಿತ ಮತ್ತು ದಲಿತರ ಪರಿಸ್ಥಿತಿಯನ್ನು ಅರ್ಥೈಸಿಕೊಂಡು, ಅದೇ ರೀತಿ ಜನತಂತ್ರದ ರಕ್ಷಣೆಗೆ ಅಗತ್ಯವಾಗಿರುವ ರಾಜಕೀಯ ಹೊಣೆಗಾರಿಕೆಯ ಮಹತ್ವವನ್ನು

ಸಮಗ್ರವಾಗಿ ಗ್ರಹಿಸಿಕೊಂಡು ಕಾರ್ಮಿಕ ಚಳವಳಿ ಮುನ್ನಡೆಯಬೇಕು ಎಂಬುದು ಅವರ ಸ್ಪಷ್ಟ ನಿಲುವಾಗಿತ್ತು. ಆದರೆ ಎಸ್.ಎಂ.ಅವರ ಈ ಅಭಿಪ್ರಾಯಗಳನ್ನು ವೃತ್ತಿಪರ ಕಾರ್ಮಿಕ ನಾಯಕರು ಎಂದೂ ಒಪ್ಪಿಕೊಂಡರಲಿಲ್ಲ.

ಸಾರ್ವತ್ರಿಕ ವಯಸ್ಕ ಮತದಾನದ ತಳಹದಿಯಲ್ಲಿ ನಡೆದ ಪ್ರಥಮ ಮಹಾ ಚುನಾವಣೆಯಲ್ಲಿ ಡಾ. ಅಂಬೇಡ್ಕರ್ ಅವರ ಪರಿಶಿಷ್ಟ ಜಾತಿಗಳ ಒಕ್ಕೂಟ ಮತ್ತು ಸೋಷಲಿಸ್ಟ್ ಪಾರ್ಟಿಗಳ ನಡುವೆ ಒಂದು ಚುನಾವಣಾ ಒಡಂಬಡಿಕೆ ಆಗಿತ್ತು. ಅಶೋಕ್ ಮೆಹ್ತಾ, ಮೊಯಿದ್ದೀನ್, ಹ್ಯಾರಿಸ್ ಮತ್ತು ಎಸ್.ಎಂ. ಜೋಶಿಯವರು ಅದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಪ್ರಾರಂಭದಿಂದಲೇ ಎಸ್.ಎಂ. ಜೋಶಿಯವರು ಸಾಮಾಜಿಕ ಅಸಮಾನತೆಯ ಬದ್ಧ ವಿರೋಧಿಯಾಗಿದ್ದರು. ಅದು ಅವರಿಗೆ ಅಸಹನೀಯವಾಗಿತ್ತು. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗಿಯಾಗುವುದಕ್ಕೆ ಮೊದಲೇ ಅಂದರೆ ೧೯೨೫ ರಲ್ಲೇ ಸಾಮಾಜಿಕ ಅಸಮಾನತೆ ವಿರುದ್ಧ ಸಂಘಟಿಸಿದ್ದು ಸತ್ಯಾಗ್ರಹವೊಂದರಲ್ಲಿ ಅವರು ಭಾಗವಹಿಸಿದ್ದರು. ಪುಣೆಯ ಪರ್ವತಿ ಮಂದಿರಕ್ಕೆ ಹರಿಜನರಿಗೆ ಪ್ರವೇಶ ದೊರಕಿಸಿಕೊಡುವ ಹೋರಾಟ ಅದಾಗಿತ್ತು.

೧೯೨೭ ರಲ್ಲಿ ಆರಂಭವಾದ ಯುವಜನರ ಚಳವಳಿಗೆ ಪಶ್ಚಿಮ ಭಾರತದಲ್ಲಿ ಮೆಹರುಲಿ ಅವರು ಪ್ರಮುಖ ನಾಯಕರಾಗಿದ್ದರು. ಅವರು ಅತ್ಯಂತ ಆಕರ್ಷಕ ವ್ಯಕ್ತಿತ್ವ ಹೊಂದಿದ್ದರು. ಜನಾನುರಾಗಿಯಾಗಿದ್ದರು. ಅನೇಕ ಸಂದರ್ಭಗಳಲ್ಲಿ ಎಸ್.ಎಂ.ಮತ್ತು ನಾನಾ ಸಾಹೇಬ್ ಅವರ ಬಗ್ಗೆ ಪ್ರಶಂಸೆಯ ಮಾತುಗಳನ್ನು ಆಡಿದ್ದರು. ಇದರಿಂದಾಗಿಯೇ ಪುಣೆಯ ಹಿಂದೂ ಮತಾಂಧತೆಯ ಪರಿಸರದಲ್ಲಿ ಕಲುಷಿತನಾಗದೆ ಉಳಿಯಲು ಸಾಧ್ಯವಾಯಿತು. ಅದಲ್ಲದೆ ಹೋಗಿದ್ದರೆ ನಾವೆಲ್ಲರೂ ಸಮಾಜವಾದಿಗಳಾಗುವುದಕ್ಕೆ ಬದಲಾಗಿ ಹಿಂದೂ ಕೋಮುವಾದಿಗಳಾಗಿ ಮಾರ್ಪಡುತ್ತಿದ್ದೆವು. ಯೂತ್ ಲೀಗ್‌ನ ನಾಯಕತ್ವವು ಕೋಮು ಸಾಮರಸ್ಯವನ್ನು ಕಾಯ್ದು ಕೊಳ್ಳುವಲ್ಲಿ ಕಟ್ಟುನಿಟ್ಟಾದ ನಿಷ್ಠೆಯನ್ನೂ ಹೊಂದಿತ್ತು. ಅದು ಎಸ್.ಎಂ. ಅವರ ಮನಸ್ಸಿನ ಮೇಲೆ ಸ್ಥಿರವಾದ ಮತ್ತು ಅಳಿಸಲಾಗದ ಮುದ್ರೆಯನ್ನು ಬಿತ್ತಿತ್ತು. ಅಂದಿನ ದಿನಗಳಲ್ಲಿ ಪುಣೆಯಲ್ಲಿ ಇದ್ದ ವಾತಾವರಣದಲ್ಲಿ ಕೋಮು ಮತ್ತು ಮತೀಯ ಸಾಮರಸ್ಯವನ್ನು ಕಾಪಡಿಕೊಳ್ಳುವುದ ಅಷ್ಟೊಂದು ಸುಲಭವಾದ ಕೆಲಸವೇನೂ ಆಗಿರಲಿಲ್ಲ. ಯೂಸುಫ್ ಮೆಹರುಲಿ ಅವರು ರಾಷ್ಟ್ರೀಯವಾದದ ಓರ್ವ ಜೀವಂತ ದೃಷ್ಟಾಂತವಾಗಿದ್ದರು, ಸ್ಫೂರ್ತಿ ಕೇಂದ್ರವಾಗಿದ್ದರು, ಎಸ್.ಎಂ.ಅವರಂತಹ ಧುರೀಣರು ಈ ವಿಷಯದಲ್ಲಿ ತಾವು ಮೆಹರುಲಿ ಅವರಿಗೆ ಚಿರಋಣಿಯಾಗಿದ್ದೇನೆಂದು ಬಹಿರಂಗವಾಗಿಯೇ ಹೇಳುತ್ತಿದ್ದರು.

೧೯೫೦ರಲ್ಲಿ ಮಹಾರಾಷ್ಟ್ರದ ಗ್ರಾಮೀಣ ಪ್ರದೇಶಗಳಲ್ಲಿ ಅದರಲ್ಲೂ ಕುರಿತಾಗಿ ಕೆಲವು ಜಿಲ್ಲೆಗಳಲ್ಲಿ ಶೇತ್ಕರಿ ಕಾಮಗಾರ್ ಪಾರ್ಟಿ ಒಂದು ಗಮನಾರ್ಹ ಶಕ್ತಿಯಾಗಿತ್ತು. ಅದೇ ದಿನಗಳಲ್ಲಿ ಶೇತ್ಕರಿ ಕಾಮಗಾರ್ ಪಾರ್ಟಿಯೊಂದಿಗೆ ಖಂಡಾಲ ಒಪ್ಪಂದ ಮಾಡಿಕೊಳ್ಳಲಾಗಿತ್ತು. ಆಚಾರ್ಯ ಅತ್ರೆ ಅವರು ಈ ಒಡಂಬಡಿಕೆಯ ಪ್ರಮುಖ ಮಧ್ಯಸ್ಥಿಕೆದಾರರಾಗಿದ್ದರು. ಅದರ ಮಾತುಕತೆಗಳು ಅವರ ಬಂಗಲೆಯಲ್ಲೇ ನಡೆದಿದ್ದವು. ಸೋಷಲಿಸ್ಟ್ ಪಾರ್ಟಿ, ಶೇತ್ಕರಿ ರಾಮಗಾರ್ ಪಾರ್ಟಿಗಳ ವಿಲೀನವು ಮಹಾರಾಷ್ಟ್ರದ ದೃಷ್ಟಿಕೋನದಿಂದ ಸ್ವಾಗತಾರ್ಹವೇ ಆಗಿತ್ತು. ಆದರೆ ದುರಾದೃಷ್ಟವಶಾತ್ ಕಮ್ಯುನಿಸ್ಟ್ ಸಿದ್ಧಾಂತಕ್ಕೆ ಪರವಾಗಿ ಇದ್ದ ಕೆಲವು ಮಂದಿ ಶೇತ್ಕರ್ ಕಾಮಗಾರಿ ಪಕ್ಷದ ಮೇಲೆ ದಭಾಡಿ ಸೂತ್ರವನ್ನು ಹೇರಿದರು. ಸ್ವಲ್ಪ ಮಟ್ಟಿಗೆ ಈ ವಿಲೀನಕ್ಕೆ ಕೆಲವರ ಪೂರ್ವಗ್ರಹವೂ ಅಡ್ಡಿಯಾಯಿತು. ಆಗ ಪುಣೆ ಲೋಕಸಭಾ ಕ್ಷೇತ್ರಕ್ಕೆ ಕಾಕಾ ಸಾಹೇಬ್ ಗಾಡ್ಗೀಳ್, ಕೇಶವರಾವ್ ಜಥೆ ಮತ್ತು ಎಸ್.ಎಂ.ಅವರ ನಡುವೆ ತ್ರಿಕೋನ ಸ್ಪರ್ಧೆ ಏರ್ಪಟ್ಟಿತ್ತು. ವಾಸ್ತವವಾಗಿ ಈ ಮೂವರ ಮಧ್ಯೆ ಅತ್ಯಂತ ಸೌಹರ್ದ ಸಂಬಂಧಗಳಿದ್ದವು. ಆದರೆ ರಾಜಕೀಯ ಅನಿವಾರ್ಯತೆ ಅವರನ್ನು ಸ್ಪರ್ಧಾಕಣದಲ್ಲಿ ನಿಲ್ಲುವಂತೆ ಮಾಡಿತ್ತು. ಈ ಚುನಾವಣೆಯಲ್ಲಿ ಬಿದ್ದ ಮತಗಳನ್ನು ಕೇಶವರಾವ್ ಮತ್ತು ಎಸ್.ಎಂ.ಅವರು ಸಮ ಸಮವಾಗಿ ಹಂಚಿಕೊಂಡರು. ಮೊದಲ ಮಹಾ ಚುನಾವಣೆಯಲ್ಲಿ ಸೋಷಿಯಲಿಸ್ಟ್ ಪಾರ್ಟಿಗೆ ಎಲ್ಲೂ ನಿರೀಕ್ಷಿತ ಯಶಸ್ಸು ದೊರೆಯಲಿಲ್ಲ. ಕನಿಷ್ಠ ಮುಂಬಯಿಯಲ್ಲಾದರೂ ಸೋಷಿಯಲಿಸ್ಟ್ ಪಾರ್ಟಿಯ ಅಭ್ಯರ್ಥಿಗಳು ಗೆದ್ದು ಬರುವಂತೆ ನಿರೀಕ್ಷಿಸಲಾಗಿತ್ತು. ಕಾಂಗ್ರೆಸ್ಸಿಗರು ಕೂಡಾ ಇದೇ ಅಭಿಪ್ರಾಯ ಹೊಂದಿದ್ದರು. ಆದರೆ ಫಲಿತಾಂಶ ಅವರ ನಿರೀಕ್ಷೆಗೆ ತದ್ವಿರುದ್ಧವಾಗಿತ್ತು. ದಾದ ಅಂಬೇಡ್ಕರ್ ಮತ್ತು ಅಶೋಕ್ ಮೆಹ್ತಾ ಸೋತು ಹೋದರು. ಡಾಂಗೆ ಅವರು ೮೦-೯೦ ಸಾವಿರ ಮತಗಳನ್ನು ಪಡೆದುಕೊಂಡರು. ಮೀಸಲು ಕ್ಷೇತ್ರದಲ್ಲೂ ಅಷ್ಟೇ ಸಂಖ್ಯೆಯ ಮತಗಳನ್ನು ಉದ್ದೇಶಪೂರ್ವಕವಾಗಿ ಹಾಳು ಮಾಡಲಾಯಿತು. ಅಂಬೇಡ್ಕರ್ ಅವರ ಸೋಲಿಗೆ ಅದೇ ಕಾರಣ.

ಈ ಚುನಾವಣೆಗಳಲ್ಲಿನ ಸೋಲು ಅನೇಕ ಸಮಾಜವಾದಿ ಧುರೀಣರನ್ನು ದಿಕ್ಕೆಡಿಸಿತು. ತಾಳ್ಮೆಗೆಡದವರೆಂದರೆ ಎಸ್.ಎಂ.ಒಬ್ಬರೇ. ಅವರು ಪ್ರತಿಪಕ್ಷದ ಪಾತ್ರವನ್ನು ನಿರ್ವಹಿಸಲು ಮುಂದೆ ನಿಂತರು. ೧೯೫೨ರಲ್ಲಿ ರಾಜ್ಯ ವಿಧಾನಸಭೆಗೆ ನಡೆದ ಉಪಚುನಾವಣೆಯಲ್ಲಿ ಜನರು ಅವರನ್ನು ಪುಣೆ ಮತ ಕ್ಷೇತ್ರದ ಪ್ರತಿನಿಧಿಯಾಗಿ ಆರಿಸಿ ತಂದರು. ಅಂದಿನಿಂದ ೧೯೬೨ ರವರೆಗೂ ಅವರು ರಾಜ್ಯ ವಿಧಾನಸಭೆಯಲ್ಲಿ ಪ್ರತಿಪಕ್ಷದ ನಾಯಕರು ಪಾತ್ರವನ್ನು ಅತ್ಯಂತ ಪರಿಣಾಮಕಾರಿಯಾಗಿ ನಿರ್ವಹಿಸಿದರು. ಜನರ ಕುಂದುಕೊರತೆಗಳನ್ನು ನೀಗಲು ಅಸಾಧ್ಯವಾಗಿ ಶ್ರಮಿಸಿದರು. ಅವರು ಎಂದೂ ಬಾಯುಪಚಾರದ ಮಾತುಗಳಲ್ಲಿ ಕಾಲ ಕಳೆದವರಲ್ಲ. ತಮ್ಮ ಅಭಿಪ್ರಾಯ ಪ್ರಕಟಿಸುವಲ್ಲಿ

ಅವರು ದೃಢ ಆತ್ಮವಿಶ್ವಾಸವನ್ನು ಸಂಭ್ರಮವನ್ನು ತೋರುತ್ತಿದ್ದರು. ಈ ಮೂಲಕ ಜೋಶಿಯವರು ರಾಜ್ಯ ವಿಧಾನಸಭೆಯಲ್ಲಿ ಅಚ್ಚಳಿಯದ ಮುದ್ರೆಯೊಂದನ್ನು ಬಿಟ್ಟುಹೋದರು. ಸರ್ಕಾರದ ಮೇಲೆ ಕೂಡಾ ಅವರು ನೈತಿಕ ವರ್ಚಸ್ಸನ್ನು ಬೀರಲ್ಲವರಾಗಿದ್ದರು.

ಸೋಷಲಿಸ್ಟ್ ಪಾರ್ಟಿಯ ನಾಸಿಕ್ ಅಧಿವೇಶನದ ನಂತರ ಪಕ್ಷದ ರಾಷ್ಟ್ರೀಯ ಕಾರ್ಯಕಾರಿಣಿಯ ಪ್ರಥಮ ಸಭೆ ಬೆಳಗಾವಿಯಲ್ಲಿ ಜರುಗಿತು. ಈ ಸಭೆಯಲ್ಲಿ ಭಾಷವಾರು ರಾಜ್ಯ ರಚನೆಯ ಗೊತ್ತುವಳಿಯನ್ನು ಅಂಗೀಕರಿಸಲಾಯಿತು. ರಾಷ್ಟ್ರೀಯ ಸಮಿತಿಯು ಭಾಷೆಗಳ ತಳಹದಿಯಲ್ಲಿ ರಾಜ್ಯಗಳನ್ನು ಪುನರ್ ಸಂಘಟಿಸುವ ಮೂಲಭೂತ ಸೂತ್ರಗಳನ್ನು ಅಂಗೀಕರಿಸಿತು. ಆದರೆ ಮುಂಬಯಿಯ ಪ್ರಶ್ನೆ ಒಂದಿಷ್ಟು ವಿವಾದಾತ್ಮಕವಾಗಿತ್ತು. ಇದೇ ವೇಳೆಯಲ್ಲಿ ರಾಷ್ಟ್ರೀಯ ಕಾರ್ಯಕಾರಿಣಿಯ ಇದೇ ತಳಹದಿಯಲ್ಲಿ ರಾಜ್ಯವನ್ನು ರಚಿಸುವಂತೆ ....... ಹುದ್ದೆಯನ್ನು ಸ್ವೀಕರಿಸಿದ್ದರು. ಆ ದಿನಗಳಲ್ಲಿ ಎಸ್.ಎಂ. ಅವರು ಪ್ರಜಾಸೋಷಲಿಸ್ಟ್ ಪಾರ್ಟಿಯ ಅಧ್ಯಕ್ಷರಾಗಿದ್ದರು. ಅಶೋಕ್ ಮೆಹ್ತಾ ಅವರ ನಡವಳಿಕೆಯನ್ನು ಜೋಶಿ ಅವರ ಇತರ ಮಿತ್ರರು ಇಷ್ಟಪಡಲಿಲ್ಲ. ಅನೇಕರು ಅಶೋಕ್ ಮೆಹ್ತಾ ಅವರೊಂದಿಗೆ ಕಾಂಗ್ರೆಸ್ ಪಕ್ಷ ಸೇರಿದರು. ಆ ದಿನಗಳಲ್ಲಿ ಸಮಾಜವಾದಿಗಳ ಐಕ್ಯಮತ್ಯ ಸಾಧನೆಗಾಗಿ ನಡೆಯುತ್ತಿದ್ದ ಪ್ರಯತ್ನಗಳಿಗೆ ಎಸ್.ಎಂ. ಜೋಶಿಯವರು ತುಂಬು ಹೃದಯದ ಸಹಾಯ ನೀಡಿದರು. ೧೯೬೪ರಲ್ಲಿ ಏಕತೆ ಕಾರ್ಯರೂಪಕ್ಕೆ ಬಂದಿತು. ಈ ಏಕತೆ ಅಲ್ಪಾಯುವಾಯಿತೆಂಬುದು ಬೇರೆ ವಿಷಯ. ಆದರೆ ಅದಕ್ಕಾಗಿ ಯಾವ ಕಾರಣದಿಂದಲೂ ಎಸ್.ಎಂ. ಅವರನ್ನು ನಿಂದಿಸುವಂತಿಲ್ಲ. ಬನಾರಸ್ ಸಮ್ಮೇಳನದಲ್ಲಿ ಅವರು ನೀಡಿದ ಭಾಷಣವು ಅವರ ಆತ್ಮಸಾಕ್ಷಿಯ ದನಿಯಾಗಿತ್ತು ಮತ್ತು ಅದು ಅತ್ಯಂತ ಪರಿಣಾಮಕಾರಿಯಾಗಿತ್ತು.

ಚೀನಾದ ದಾಳಿಯ ನಂತರದಲ್ಲಿ ಸರ್ಕಾರದ ಸೋಲಿನ ಬಗ್ಗೆ ಡಾ.ಲೋಹಿಯಾ ಅವರ ಘೋಷಣೆಯನ್ನು ಎಸ್.ಎಂ. ಜೋಶಿಯವರು ಮನಃಪೂರ್ವಕವಾಗಿ ಸ್ವಾಗತಿಸಿದರು. ೧೯೬೭ರ ಚುನಾವಣೆಗಳಲ್ಲಿ ವ್ಯಾಪಕ ಮಟ್ಟದಲ್ಲಿ ಕಾಂಗ್ರೆಸ್ ವಿರೋಧಿ ರಂಗವನ್ನು ಸಂಘಟಿಸುವಲ್ಲಿ ಅವರು ಮಹತ್ವಪೂರ್ಣ ಪಾತ್ರ ವಹಿಸಿದರು. ಮುಂಬಯಿಯೂ ಒಳಗೊಂಡಂತೆ ಸಂಯುಕ್ತ ಮಹಾರಾಷ್ಟ್ರವನ್ನು ರಚಿಸಬೇಕೆಂಬ ಒಂದಂಶದ ಕಾರ್ಯಕ್ರಮವನ್ನು ಅದು ಹೊಂದಿತ್ತು. ಆಗ ಅದರ ಘೋಷಣೆಯ "ಕಾಂಗ್ರೆಸ್ ಹಟಾವೋ ದೇಶ್ ಬಚಾವೋ" ಎಂಬುದಾಗಿತ್ತು. ಈ ಗುರಿಯನ್ನು ಸಾಧಿಸುವ ಸಾಧನವಾಗಿ ಸ್ಥಾನಗಳ ವಿತರಣೆಯನ್ನು ಸ್ವೀಕರಿಸಲಾಯಿತು. ಈ ವಿಷಯದಲ್ಲಿ ಡಾ.ಲೋಹಿಯಾ ಅವರೊಂದಿಗೆ ನನಗಿದ್ದ ಭಿನ್ನಾಭಿಪ್ರಾಯ ಮತ್ತೆ ಎರಡು-ಮೂರು ವರ್ಷಗಳವರೆಗೆ ಮುಂದುವರೆಯಿತು. ರಾಜರು, ಸ್ವತಂತ್ರ ಪಕ್ಷ ಮತ್ತು ಜನಸಂಘದ ಧುರೀಣರ ಸಹಾಯದಿಂದ ರಚಿತವಾದ ಸರಕಾರವು

ಪ್ರಗತಿಶೀಲವಾಗಿರುತ್ತದೆಂಬ ಅಭಿಪ್ರಾಯವನ್ನು ಅಂಗೀಕರಿಸಲು ನನಗೆ ಎಂದೂ ಸಾಧ್ಯವಾಗಲಿಲ್ಲ. ನಮ್ಮ ರಾಜಕೀಯ ಜೀವನದ ಆರಂಭದಿಂದಲೇ ನಾವು ಆರ್.ಎಸ್.ಎಸ್. ಮತಾಂಧತೆ ಮತ್ತು ಸಂಕುಚಿತ ಹಿಂದೂವಾದವನ್ನೂ ಎಲ್ಲ ವಿಧದಿಂದಲೂ ವಿರೋಧಿಸುತ್ತಾ ಬಂದಿದ್ದೆವು. ಆದರೆ ಅನಂತರದ ದಿನಗಳಲ್ಲಿ ಕೆಲವೊಂದು ಒತ್ತಡಗಳಿಂದಾಗಿ ಮತ್ತು ಪ್ರಧಾನವಾಗಿ ಡಾ.ಲೋಹಿಯಾ ಅವರ ಆದೇಶದ ಮೇರೆಗೆ ನಾನು ಈ ಸಿದ್ಧಾಂತವನ್ನು ಸ್ವೀಕರಿಸಿದ್ದೆ. ಕಾಂಗ್ರೆಸ್‌ಯೇತರ ಅಧಿಕಾರ ವ್ಯವಸ್ಥೆ ಮತ್ತು ಜನತಾ ಪಾರ್ಟಿಯ ಸಂಘಟನೆಗಳು ಸಂಯುಕ್ತ ಮಹಾರಾಷ್ಟ್ರ ಸಮಿತಿಯ ಪ್ರಯೋಗದ ಪುನರಾವರ್ತನೆಯಾಗಿತ್ತು ಎಂಬುದು ಎಸ್.ಎಂ. ಜೋಶಿಯವರ ಅಭಿಪ್ರಾಯವಾಗಿತ್ತು.

೧೯೭೧ರಲ್ಲಿ ಎಸ್.ಎಂ.ಜೋಶಿಯವರು ಭವಿಷ್ಯದಲ್ಲಿ ಚುನಾವಣೆಗಳಲ್ಲಿ ಸ್ಪರ್ಧಿಸದಿರುವ ದೃಢ ನಿರ್ಧಾರ ತೆಗೆದುಕೊಂಡರು. ಈ ದಿನಗಳಲ್ಲಿ ಬ್ಯಾಂಕ್‌ಗಳ ರಾಷ್ಟ್ರೀಕರಣ, ರಾಜಧನ ರದ್ದತಿ ಮತ್ತಿತರ ಕಣ್ಣಿಗೆ ಎದ್ದು ಕಾಣುವ ಕೆಲವೊಂದು ಕ್ರಮಗಳಿಂದಾಗಿ ಶ್ರೀಮತಿ ಇಂದಿರಾಗಾಂಧಿಯವರು ಜನಪ್ರಿಯತೆ ಪಡೆಯತೊಡಗಿದ್ದರು. ಈ ಮಧ್ಯೆ ಪುಣೆಯ ಲೋಕಸಭಾ ಕ್ಷೇತ್ರವನ್ನು ಇಂದಿರಾಜಿಯವರು ಎಸ್.ಎಂ. ಅವರಿಗೆ ಬಿಟ್ಟು ಕೊಡಲಿದ್ದಾರೆ ಎಂಬ ಮಾತುಗಳು ಕೇಳಿ ಬರುತ್ತಿದ್ದವು. ಆದರೆ ಎಸ್.ಎಂ. ಜೋಶಿಯವರು ತಾವು ತಳೆದಿದ್ದ ದೃಢ ನಿರ್ಧಾರದಿಂದ ವಿಚಲಿತರಾಗಲಿಲ್ಲ. ೧೯೬೭ರಲ್ಲಿ ಎಸ್.ಎಂ.ಅವರು ಪುಣೆ ಮತಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾಗಿದ್ದರು. ಅದು ಅವರ ಪಕ್ಷದ ಬಲದಿಂದ ಆಗಿರದೆ ಅವರ ಜನಪ್ರಿಯತೆಯೇ ಕಾರಣವಾಗಿತ್ತು. ೧೯೭೭ರ ಜನತಾ ಪಕ್ಷದ ಅಲೆಯಲ್ಲಿ ಮಹಾರಾಷ್ಟ್ರದ ಯಾವುದೇ ಮತಕ್ಷೇತ್ರದಿಂದ ಅವರು ಸುಲಭವಾಗಿ ಚುನಾವಣೆಯನ್ನು ಗೆಲ್ಲಬಲ್ಲವರಾಗಿದ್ದರು. ಆದರೆ ಚುನಾವಣೆಗೆ ಸ್ಪರ್ಧಿಸದಿರುವ ತಮ್ಮ ನಿರ್ಧಾರವನ್ನು ಅವರು ಬದಲಿಸಲಿಲ್ಲ. ಹೋರಾಟ ಮತ್ತು ರಚನಾತ್ಮಕ ಕಾರ್ಯದಲ್ಲಿ ಅವರಿಗೆ ಅಗಾಧ ಮತ್ತು ಅಚಲ ನಿಷ್ಠೆ ಇದ್ದಿತು. ೧೯೬೪ ರಲ್ಲಿ ಸಮಾಜವಾದಿಗಳ ಏಕತೆಗಾಗಿ ಏಅವರು ನಡೆಸಿದ ಪ್ರಯತ್ನಗಳು ಫಲ ನೀಡದಿರಬಹುದು. ಆದರೆ ಅವರ ಆತ್ಮವಿಶ್ವಾಸ ಅಚಲವಾಗಿಯೇ ಉಳಿದಿತ್ತು. ಕೊನೆಗೂ ೧೯೭೧ರಲ್ಲಿಂತೂ ಆ ಏಕತೆ ಸಾಧ್ಯವಾಯಿತು. ಆದರೆ ಆ ವೇಳೆಗೆ ಪ್ರಜಾ ಸೋಷಲಿಸ್ಟ್ ಪಾರ್ಟಿಯ ನಿಷ್ಕ್ರಿಯಗೊಂಡಿತ್ತು. ಅದೇ ರೀತಿ ಸಂಯುಕ್ತ ಸೋಷಲಿಸ್ಟ್ ಪಾರ್ಟಿ ಕೂಡಾ ಅವಸಾನದ ಹಂತ ತಲುಪಿತ್ತು. ಸಹಕಾರವಾದ, ಸರ್ವೋದಯ ಸಿದ್ಧಾಂತ ಮತ್ತು ಕಾಂಗ್ರೆಸ್ ನಿರ್ನಾಮದ ಧೋರಣೆಯಿಂದಾಗಿ ಸಂಯುಕ್ತ ಸೋಷಲಿಸ್ಟ್ ಪಾರ್ಟಿ ಪರ್ಯಾಯವಾಗುವ ಭರವಸೆ-ನಿರೀಕ್ಷೆಗಳು ಮಣ್ಣೂ ಪಾಲಾದವು.

ಗುಜರಾತ್ ಮತ್ತು ಬಿಹಾರ್‌ಗಳಲ್ಲಿನ ಯುವ ಚಳವಳಿಗಳ ದೆಸೆಯಿಂದಾಗಿ ಜಯಪ್ರಕಾಶ್ ನಾರಾಯಣ್ ಅವರು ಮತ್ತೊಮ್ಮೆ ಸಕ್ರಿಯ ರಾಜಕಾರಣಕ್ಕೆ ಧುಮುಕಿದರು.

ಶ್ರೀಮತಿ ಇಂದಿರಾಗಾಂಧಿ ಅವರೊಂದಿಗಿನ ಅವರ ಸಂಬಂಧಗಳು ೧೯೭೧ರಿಂದಲೇ ಹಳಸತೊಡಗಿತು. ಆ ವರ್ಷದ ಮಾರ್ಚ್-ಏಪ್ರಿಲ್ ತಿಂಗಳಲ್ಲಿ ಜಯಪ್ರಕಾಶ್‌ಜಿ ಮತ್ತು ಶ್ರೀಮತಿ ಇಂದಿರಾಗಾಂಧಿ ಅವರ ನಡುವಣ ಪತ್ರ ವ್ಯವಹಾರದಿಂದ ಇದು ಸ್ಪಷ್ಟವಾಗಿದೆ. ಬಿಹಾರದಲ್ಲಿ ಜೆ.ಪಿ. ಅವರು ಆರಂಭಿಸಿದ ಜನತಾ ಚಳವಳಿಗೆ ಎಸ್.ಎಂ. ಅವರು ತಮ್ಮ ಸಂಪೂರ್ಣ ಬೆಂಬಲ ನೀಡಿದ್ದರು. ತುರ್ತು ಪರಿಸ್ಥಿತಿಗೆ ಮೊದಲು ಮತ್ತು ಆನಂತರದಲ್ಲಿ ಪ್ರತಿಪಕ್ಷಗಳನ್ನು ಒಂದುಗೂಡಿಸುವ ಜಯಪ್ರಕಾಶ್‌ಜಿ ಅವರ ಕಾರ್ಯಭಾರಕ್ಕೆ ಅವರು ಸಂಪೂರ್ಣ ಬೆಂಬಲಿ ನೀಡಿದ್ದರು. ಆದರೆ ಅವರ ವಿಚಾರಧಾರೆ ಬದಲಾಗಿತ್ತು ಎಂಬುದು ಅದರ ಅರ್ಥವಲ್ಲ ಅಥವಾ ಆರ್.ಎಸ್.ಎಸ್ ಮತ್ತು ಜನಸಂಘಗಳು ಬದಲಾಗಿವೆ ಎಂದು ಅವರು ಒಪಿಕೊಂಡಿದ್ದಾರೆಂಬುದೂ ಅದರ ಅರ್ಥವಲ್ಲ. ಜನತಾ ಪಾರ್ಟಿ ರಚಿತವಾದ ನಂತರದಲ್ಲಿ ಸಂಘ-ಕುರಿತ ಅವರ ವ್ಯಕ್ತಿಗತ ಅನುಭವಗಳು ಸಂಪೂರ್ಣ ಭ್ರಮನಿರಸನ ಉಂಟು ಮಾಡಿದವು.

೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಾರ್ಟಿಯು ಕಮ್ಯುನಿಸ್ಟ್ ಪಾರ್ಟಿ (ಮಾರ್ಕಿಸ್ಟ್) ಅಕಾಲಿದಳ, ದ್ರಾವಿಡ ಮುನೇತ್ರ ಕಳಗಂ (ತಮಿಳ್ನಾಡು) ರಿಪಬ್ಲಿಕ್ ಪಾರ್ಟಿ ಮತ್ತು ಶೇತ್ಕರಿ ಕಾಮಗಾರ್ ಪಕ್ಷ (ಮಹಾರಾಷ್ಟ್ರ) ಮತ್ತಿತರ ಪಕ್ಷಗಳೊಂದಿಗೆ ಚುನಾವಣಾ ಒಡಂಬಡಿಕೆಯೊಂದನ್ನು ಮಾಡಿಕೊಂಡಿತು. ಪಶ್ಚಿಮ ಬಂಗಾಳದಲ್ಲಿ ಜನತಾ ಪಾರ್ಟಿ ಸದಸ್ಯರ ಯಶಸ್ಸಿಗೆ ಅಲ್ಲಿ ಮಾರ್ಕಿಸ್ಟರಿಂದ ದೊರೆತ ಬೆಂಬಲವೇ ಕಾರಣ. ಅದೇ ರೀತಿ ತಮಿಳುನಾಡಿನಲ್ಲಿ ಕರುಣಾನಿಧಿ ಅವರು ನೀಡಿದ ಸಹಕಾರದಿಂದಾಗಿ ಜನತಾಪಾರ್ಟಿ ನೂರು ಲೋಕಸಭಾ ಸ್ಥಾನಗಳನ್ನು ಗೆದ್ದುಕೊಂಡಿತು. ಅದೇ ರೀತಿ ಶೇತ್ಕರಿ ಕಾಮಗಾರ್ ಪಕ್ಷ ಮತ್ತು ಇತರ ಪಕ್ಷಗಳು ನೀಡಿದ ಬೆಂಬಲವೇ ಮಹಾರಾಷ್ಟ್ರದಲ್ಲಿ ಪ್ರತಿಪಕ್ಷಗಳಿಗೆ ಗೆಲುವನ್ನು ತಂದುಕೊಟ್ಟಿತು. ಇದೇ ರೀತಿ ಪಶ್ಚಿಮ ಬಂಗಾಳ, ತಮಿಳ್ನಾಡು ಮತ್ತಿತರ ರಾಜ್ಯಗಳಲ್ಲಿ ಮುಂಬರುವ ವಿಧಾನಸಭಾ ಚುನಾವಣೆಗಳಲ್ಲಿಯೂ ಇದೇ ರೀತಿ ಸಹಕಾರ ಮುಂದುವರೆಯಬೇಕೆಂದು ನಾನು ಆಗ್ರಹಪಡಿಸಿದ್ದೆ. ಜಮ್ಮು ಕಾಶ್ಮೀರದಲ್ಲಿಯೂ ಶೇಖ್ ಅಬ್ದುಲ್ಲ ಅವರ ನೇತೃತ್ವದ ನ್ಯಾಷನಲ್ ಕಾನ್‌ಫರೆನ್ಸ್‌ನೊಂದಿಗೆ ಚುನಾವಣಾ ಹೊಂದಾಣಿಕೆ ಮಾಡಿಕೊಳ್ಳಬೇಕೆಂಬುದು ನನ್ನ ಆಶಯವಾಗಿತ್ತು. ಚಂದ್ರಶೇಖರ್ ಮತ್ತು ಜಾರ್ಜ್ ಫರ್ನಾಂಡಿಸ್ ಅವರಂತಹ ಮುಖಂಡರು ನನ್ನ ಪ್ರಸ್ತಾಸಕ್ಕೆ ಸಮ್ಮತಿ ಸೂಚಿಸಿದ್ದರು. ಎಸ್.ಎಂ.ಜೋಶಿ ಕೂಡಾ ಇದೇ ಅಭಿಪ್ರಾಯ ಹೊಂದಿದ್ದರು. ಇಷ್ಟು ಮಾತ್ರವಲ್ಲ. ಮಹಾರಾಷ್ಟ್ರ ಜನತಾ ಪಾರ್ಟಿಯ ಅಧ್ಯಕ್ಷರ ನೆಲೆಯಲ್ಲಿ ಅವರು ಶೇತ್ಕರಿ ಕಾಮಗಾರ್ ಪಕ್ಷದೊಂದಿಗೆ ಈ ಸಂಬಂಧದಲ್ಲಿ ಮಾತುಕತೆ ನಡೆಸಿದ್ದರು. ಆದರೆ ಅಧಿಕಾರವು ಜನತಾ ಪಕ್ಷದ ನಾಯಕತ್ವದ ತಲೆಯನ್ನು ಅಡರಿತ್ತೆಂದು ಕಾಣಿಸುತ್ತದೆ. ಇದರ ಪರಿಣಾಮವಾಗಿ ಪಶ್ಚಿಮ ಬಂಗಾಲದಲ್ಲಿ ಉತ್ತಮ ಫಲಿತಾಂಶ ಸಾಧಿಸಲಾಗಲಿಲ್ಲ. ಕತಮಿಳುನಾಡಿನಲ್ಲಿಯೂ

ಅದು ಸೋಲಿಸಲ್ಪಟ್ಟಿತು. ಕಾಶ್ಮೀರದಲ್ಲಿ ಶೇಖ್ ಅಬ್ದುಲ್ ಅವರು ಅತ್ಯಧಿಕ ಬಹುಮತದಿಂದ ವಿಜಯಿಯಾದರು.

ಈ ಮೊದಲೇ ನಾನು ಹೇಳಿದಂತೆ ಎಸ್.ಎಂ. ಜೋಶಿಯವರು ಮಹಾರಾಷ್ಟ್ರದಲ್ಲಿ ಶೇತ್ಕರಿ ಕಾಮಗಾರ್ ಪಕ್ಷದೊಂದಿಗೆ ಚುನಾವಣಾ ಹೊಂದಾಣಿಕೆಗೆ ತಮ್ಮ ಪ್ರಾಮಾಣಿಕ ಪ್ರಯತ್ನ ನಡೆಸಿದ್ದರು. ಈ ಸಂಬಂಧದಲ್ಲಿ ಜನತಾಪಕ್ಷದ ರಾಜ್ಯ ಶಾಖೆಯ ಕಾರ್ಯಕಾರಿಣಿ ಸಭೆಯೊಂದು ನಡೆಯಿತು. ಈ ಸಭೆಯಲ್ಲಿ ನಾನು ಮತ್ತು ನಾನಾಜಿ ದೇಶ್‌ಮುಖ್ ಅವರು ಭಾಗವಹಿಸಿದ್ದೆವು. ಈ ಸಭೆಯಲ್ಲಿ ಎಸ್.ಎಂ.ಅವರು ಶೇತ್ಕರಿ ಕಾಮಗಾರ್ ಪಕ್ಷದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದು ಇಂದಿನ ಅಗತ್ಯವೆಂದು ವಾದಿಸಿದ್ದರು. ನಾನು ಬಾಪು ಕಲ್ದಾತೆ ಮತ್ತು ಇತರ ಮೂರು - ನಾಲ್ಕು ಮಂದಿ ಅವರನ್ನು ಬೆಂಬಲಿಸಿದ್ದೆವು. ಉಳಿದವರು ಅವರನ್ನು ವಿರೋಧಿಸಿದರು. ಜನತಾ ಪಾರ್ಟಿಯ ಸಾಮರ್ಥ್ಯ ಕುರಿತಂತೆ ಅವರ ಅಭಿಪ್ರಾಯವು ಸತ್ಯದಿಂದ ಬಹಳ ದೂರವಾಗಿತ್ತು. ಅಂತಿಮವಾಗಿ ಯಾವುದೇ ರಾಜಿ ಸೂತ್ರಕ್ಕೂ ಬರಲು ಸಾಧ್ಯವಾಗಲಿಲ್ಲ. ಇದರಿಂದಾಗಿ ಶೇತ್ಕರಿ ಕಾಮಗಾರ್ ಪಕ್ಷ ಸೋಲುಣ್ಣಬೇಕಾಯಿತು. ಜನತಾ ಪಕ್ಷಕ್ಕೆ ಅಗತ್ಯವಿರುವಷ್ಟು ಸ್ಥಾನಗಳನ್ನು ಸಂಪಾದಿಸಲು ಸಾಧ್ಯವಾಗಲಿಲ್ಲ. ಈ ಫಲಿತಾಂಶ ಮೊದಲು ಊಹಿಸಿದಂತೆಯೇ ಆಯಿತು. ಇದರ ಪರಿಣಾಮವಾಗಿ ವಸಂತದಾದಾ ಪಾಟೀಲ್ ನೇತೃತ್ವದ ಕಾಂಗ್ರೆಸ್ (ಐ) ಸಮ್ಮಿಶ್ರ ಸರ್ಕಾರವೊಂದನ್ನು ರಚಿಸಿತು. ಶೇತ್ಕರಿ ಕಾಮಗರಿ ಪಕ್ಷದೊಂದಿಗೆ ಚುನಾವಣಾ ಹೊಂದಾಣಿಕೆ ಮಾಡಿಕೊಳ್ಳುವಲ್ಲಿನ ನಕರಾತ್ಮಕ ಧೋರಣೆಯಿಂದಾಗಿ ಎಸ್.ಎಂ. ಅರು ಬೇಸತ್ತು ಹೋಗಿದ್ದರು. ಟಿಕೆಟ್‌ಗಳ ವಿತರಣೆಯಲ್ಲಿನ ದುಂಡಾವರ್ತನೆ, ನಾಲ್ಕು ರಾಜ್ಯಗಳಲ್ಲಿ ತಮ್ಮ ಪಕ್ಷದ ಮುಖ್ಯಮಂತ್ರಿಗಳಿದ್ದು ನಿರಂತರವಾಗಿ ಮುಂದುವರೆದ ಬಿಕ್ಕಟ್ಟು, ಮಹಾರಾಷ್ಟ್ರದಲ್ಲಿ ಸಮಾಜವಾದಿ ಮುಖ್ಯೆಮಂತ್ರಿ ಇರಬಾರದೆಂದು ನಡೆಸಿದ ದ್ರೋಹ ಚಿಂತನೆ, ಅದೇ ರೀತಿ ಮಹಾರಾಷ್ಟ್ರ ಜನತಾಪಾರ್ಟಿಯ ಅಧ್ಯಕ್ಷ ಸ್ಥಾನಕ್ಕೆ ಸಮಾಜವಾದಿಯನ್ನು ತರಬಾರದೆಂದು ನಡೆಸಿದ ಷಡ್ಯಂತ್ರ, ಮರಾಠಿ ಸಾಪ್ತಾಹಿಕ "ಸಂಘಿ"ಯಲ್ಲಿ ನಿರಂತರವಾಗಿ ನಡೆಸಲಾದ ದ್ವೇಷದ ಅಪಪ್ರಚಾರ ಇವೆಲ್ಲವೂ ಜೋಶಿಯವರಲ್ಲಿ ಜಿಗುಪ್ಸೆ ಹುಟ್ಟಿಸಿತು. ಇಂತಹ ಪರಿಸ್ಥಿತಿಯಲ್ಲಿ ಅವರು ಆರ್.ಎಸ್.ಎಸ್.ನೊಂದಿಗೆ ಹೊಂದಾಣಿಕೆ ಮಾಡಿಕೊಂಡು ಹೋಗುವುದು ಸಾಧ್ಯವಾಗದೆಂದು ಮತ್ತು ರಾಜ್ಯದಲ್ಲಿನ ರಾಜಕೀಯ ವ್ಯವಸ್ಥೆಯನ್ನು ಪುನಃ ಆರಂಭದಿಂದ ಕಟ್ಟುವುದು ಅನಿವಾರ್ಯ ಎಂಬ ಅಂಶವನ್ನು ಅವರು ನನ್ನೊಂದಿಗೂ ಮತ್ತು ಇತರ ಅನೇಕರೊಂದಿಗೂ ಹೇಳಿದ್ದಾರೆ.

೧೯೫೨ರ ಚುನಾವಣೆ ಕಾಲದಿಂದಲೂ ಆಡಳಿತರೂಢ ಕಾಂಗ್ರೆಸ್ ಪಕ್ಷದ ಕಾರ್ಯತಂತ್ರ ಒಂದೇ ಆಗಿತ್ತು. ಅದೆಂದರೆ ಪ್ರತಿಪಕ್ಷಗಳ ಸದಸ್ಯರು ತಮ್ಮ ತಮ್ಮ ಪಕ್ಷಗಳಿಂದ

ಹೊರಬರುವಂತೆ ಅವರಿಗೆ ಪ್ರಲೋಭನೆಗಳನ್ನು ಒಡ್ಡುವುದು ಮತ್ತು ಅಂತಹವರು ಕಾಂಗ್ರೆಸ್‌ಗೆ ಪಕ್ಷಾಂತರ ಮಾಡುವಂತೆ ಪ್ರೇರೇಪಿಸುವುದು ಆಗಿತ್ತು. ತಮಿಳ್ನಾಡಿನಲ್ಲಿ ರಾಜಾಜಿ ಅವರನ್ನು ಮುಖ್ಯಮಂತ್ರಿಗಳನ್ನಾಗಿ ಮಾಡಿದ್ದು ಈ ತಂತ್ರದಿಂದಲೇ. ಹೀಗೆ ನೈತಿಕ ಮೌಲ್ಯಗಳಲ್ಲೇ ರಾಜಿ ಮಾಡಿಕೊಂಡು ಸಣ್ಣ ಪಕ್ಷಗಳನ್ನು ಚೂರು ಚೂರು ಮಾಡುವುದು ಕಾಂಗ್ರೆಸ್‌ನ ತಂತ್ರವಾಗಿತ್ತು. ೧೯೫೩ರಲ್ಲಿ ಆಂಧ್ರಪ್ರದೇಶ ರಚಿತವಾಯಿತು. ಅಲ್ಲಿಗೆ ಟಿ. ಪ್ರಕಾಶ್ ಎಂಬುವರನ್ನು ಮುಖ್ಯಮಂತ್ರಿಯನ್ನಾಗಿ ನೇಮಿಸುವ ವಿಷಯದಲ್ಲಿ ಜನರಲ್ಲಿ ಸರ್ವಾನುಮತ ಇದ್ದಿತು. ಅಲ್ಲಿನ ವಿಧಾನಸಭೆಯಲ್ಲಿ ಯಾವ ಪಕ್ಷಕ್ಕೂ ಬಹುಮತ ಬಂದಿರಲಿಲ್ಲ. ಜನರ ಅಭಿಮತಕ್ಕೆ ಪೂರಕವಾಗಿ ಪ್ರಜಾ ಸೋಷಲಿಸ್ಟ್ ಪಾರ್ಟಿ ಸಮ್ಮಿಶ್ರ ಸಂಪುಟದ ರಚನೆಗೆ ತನ್ನ ಸಮ್ಮತಿ ನೀಡಿತು. ಟಿ. ಪ್ರಕಾಶ್ ಅವರು ಪ್ರಜಾ ಸೋಷಲಿಸ್ಟ್ ಪಾರ್ಟಿಯ ನಾಯಕರಾಗಿದ್ದರಿಂದ ಅವರನ್ನು ಮುಖ್ಯಮಂತ್ರಿಯಾಗಿ ಸ್ವೀಕರಿಸುವುದು ಕಾಂಗ್ರೆಸ್‌ಗೆ ಇಷ್ಟವಿರಲಿಲ್ಲ. ನೆಹರು ಅವರು ಒಳಗೊಂಡಂತೆ ಎಲ್ಲ ಧುರೀಣರು ಅವರನ್ನು ಪ್ರಜಾ ಸೋಷಲಿಸ್ಟ್ ಪಾರ್ಟಿಯನ್ನು ಬಿಟ್ಟು ಬರುವಂತೆ ಆಗ್ರಹಪಡಿಸಿದರು. ಪ್ರಕಾಶ್ ಅವರು ಮಾತಿಗೆ ಮರುಳಾದರು. ಪಕ್ಷವನ್ನು ತೊರೆದೇ ಬಿಟ್ಟರು. ಕಾಂಗ್ರೆಸ್ ಅವರಿಗೆ ಮುಖ್ಯಮಂತ್ರಿ ಪದವಿಯನ್ನು ಪಾರಿತೋಷಕವಾಗಿ ನೀಡಿತು. ಡಾ. ಲೋಹಿಯಾ ಅವರು ಈ ಎಲ್ಲ ಬೆಳವಣಿಗೆಗಳನ್ನು 'ರಾಜಕೀಯದ ಹಗಲುದರೋಡೆ' ಎಂದು ಕರೆದಿದ್ದರು. ೧೯೫೬ರಲ್ಲಿ ಡಾ. ಲೋಹಿಯಾ ಅವರು ಅಧಿಕಾರದ ಲಾಲಸೆಯಿಂದ ಪಕ್ಷಾಂತರ ಮಾರ್ಗವನ್ನು ಅನುಸರಿಸುವ ಕೆಟ್ಟ ಪದ್ಧತಿಯನ್ನು ಕೊನೆಗಾಣಿಸಲು ಜನಪ್ರತಿನಿಧಿಗಳಿಗೆ ನೀತಿ ಸಂಹಿತೆಯೊಂದನು ರೂಪಿಸುವಂತೆ ಕರೆ ಕೊಟ್ಟಿದ್ದರು. ಆದರೆ ಕಾಂಗ್ರೆಸ್ ಅದನ್ನು ಒಪ್ಪಿಕೊಳ್ಳಲಿಲ್ಲ.

ಆದಾದ ನಾಲ್ಕೈದು ವರ್ಷಗಳು ನಂತರ ಶ್ರೀ ಧನಂಜಯರಾವ್ ಗಾಡ್ಗೀಳ್ ಅವರ ಸ್ಫೂರ್ತಿಯಿಂದಾಗಿ ಭಟ್‌ಘರ್ ಸರೋವರದ ಬಳಿ ಸರ್ವಪಕ್ಷದ ಸಭೆಯೊದನ್ನು ಜರುಗಿಸಲಾಯಿತು. ಆದರೂ ಯಶವಂತರಾವ್ ಅವರ ಪ್ರತಿಭಟನೆಯಿಂದಾಗಿ ಅಲ್ಲಿ ಕೂಡಾ ಪಕ್ಷಾಂತರ ಕುರಿತು ಗೊತ್ತುವಳಿ ಅಂಗೀಕರಿಸಲು ಸಾಧ್ಯವಾಗಲಿಲ್ಲ. ಅವರಿಗೆ ಪಿ.ಡಬಲ್ಯೂ ್ಯಪಿ ಮತ್ತು ಪಿ.ಎಸ್.ಪಿ.ಶಾಸಕರನ್ನು ಪಕ್ಷದೊಳಕ್ಕೆ ತರುವುದು ಮುಖ್ಯವಾಗಿತ್ತು. ಇತರ ರಾಜ್ಯಗಳಲ್ಲಿ ಕೂಡ ಕಾಂಗ್ರೆಸ್ ಯಶವಂತರಾವ್ ಮಾರ್ಗವನ್ನೇ ಅನುಸರಿಸಿತು. ಪಟ್ಟಂ ತಾನು ಪಿಳ್ಳೈ ಅವರನ್ನು ರಾಜ್ಯಪಾಲರನ್ನಾಗಿ ನೇಮಿಸಿದ ಕಾರಣದಿಂದ ಖಾಲಿ ಬಿದ್ದಿದ್ದ ಕೇರಳದ ಮುಖ್ಯಮಂತ್ರಿ ಸ್ಥಾನವನ್ನು ಕೂಡಾ ಕಾಂಗ್ರೆಸ್ ತನ್ನ ವಶಕ್ಕೆ ತೆಗೆದುಕೊಂಡಿತು. ಇವೆಲ್ಲವನ್ನು ನೋಡಿ ಬೇಸತ್ತ ಡಾ.ಲೋಹಿಯಾ ಅವರು ಪಕ್ಷಾಂತರದ ಇದೇ ಸಾಧನವನ್ನು ಕಾಂಗ್ರೆಸ್ ವಿರುದ್ಧ ಅದಕ್ಕೆ ಬುದ್ಧಿ ಕಲಿಸಲು ನಿರ್ಧರಿಸಿದರು. ಹರಿಯಾಣ ಮತ್ತು ಉತ್ತರ ಪ್ರದೇಶಗಳಲ್ಲಿ ಕಾಂಗ್ರೆಸ್ ಸರಕಾರಗಳನ್ನು ಉರುಳಿಸುವಲ್ಲಿ ಡಾ.ಲೋಹಿಯಾ ಅವರ ಕೈವಾಡ ಇದ್ದಿತು. ಹರಿಯಾಣದಲ್ಲಿ ರಾವ್ ಬೀರೇಂದ್ರ ಸಿಂಗ್ ಅವರನ್ನು ಮುಖ್ಯಮಂತ್ರಿಯಾಗಿ

ಪ್ರತಿಷ್ಠಾಪಿಸಿದರೆ, ಚೌಧರಿ ಚರಣ್‌ಸಿಂಗ್ ಅವರನ್ನು ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿ ನೇಮಿಸುವ ಮೂಲಕ ಅವರು ಆ ಕಾರ್ಯವನ್ನು ಸಾಧಿಸಿದರು. ಮಧ್ಯಪ್ರದೇಶದಲ್ಲಿ ಕಾಂಗ್ರೆಸ್ ಶಾಸಕರ ಮಧ್ಯೆ ಇಂತಹ ಬಂಡಾಯವನ್ನು ವಿಜಯರಾಜೇ ಸಿಂಧಿಯಾ ಅವರು ಹುಟ್ಟು ಹಾಕಿದರು. ಈ ವಿಷಯ ಸಂಯುಕ್ತ ಸಮಾಜವಾದಿ ಪಕ್ಷದ ರಾಷ್ಟ್ರೀಯ ಕಾರ್ಯಕಾರಿಣಿ ಸಭೆಯಲ್ಲಿ ಚರ್ಚೆಗೆ ಬಂದಿತು. ಆಗ ಬಂಡುಕೋರ ಶಾಸಕರನ್ನು ಪಕ್ಷಕ್ಕೆ ಸ್ವಾಗತಿಸಬೇಕೆಂಬ ಸಲಹೆ ಬಂದಿತು. ಈ ಚರ್ಚೆಯ ವೇಳೆಯಲ್ಲಿ ಇಂತಹ ಪಕ್ಷಾಂತರವನ್ನು ಉತ್ತೇಜಿಸುವವರ ನೈತಿಕ ಸಿಂಧುತ್ವವನ್ನು ಎಸ್.ಎಂ.ಅವರು ಪ್ರಶ್ನಿಸಿದ್ದು ನನಗಿನ್ನೂ ಚೆನ್ನಾಗಿ ನೆನಪಿದೆ. ಕಾಂಗ್ರೆಸ್ ಅನೇಕ ತಪ್ಪು ಕೆಲಸಗಳನ್ನು ಮಾಡಿದೆ ಮತ್ತು ನಿಸ್ಸಂಶಯವಾಗಿಯೂ ಪಕ್ಷಾಂತರಿಗಳನ್ನು ಅದು ಪ್ರೋತ್ಸಾಹಿಸಿದೆ ಮತ್ತು ಹಾಗಾಗಿ ಅದನ್ನು ಅಧಿಕಾರದಿಂದ ಹೊರಗಟ್ಟುವುದು ಅತ್ಯಗತ್ಯ ಎಂಬುದನ್ನು ಒಪ್ಪಿಕೊಳ್ಳುತ್ತಲೇ ತಮ್ಮ ಪಕ್ಷವು ಪಕ್ಷಾತರವನ್ನು ಪ್ರೋತ್ಸಾಹಿಸುವುದು ಎಷ್ಟರಮಟ್ಟಿಗೆ ಸರಿ ಎಂದು ಅವರು ಪ್ರಶ್ನಿಸಿದ್ದರು. ಆದರೆ ಪ್ರತಿಪಕ್ಷಗಳು ನೈತಿಕತೆಗಿಂತ ಹೆಚ್ಚಾಗಿ ವಾಸ್ತವಿಕತೆಗೆ ಹೆಚ್ಚು ಆದ್ಯತೆ ನೀಡಿದವು. ಜನತಾ ಪಾರ್ಟಿಯ ಕಾರ್ಯಕಾರಿಣಿ ಸಭೆಯಲ್ಲೂ ಇದೇ ಪ್ರಶ್ನೆಗಳು ಎದುರಾಗಿದ್ದವು. ಆದರೆ ನೈತಿಕತೆಯ ಮೇಲೆ ಪ್ರವಚನಗಳನ್ನು ನೀಡುವುದರಲ್ಲಿ ಹೆಸರಾಗಿದ್ದ, ಅಂತಹ ಕಾಂಗ್ರೆಸ್ ಸಂಸದರನ್ನು ಜನತಾ ಪಕ್ಷದೊಳಕ್ಕೆ ಸೇರಿಸಿಕೊಳ್ಳುವುದಕ್ಕೆ ವಿರುದ್ಧವಾಗಿದ್ದ ಮತ್ತು ತುರ್ತು ಪರಿಸ್ಥಿತಿಯನ್ನು ೧೯೭೭ರ ಚುನಾವಣೆಯ ನಂತರದಲ್ಲಷ್ಟೇ ವಿರೋಧಿಸಿದ್ದ ಮುರಾರ್ಜಿ ಭಾಯಿಯವರು ಗುಜರಾತಿನಲ್ಲಿ ಎರಡು ಅಥವಾ ಮೂರು ಬಾರಿ ಪಕ್ಷಾಂತರಗೊಂಡ ಶಾಸಕರ ನೆರವಿನಿಂದ ಸರ್ಕಾರ ರಚಿಸುವುದಕ್ಕೆ ಒಪ್ಪಿಗೆ ನೀಡಿದ್ದರು.

ಮುಂದೆ ೧೯೭೮ರಲ್ಲಿ ಸಮಸ್ಯೆ ಮಹಾರಾಷ್ಟ್ರದಲ್ಲಿ ಉದ್ಭವಿಸಿತು. ತುರ್ತು ಪರಿಸ್ಥಿತಿ ಹೇರಿಕೆಗೆ ಹೊಣೆ ಹೊತ್ತ ಕಾಂಗ್ರೆಸ್ ಪಕ್ಷವನ್ನು ಅಧಿಕಾರದಿಂದ ಕಿತ್ತೆಸೆಯಲು ಶರದ್ ಪವಾರ್ ಅವರನ್ನು ಮುಖ್ಯಮಂತ್ರಿಯಾಗಿ ನೇಮಿಸಲಾಯಿತು. ಇಲ್ಲೂ ಕೂಡಾ ನೈತಿಕತೆಗಿಂತ ವ್ಯವಹಾರಿಕವಾದ ನಿಲವು ಮತ್ತು ಕಾರ್ಯತಂತ್ರಗಳೇ ಮುಖ್ಯವಾದವು. ಆದರೆ ಎಸ್.ಎಂ.ಜೋಶಿ ಮತ್ತು ಜಯಪ್ರಕಾಶ್‌ಜಿ ಅವರು ಇದನ್ನು ಇಷ್ಟಪಡಲಿಲ್ಲ. ಶ್ರೀಮತಿ ಇಂದಿರಾಗಾಂಧಿ ಮತ್ತು ಮುರಾರ್ಜಿಭಾಯಿ ಅವರು ಸಂಸತ್ತಿನಲ್ಲಿ ಪಕ್ಷಾಂತರ ಮಸೂದೆಯನ್ನು ಮಂಡಿಸಿದ್ದಾರೆಂಬುದು ಒಂದು ವಾಸ್ತವ ಸಂಗತಿ. ಆದರೆ ಅದು ಕೂಡಾ ದುರುದ್ದೇಶದಿಂದಲೇ ಕೂಡಿತ್ತು. ಚುನಾವಣಾ ಪ್ರಣಾಳಿಕೆಯಲ್ಲಿ ನೀಡಲಾಗಿದ್ದ ಆಶ್ವಾಸನೆಗಳಿಗೆ ವ್ಯತಿರಿಕ್ತವಾಗಿದ್ದ ಮತ್ತು ಸರ್ಕಾರದ ನ್ಯಾಯಬಾಹಿರ ಪ್ರಸ್ತಾಪಗಳನ್ನು ವಿರೋಧಿಸುವ ಸಂಸತ್ ಸದಸ್ಯರ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಉದ್ದೇಶದಿಂದ ಅವರು ಈ ಮಸೂದೆಯನ್ನು ತಂದಿದ್ದರು. ಜಯಪ್ರಕಾಶ್ ನಾರಾಯಣ್ ಅವರು ತಮ್ಮ 'ಏಕಮೇವ ಆಶಾ' ಶೀರ್ಷಿಕೆಯ ಲೇಖನವೊಂದರಲ್ಲಿ "ಈ ವಿಧಿಯನ್ನು ಬಲವಾಗಿ ವಿರೋಧಿಸಿದ್ದು. ಈ ವಿಧಿಯು ಜನತಂತ್ರ ವಿರೋಧಿ ಮತ್ತು ಸರ್ವಾಧಿಕಾರದ ಸಂಕೇತವಾಗಿದೆ" ಎಂದು ಹೇಳಿದ್ದರು. ಹಾಗಿದ್ದರೆ

ನೈತಿಕ ಮೌಲ್ಯಗಳನ್ನು ಸ್ತುತಿಸುವ ಮತ್ತು ಜನತಾಂತ್ರಿಕ ಸಂಪ್ರದಾಯಗಳನ್ನು ಹಾಡಿ ಹೊಗಳುವ ಇಂತಹ ಮಸೂದೆ ಇಂದಿರಾ-ಗಾಂಧಿಜಿ ಮತ್ತು ಮೊರಾರ್ಜಿ ಭಾಯಿಯವರಿಗೆ ಏಕೆ ಬೇಕಾಯಿತು? ಅವರಿಗೆ ತಮ್ಮ ಮಾತನ್ನು ಚಾಚು ತಪ್ಪದೆ ಪಾಲಿಸುವ ಗುಲಾಮರಂತಹ ಸಂಸತ್ ಸದಸ್ಯರ ಒಂದು ಪಡೆ ಬೇಕಾಗಿತ್ತು.

ನೈತಿಕ ಮೌಲ್ಯಗಳಿಗೆ ಸಂಬಂಧಿಸಿದ ಪ್ರಶ್ನೆಗಳಲ್ಲಿ ಇನ್ನಿತರ ಅಂಶಗಳು ಇವೆ. ಹಾಗಿದ್ದರೆ ಸಾರ್ವಜನಿಕ ಜೀವನದ ನೈತಿಕತೆ ಖಾಸಗಿ ನೈತಿಕ ಮೌಲ್ಯಕ್ಕಿಂತ ಭಿನ್ನಾವಾಗಿದೆಯೇ? ಸಾರ್ವಜನಿಕ ಬದುಕು ಖಾಸಗಿ ಬದುಕಿಗಿಂತ ಪ್ರತ್ಯೇಕವಾದದ್ದೇ? ಅನೇಕ ಮಂದಿ ಸಾರ್ವಜನಿಕ ಜೀವನವು ಖಾಸಗಿ ಜೀವನಕ್ಕಿಂತ ಬೇರೆಯಾಗಿದೆ ಎಂದು ಪರಿಗಣಿಸುತ್ತಾರೆ. ಆದರೆ ಎಸ್.ಎಂ. ಅವರ ಮಟ್ಟಿಗೆ ಅದು ಹಾಗಿರಲಿಲ್ಲ. ಆದರೆ ತಮ್ಮ ಸ್ವಂತದ ಜೀವನದಲ್ಲಿ ಅವರು ಅನುಸರಿಸುತ್ತಿದ್ದ ರೀತಿನೀತಿಗಳನ್ನು ಇತರರು ಕಟ್ಟುನಿಟ್ಟಾಗಿ ಅನುಸರಿಸಬೇಕೆಂದು ತಮ್ಮ ಸುತ್ತ ಮುತ್ತ ಇದ್ದ ಜನರಿಗೆ ಎಂದೂ ಬಲವಂತಪಡಿಸುತ್ತಿರಲಿಲ್ಲ.

ಆದರೆ ಇಂತಹ ಪ್ರವೃತ್ತಿ ಸಹನಾ ಶಕ್ತಿಯ ದ್ಯೋತಕವೇ ಅಥವಾ ಒಂದು ದೌರ್ಬಲ್ಯವೇ? ಎಂಬುದೊಂದು ಪ್ರಶ್ನೆ ಆಗಾಗ ನನ್ನ ಮನಸ್ಸಿನಲ್ಲಿ ತಾಕಲಾಟ ಉಂಟುಮಾಡುತ್ತಿತು. ಇತರರ ಸೇವೆ ಮಾಡುವುದು ಮತ್ತು ಸಹಾಯವಾಗುವುದು ಅವರ ಸ್ವಭಾವದಲ್ಲೇ ಸೇರಿ ಹೋಗಿತ್ತು. ಆದರೆ ನಾವು ಎಷ್ಟು ದೂರ ಹೋಗಬೇಕು? ಸಾರ್ವಜನಿಕ ಹಿತಾಸಕ್ತಿಗಳಲ್ಲಿ ಈ ರೀತಿ ಕೆಲಸ ಮಾಡುವುದು ಅತ್ಯಗತ್ಯ ಎಂಬುದನ್ನು ನಾವು ನಂಬಬೇಕೆ? ಈ ಎಲ್ಲ ಪ್ರಶ್ನೆಗಳು ಅತ್ಯಂತ ಸಂಕೀರ್ಣವಾದವು ಮತ್ತು ದಿಗಿಲುಗೊಳಿಸುವಂತಹುದು. ಇಂತಹ ಪ್ರಶ್ನೆಗಳು ಎಸ್.ಎಂ.ರವರ ಮನಸ್ಸಿನಲ್ಲೂ ಹೊಯ್ದಾಟವನ್ನು ಎಬ್ಬಿಸಿರಲೇಬೇಕು. ಆದರೆ ಒಂದು ಮಾತಂತೂ ನಿಜ. ಅವರ ಯಾವ ಕಾರ್ಯವು ಸ್ವಹಿತಾಸಕ್ತಿಯಿಂದ ಎಂದೂ ಪ್ರೇರಿತವಾಗಿರಲಿಲ್ಲ ಎಂಬುದು ವಿವಾದತೀತ ಸಂಗತಿಯಾಗಿದೆ. ಅವರ ಎಲ್ಲವನ್ನೂ ಸಾರ್ವಜನಿಕರ ಹಿತಸಾಧನೆಗಾಗಿಯೇ ಮಾಡಿದರು. ಬೇರೆ ಬೇರೆ ಜನ ಸಮುದಾಯವನ್ನು ಒಂದುಗೂಡಿಸುವ ಅವರ ಕಾರ್ಯತಂತ್ರ ಇದೇ ಆಗಿತ್ತು ಎಂಬುದನ್ನು ಹೇಳದೆ ಹೋದರೆ ನ್ಯಾಯ ಒದಗಿಸದಂತಾಗದು.

ತಮ್ಮ ಜೀವನದುದ್ದಕ್ಕೂ ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳನ್ನು ವಿನಿಯೋಗಿಸಿ ಎಸ್.ಎಂ. ಅವರು ಹೋರಾಟ ನಡೆಸಿದ ಮೌಲ್ಯಗಳು ಮತ್ತು ಸಿದ್ಧಾಂತಗಳು ಭಾರತೀಯ ಪಾಲಿಗೆ ಶಾಶ್ವತ ಮಹತ್ವದ್ದಾಗಿದೆ. ಅವರಿಗೆ ಜನತಂತ್ರದಲ್ಲಿ, ಜಾತ್ಯಾತೀತ ರಾಷ್ಟ್ರದಲ್ಲಿ ಸಾಮಾಜಿಕ ಸಮಾನತೆಯಲ್ಲಿ, ಆರ್ಥಿಕ ನ್ಯಾಯ ಮತ್ತಿತರ ತತ್ವಗಳಲ್ಲಿ ಅಚಲವಾದ ನಿಷ್ಠೆ ಇದ್ದಿತು. ಅವರು ತಮ್ಮ ಬೌದ್ಧಿಕ ನೆಲೆಗಿಂತಲೂ ಹೆಚ್ಚಾಗಿ ಹೃದಯದ ಸಂವೇದನೆಗಳಿಗೆ-ಆತ್ಮಸಾಕ್ಷಿಗೆ ಅನುಗುಣವಾಗಿ ವರ್ತಿಸುತ್ತಿದ್ದರು. ತರ್ಕಬದ್ಧವಾಗಿದೆ ಎಂಬ ಕಾರಣಕ್ಕಾಗಿ ಅವರು ಯಾವ

ವಿಚಾರವನ್ನು ಸ್ವೀಕರಿಸುತ್ತಿರಲಿಲ್ಲ. ಅವರ ಆತ್ಮಸಾಕ್ಷಿಗೆ ಒಪ್ಪಿದ ವಿಚಾರಗಳನ್ನಷ್ಟೇ ಅವರು ಗುರುತಿಸುತ್ತಿದ್ದರು. ಅಧಿಕಾರದ ಆಸೆಯಂತೂ ಅವರಿಗೆ ಇರಲೇ ಇಲ್ಲ. ಅದೇ ರೀತಿ ಸಾಧನ-ಸಂಪತ್ತುಗಳು ಮತ್ತು ಐಶ್ವರ್ಯ ಎಂದೂ ಅವರನ್ನು ವಿಚಲಿತಗೊಳಿಸಿದ್ದಿಲ್ಲ. ಆದರೆ ಮಾನವ ಸಹಜ ಸಂವೇದನೆಗಳಿಗೆ ಸ್ಪಂದಿಸದ ಅಥವಾ ಮಾನವೀಯ ಅಭಿವ್ಯಕ್ತಿಗಳ ಪ್ರಭಾವಕ್ಕೆ ಒಳಗಾದ ಓರ್ವ ಸ್ಥಿತಪ್ರಜ್ಞರೇನೂ ಆಗಿರಲಿಲ್ಲ. ಅವರಲ್ಲಿ ಸ್ವಾತ್ವಿಕ ಅಹಂಕಾರವಂತೂ ಇದ್ದಿತು. ಅದೇ ವೇಳೆಗೆ ಅವರು ತಮ್ಮದ್ದೇ ಆದ ಒಲವು ನಿಲುವುಗಳನ್ನು ಪ್ರಕಟಿಸುತ್ತಿದ್ದರೂ ಉಂಟು. ಆದರೆ ಇದೆಲ್ಲಕ್ಕಿಂತ ಹೆಚ್ಚಾಗಿ ಅವರು ಓರ್ವ ಸಮರ್ಪಣಾ ಮನೋಭಾವದ ಮಹಾನ್ ಚೇತನವಾಗಿದ್ದರು ಎಂಬುದನ್ನು ನಾವು ಮರೆಯಬಾರದು. ಅವರು ಅತಿಮಾನುಷ ಗುಣದವರೂ ಆಗಿರಲಿಲ್ಲ, ಸ್ವಾತಿಕರಾಗಿದ್ದರು. ಓರ್ವ ದೈವಾಂಶ ಆಗಿರಲಿಲ್ಲ. ರಾಕ್ಷಸ ಸದೃಶರೂ ಆಗಿರಲಿಲ್ಲ. ಅವರು ನೂರಕ್ಕೆ ನೂರು ಮನುಷ್ಯರಾಗಿದ್ದರು.

ಅತಿ ಚಿಕ್ಕವಯಸ್ಸಿನಲ್ಲೇ ಎಸ್.ಎಂ. ಜೋಶಿಯವರ ಸ್ಫೂರ್ತಿದಾಯಕ ಒಡನಾಟ ಮತ್ತು ಮಾರ್ಗದರ್ಶನ ನಮಗೆ ದೊರೆತಿತ್ತು. ನನ್ನನ್ನು ರಾಜಕಾರಣಕ್ಕೆ ತಂದವರೂ ಅವರೇ. ಸಾರ್ವಜನಿಕ ಕ್ಷೇತ್ರದ ಪ್ರತಿಯೊಂದು ರಂಗದಲ್ಲೂ ಅವರು ನನ್ನನ್ನು ತಾಯ್ತನದ ಮಮತೆಯಿಂದ ಕೈಹಿಡಿದು ನಡೆಸಿದರು. ಎಸ್.ಎಂ.ಜೋಶಿಯವರು ನನ್ನ ಪ್ರಥಮ ರಾಜಕೀಯ ಗುರು ಎಂದು ಹೆಮ್ಮೆಯಿಂದ ಹೇಳಬಯಸುತ್ತೇನೆ.

ತಾರಾಬಾಯಿಯವರು ನನ್ನ ಮೇಲೆ ತಾಯ್ತನದ ಪ್ರೀತಿಯನ್ನು ಹರಿಸಿದರು. ಆರಂಭದಿಂದಲೇ ನಮಗೆ ಪರಸ್ಪರದಲ್ಲಿ ಅತ್ಯಂತ ಗೌರವ ಆದರಗಳಿದ್ದವು. ಅವರ ಎದುರಿನಲ್ಲಿ ಯಾರೇ ಆದರೂ ನನ್ನ ವಿರುದ್ಧ ತುಟಿಪಿಟಕ್ಕೆನ್ನುವ ಧೈರ್ಯ ತೋರಿಸುತ್ತಿರಲಿಲ್ಲ. ತಾರಾಜಿ ಅವರು ಎಸ್.ಎಂ. ಅವರ ಅನುರೂಪದ ಸತಿಯಾಗಿದ್ದರು. ಅವರು ಮುಕ್ತ ಮನ್ನಸಿನ ಮಹಿಳೆಯಾಗಿದ್ದರು. ಅವರ ಬರವಣಿಗೆ ಅತ್ಯಂತ ಆಕರ್ಷಕವಾಗಿತ್ತು. ಆದರೆ ಆ ಕಲೆಯನ್ನು ಅವರಿಗೆ ಬಳಸಿಕೊಳ್ಳಲು ಸಾಧ್ಯವಾಗಲಿಲ್ಲ.

ಎಸ್.ಎಂ.ಅವರು ತಮ್ಮ ಜೀವನದುದ್ದಕ್ಕೂ ಅತ್ಯಂತ ಯಶಸ್ವಿ ವ್ಯಕ್ತಿಯಾಗಿದ್ದರು. ಅವರು ಯಾವಾಗಲೂ ಹರ್ಷಚಿತ್ತರಾಗಿರುತ್ತಿದ್ದರು. ಮಾನಸಿಕವಾಗಿ ಯಾವುದೇ ಕಠಿಣತೆಯನ್ನು ಎಂತಹ ವ್ಯಾಧಿಯನ್ನಾದರೂ ಎದುರಿಸಲು ಅವರು ಸಮರ್ಥರಾಗಿದ್ದರು. ತಮ್ಮ ಕೊನೆಯ ದಿನಗಳಲ್ಲಿ ಎಸ್.ಎಂ.ಅವರು ಯಾವ ಔಷಧಿಯಿಂದಲೂ ಗುಣಪಡಿಸಲಾಗದ ಕ್ಯಾನ್ಸರ್ ವ್ಯಾಧಿಯಿಂದ ತೀವ್ರ ಯಾತನೆ ಅನುಭವಿಸಿದರು. ಅದೇ ಸಂದರ್ಭದಲ್ಲಿ ಅವರ ಬಾಳಸಂಗಾತಿ ಕೊನೆ ಉಸಿರೆಳೆದರು. ತಾರಾಬಾಯಿಯವರ ನಿಧನ ಅವರ ಜೀವನದಲ್ಲಿ ತುಂಬಿಸಲಾಗದ ಶೂನ್ಯವನ್ನು ಸೃಷ್ಟಿಸಿತು. ತಾವೇ ಸ್ವತಃ ಈ ಸಂಗತಿಯನ್ನು ಅನೇಕ ಸಲ ಹೇಳುವುದಿತ್ತು. ೧೯೮೭ರ ಸೆಪ್ಟೆಂಬರ್ ೧೨ ರಂದು ಸೊಹೇಲಳೊಂದಿಗೆ ಅನಿರುದ್ಧನ ವಿವಾಹ ನಡೆದಾಗ

ಆ ಮಂಗಳ ಸಮಾರಂಭಕ್ಕೆ ಎಸ್.ಎಂ.ಜೋಶಿಯವರು ತಾನಿದ್ದ ಆಸ್ಪತ್ರೆಯ ವೈದ್ಯರಿಂದ ವಿಶೇಷ ಅನುಮತಿ ಪಡೆದು ಬಂದಿದ್ದರು. ಮದುವೆಯನ್ನು ನೋಡಲು ಬಂದ ಜೋಶಿಯವರು ಮೊದಲಿಗೆ ತಾವು ಅನಂತರದಲ್ಲಿ ಸೊಹೇಲಳ ತಂದೆ ಮತ್ತು ನಾನು ಸಹಿ ಹಾಕಿದೆವು. ಆಗ ಎಸ್.ಎಂ. ಜೋಶಿಯವರು ತಾರಾ ಇಂದು ಇರುತ್ತಿದ್ದರೆ ಅದೆಷ್ಟು ಖುಷಿ ಪಡುತ್ತಿದ್ದಳು. ಅವಳಿಂದು ನಮ್ಮೊಂದಿಗೆ ಇರುತ್ತಿದ್ದರೆ ಅದು ಹೇಗಿರುತ್ತಿತ್ತೋ ಎಂಬ ಮಾತುಗಳು ಅವರನ್ನು ಅತ್ಯಂತ ಭಾವಪರವಶರನ್ನಾಗಿ ಮಾಡಿತ್ತು.

ಒಂದು ಸಲ ಎಸ್.ಎಂ. ಅವರು ವೈದ್ಯಕೀಯ ಚಿಕಿತ್ಸೆಗಾಗಿ ಟಾಟಾ ಆಸ್ಪತ್ರೆಗೆ ಹೋದರು. ರಾತ್ರಿ ವೇಳೆಯಲ್ಲಿ ಅವರನ್ನು ನೋಡಿಕೊಳ್ಳುತ್ತಿದ್ದ ನರ್ಸ್ ಏಕಾಏಕಿ ಎಚ್ಚರಗೊಂಡು ಭಯದಿಂದ ಬೊಬ್ಬಿಟ್ಟಳು. ಯಾರಲ್ಲಿ, ಯಾರಲ್ಲಿ? ಎಂದು ಆಕೆ ಚೀರುತ್ತಿದ್ದಳು. ಆಕೆಯ ಚೀರಾಟವನ್ನು ಕೇಳು ಕೆಲಸದ ಮೇಲಿದ್ದ ವೈದ್ಯರು ಮತ್ತು ಇತರ ಸಿಬ್ಬಂದಿಯವರು ಅಲ್ಲಿಗೆ ಧಾವಿಸಿ ಬಂದು 'ಯಾರಿದ್ದಾರೆ, ಯಾರಿದ್ದಾರೆ'? ಎಂದು ವಿಚಾರಿಸಿದರು. ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡ ಎಸ್.ಎಂ.ಅವರು ಹಾಸ್ಯದ ಧಾಟಿಯಲ್ಲಿ 'ಏನೂ ಆಗಿಲ್ಲ, ತಾರಾ ನನ್ನ ಕನಸಿನಲ್ಲಿ ಬಂದಳು. ನಾನು ನಿಮಗಾಗಿ ಅಲ್ಲಿ ಕಾದಿದ್ದೇನೆ ಎಂದಳು - ನೀವು ಇಲ್ಲಿ ಏನು ಮಾಡುತ್ತಿದ್ದೀರಿ ಎಂದು ಕೇಳಿದಳು. ನಾನೀಗ ಹೋಗಿ ಅವಳನ್ನು ಸೇರಬೇಕು' ಎಂದು ಮಾತು ಮುಗಿಸಿದರು.

ಸಾವನ್ನು ಹೇಗೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೋ ಅದೇ ರೀತಿ ಪ್ರತಿ ಮನುಷ್ಯನಿಗೂ ಅದು ಅನಿವಾರ್ಯವೂ ಆಗಿದೆ. ಆದರೆ ದೇಶಕ್ಕಾಗಿ, ಸಮಾಜಕ್ಕಾಗಿ ತನ್ನಲ್ಲಿದ್ದುದ್ದೆಲ್ಲವನ್ನೂ, ಪರಿತ್ಯಜಿಸಿದ, ಅದಕ್ಕಿಂತಲೂ ಮಿಗಿಲಾಗಿ ಬದುಕಿನುದ್ದಕ್ಕೂ ನಿಷ್ಕಳಂಕ ಚಾರಿತ್ರ್ಯವನ್ನು ಕಾಯ್ದುಕೊಂಡ ಎಸ್.ಎಂ.ಜೋಶಿ ಅವರಂತಹ ವ್ಯಕ್ತಿಗಳು ತಮ್ಮ ಜೀವಿತದ ಕೊನೆಯ ವರ್ಷಗಳಲ್ಲಿ ಇಂತಹ ದಾರುಣವಾದ ಯಾತನೆಯನ್ನು ಅನುಭವಿಸಬೇಕಾಗಿ ಬಂದದ್ದು ನನಗೆ ಪದೇ ಪದೇ ನೋವನ್ನು ಉಂಟು ಮಾಡುತ್ತಿರುವ ಸಂಗತಿಯಾಗಿದೆ.

ಜೋಶಿಯವರ ಸ್ವಾರ್ಥರಹಿತ ಮಹೋನ್ನತ ಜೀವನವು ಎಂದೆಂದಿಗೂ ನಮ್ಮ ಯುವ ಸಮುದಾಯಕ್ಕೆ ಮಾರ್ಗದರ್ಶಿಯಾಗಿ ನಿಲ್ಲುವುದೆಂದು ನಾನು ದೃಢನಾಗಿ ನಂಬಿದ್ದೇನೆ.

# ಅಧ್ಯಾಯ - 7

## ಎಸ್.ಎಂ.ಅಣ್ಣ-ನೇತಾರಗಿಂತಲೂ ಹೆಚ್ಚಿನವರು

* ಡಾ.ಬಾಪು ಕಲ್ದಾತೆ

ನಾಯಕರು ಯಾವಾಗಲೂ ಜನರ ಭಾವನೆಗಳನ್ನು ಮತ್ತು ಆಶೋತ್ತರಗಳನ್ನು ಗ್ರಹಿಸುವ ಸಾಮರ್ಥ್ಯ ಉಳ್ಳವರಾಗಿರಬೇಕು. ಇಂತಹ ನೇತಾರರಿಗೆ ಖಾಸಗಿ ಬದುಕು, ಉದ್ದೇಶಗಳು ಇರುವುದು ಸಾಧ್ಯವೇ ಇಲ್ಲ. ಅಂತಹ ನೇತಾರನು 'ಜನರನ್ನು ತಮ್ಮ ಬೆಂಬಲಿಗರು ಎನ್ನುವುದಕ್ಕಿಂತ ಹೆಚ್ಚಾಗಿ ತಮಗೆ ಸೇರಿದವರು' ಎಂಬ ಭಾವನೆಯಿಂದ ವ್ಯವಹರಿಸಬೇಕಾಗುತ್ತದೆ. ಹೀಗೆ ನಾಯಕರೆನಿಸಿದವರು ಜನರ ಮನಸ್ಸು ಮತ್ತು ಹೃದಯವನ್ನು ಪ್ರವೇಶಿಸುವ ಕಲೆಯನ್ನು ಕರಗತ ಮಾಡಿಕೊಂಡಿರಬೇಕು. ಈ ಅರ್ಥದಲ್ಲಿ ಎಸ್.ಎಂ.ಜೋಶಿಯವರು ಓರ್ವ ಪ್ರಾಶ್ನಾತೀತ ನಾಯಕರಾಗಿದ್ದರು, ಅವರು ಯುವಕರು, ಕಾರ್ಮಿಕ ಮತ್ತು ಮಹಾರಾಷ್ಟ್ರದ ವಿಭಾನ್ನ ಭಾಗಗಳ ಜನರ ಮಧ್ಯೆ ಅತ್ಯಂತ ಜನಪ್ರಿಯರಾಗಿದ್ದರು.

ಎಸ್.ಎಂ.ಜೋಶಿಯವರು ತೀರಾ ಬಡತನದಿಂದಲೇ ತಮ್ಮ ಬದುಕನ್ನು ಆಂರಭಿಸಿದವರು. ಚಿಕ್ಕ ಮಗುವಾಗಿದ್ದಾಗ ಅವರಿಗೆ ದೀಪಾವಳಿ ಹಬ್ಬದ ದಿನಗಳಲ್ಲಿ ಕೂಡಾ ಶ್ರೀಮಂತ ದರ್ಜೆಯ ಊಟ-ತಿಂಡಿಗಳು ಸಿಗುತ್ತಿರಲಿಲ್ಲ. ಎಳವೆಯಲ್ಲಿನ ಈ ಅನುಭವಗಳೊಂದಿಗೆ ಜೀವನದ ಕಠಿಣ ಪಾಠಗಳನ್ನು ಅವರು ಕಲಿತರು. ಬೆಂಬಲಿಗರ ಪಾಲಿಗೆ ಅವರು ಎಸ್.ಎಂ. ಆಗಿದ್ದರು. ಈ ಮಂದಿ ಅವರ ಮುಂದೆ ತಮ್ಮ ಹೃದಯಗಳನ್ನು ತೆರೆದಿಡುತ್ತಿದ್ದರು. ಅವರೊಂದಿಗೆ ಬಿಚ್ಚು ಮನಸ್ಸಿನಿಂದ ಮಾತನಾಡುತ್ತಿದ್ದರು. ಅವರು ಎಲ್ಲೇ ಇದ್ದರೂ ನಿರ್ಭಯರಾಗಿರುತ್ತಿದ್ದರು, ನಿಶ್ಚಿಂತರಾಗಿರುತ್ತಿದ್ದರು. ಜನರೊಂದಿಗೆ ಅವರು ವ್ಯವಹರಿಸುವ ರೀತಿ ತುಂಬಾ ಸ್ನೇಹಪೂರ್ಣವಾಗಿರುತ್ತಿತ್ತು, ಆಪ್ತವಾಗಿರುತ್ತಿತ್ತು. ಇದು ಅವರಿಗೆ ಇತರರ ಸಮಸ್ಯೆಗಳನ್ನು ಮತ್ತು ಕಠಿಣತೆಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಲು ನೆರವಾಗುತ್ತಿತ್ತು. ಅವರ ಧ್ಯೇಯದ ಬಗ್ಗೆ, ಅದರ ತುರ್ತಿನ ಬಗ್ಗೆ, ಅವರ ಪ್ರಾಮಾಣಿಕತೆ ಮನವರಿಕೆಯಾದೊಡನೆ ಅನ್ಯಾಯದ ವಿರುದ್ಧ ಅವರು ಹೋರಾಟಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳುತ್ತಿದ್ದರು.

೧೯೩೦ರ ದಶಕದಲ್ಲಿ ಪುಣೆಯ ಸುಪ್ರಸಿದ್ಧ ಪರ್ವತಿ ದೇವಾಲಯಕ್ಕೆ ಹರಿಜನರಿಗೆ ಪ್ರವೇಶವಕಾಶ ಕಲ್ಪಿಸುವ ಸಲುವಾಗಿ ಸಂಘಟಿಸಿದ್ದ ಸತ್ಯಾಗ್ರಹದಲ್ಲಿ ಭಾಗವಹಿಸುವುದರೊಂದಿಗೆ ಎಸ್.ಎಂ. ಕೋಮುವಾದದ ವಿರುದ್ಧದ ಕಟ್ಟಾ ಹೋರಾಟಗಾರರಾಗಿ ಬೆಳೆದರು. ಆ ದಿನಗಳಿಂದಲೇ ಅವರು ಹೋರಾಟದ ಸ್ಫೂರ್ತಿ

---

* ಡಾ.ಬಾಪು ಕಲ್ದಾತೆಯವರು ಸಂಸತ್ ಸದಸ್ಯರು (ರಾಜ್ಯಸಭಾ)

ಮತ್ತು ಕೆಚ್ಚನ್ನು ರೂಢಿಸಿಕೊಂಡರು. ಯೌವನಾವಸ್ಥೆಯಲ್ಲಿ ನೇತಾಜಿ ಸುಭಾಷ್ ಚಂದ್ರ ಬೋಸರ ನಾಯಕತ್ವದಲ್ಲಿ ಕಾರ್ಯ ನಿರ್ವಹಿಸಿದರು. ಬ್ರಿಟಿಷ್ ಅಧಿಪತ್ಯದ ವಿರುದ್ಧದ ಹೋರಾಟದಲ್ಲಿ ಹಿಂದೂ-ಮುಸ್ಲಿಂ, ಏಕಮತ್ಯವನ್ನು ಪ್ರತಿಪಾದಿಸಿದ ಕಾರಣಕ್ಕಾಗಿ ಒಮ್ಮೆ ಅವರು ಪುಣೆಯಲ್ಲಿ ಹಿಂದೂ ಕೋಮುವಾದಿಗಳ ಹಲ್ಲೆಗೆ ಒಳಗಾದರು. ಜೋಶಿಯವರು ೧೯೪೨ರ ಭೂಗತ ಚಳವಳಿಯಲ್ಲಿ ಸಕ್ರೀಯರಾಗಿದ್ದ ದಿನಗಳಲ್ಲಿ ನಾನು ಅವರನ್ನು ಮೊದಲ ಬಾರಿಗೆ ಭೇಟಿಯಾದೆ. ಇಳಿಬಿಟ್ಟ ಗಡ್ಡ ಮತ್ತು ಫರ್ ಟೋಪಿ ಧರಿಸಿ ಮುಸ್ಲಿಂ ಕಾರ್ಯಕರ್ತರ ಪೋಷಾಕಿನಲ್ಲಿದ್ದ ಜೋಶಿಯವರು ಆ ದಿನಗಳಲ್ಲಿ ಅಖಿಲ ಭಾರತ ಮಟ್ಟದಲ್ಲಿ ಭೂಗತ ಚಟುವಟಿಕೆಗಳನ್ನು ಸಂಘಟಿಸುತ್ತಿದ್ದರು. ಅನಂತರ ರಾಷ್ಟ್ರ ಸೇವಾದಳದ ಪ್ರಮುಖ ಸ್ಥಾಪಕ ಸದಸ್ಯರಾಗಿ ಅವರು ಕಾರ್ಯ ನಿರ್ವಹಿಸಿದರು. ಸೇವಾ ದಳವು ಶಾಂತಿಯುತ, ಜಾತ್ಯಾತೀತ ಯುವ ಸಂಘಟನೆಯಾಗಿದ್ದು ಪ್ರಜಾಸತ್ತಾತ್ಮಕ ಸಮಾಜವಾದ, ಸಮಾನತೆ ಮತ್ತು ಸಾಮಾಜಿಕ ನ್ಯಾಯದಲ್ಲಿ ಅಚಲವಾದ ನಂಬಿಕೆಯನ್ನು ಇರಿಸಿಕೊಂಡ ಚಳವಳಿಯಾಗಿ ಬೆಳೆದಿತ್ತು.

ಎಸ್.ಎಂ. ಜೋಶಿಯವರು ಓರ್ವ ಜನಪ್ರಿಯ ಕಾರ್ಮಿಕ ನೇತರರಾಗಿದ್ದರು. ಅವರು ಅನೇಕ ಮುಷ್ಕರಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅನೇಕ ಉಪವಾಸ ಸತ್ಯಾಗ್ರಹಗಳನ್ನು ಕೈಗೊಂಡರು. ಸೆರೆಮನೆವಾಸವನ್ನು ಅನುಭವಿಸಿದರು. ಆದರೂ ನಿರ್ಭಯವಾಗಿ ದೇಶದ ಉದ್ದಗಲಗಳಲ್ಲಿ ಸಾವಿರಾರು ಮಂದಿ ಕಾರ್ಮಿಕರನ್ನು ಸಂಘಟಿಸಿ ಅವರ ಮಾರ್ಗದರ್ಶಕರೆನಿಸಿದರು. ಅವರು ಅಪರೂಪದ ಓರ್ವ ಕಾರ್ಮಿಕ ನಾಯಕರಾಗಿದ್ದರು. "ನೀವೆಲ್ಲರೂ ಉತ್ಪಾದನೆಯನ್ನು ಹೆಚ್ಚಿಸಲು ಹೆಚ್ಚು ಕೆಲಸ ಮಾಡಬೇಕು. ಕೆಲವೊಮ್ಮೆ ಮುಷ್ಕರಗಳು ಅನಿವಾರ್ಯವಾಗಬಹುದು. ಆದರೆ ಅವು ರಾಷ್ಟ್ರೀಯ ಸಂಪತ್ತನ್ನು ಸಂವರ್ಧಿಸುವ ಧ್ಯೇಯಕ್ಕೆ ಎಂದೂ ಮಾರಕವಾಗಿ ಪರಿಣಮಿಸಬಾರದು. ಅದೇ ರೀತಿಯಲ್ಲಿ ಅಭ್ಯುದಯ, ಶಾಂತಿ ಮತ್ತು ಭದ್ರತೆಯ ಧ್ಯೇಯಗಳಿಗೂ ಅದರಿಂದ ಧಕ್ಕೆ ಉಂಟಾಗಬಾರದು" ಎಂದು ಪ್ರತಿಪಾದಿಸಿದ ಕಾರ್ಮಿಕ ನೇತಾರರು ಅವರಾಗಿದ್ದರು.

ಸ್ವಾತಂತ್ರ್ಯಾನಂತರದಲ್ಲಿ ರಾಷ್ಟ್ರ ಸೇವಾದಳದ ಚಟುವಟಿಕೆಗಳು ಪೂರ್ಣಪ್ರಮಾಣದಲ್ಲಿ ಆರಂಭವಾದವು. ವಿವಿಧ ಚಟುವಟಿಕೆಗಳ ಮೂಲಕ ಮಕ್ಕಳನ್ನು, ಯುವಕರನ್ನು ಒಳಗೊಂಡಂತೆ ಎಲ್ಲ ವಯೋಮಾನದವರನ್ನೂ ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿಸುವುದು ಅದರ ಪ್ರಧಾನ ಧ್ಯೇಯವಾಗಿತ್ತು. ಸೇವಾಪಥಕ್ (ಗ್ರಾಮೀಣ ಪುನರ್ ನಿರ್ಮಾಣ ಕಾರ್ಯಕ್ರಮಗಳಿಗಾಗಿ ಗ್ರಾಮಾಂತರ ಪ್ರದೇಶಗಳಿಗೆ ಹೋಗುವ ಯುವಕರ ದಳಗಳು) ಗಳು, ಕಲಾ ಪಥಕ್‌ಗಳು (ಗ್ರಾಮಾಂತರ ಪ್ರದೇಶದ ಜನಸಮುದಾಯಕ್ಕೆ ಮನರಂಜನೆಯ ಮೂಲಕ ಮತ್ತು ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳ

ಮೂಲಕ ಹೊಸ ವಿಚಾರಧಾರೆಗಳನ್ನು ಪ್ರಚುರಪಡಿಸುವ ಕಲಾ, ಸಂಸ್ಕೃತಿಗಳ ತಂಡಗಳು), ಭೂದಾನ (ಉಳುಮೆದಾರರಿಗೆ ಭೂಮಿಯನ್ನು ವಿತರಿಸುವ ಚಳವಳಿ), ಅಧ್ಯಯನ ಕೇಂದ್ರಗಳು, ಅಂತರಭಾರತಿ (ರಾಷ್ಟ್ರೀಯ ಭಾವೈಕ್ಯ ಸಂವರ್ಧನ ಕಾರ್ಯಕ್ರಮಗಳು) ಇವು ಸೇವಾದಳದ ಪ್ರಮುಖ ಶಾಖೆಗಳಾಗಿದ್ದವು. ಈ ಎಲ್ಲ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಸಾವಿರಾರು ಮಂದಿ ಹುಡುಗರು ಮತ್ತು ಹುಡುಗಿಯರಿಗೆ ಎಸ್.ಎಂ.ಅವರೇ ಸ್ಫೂರ್ತಿಯಾಗಿದ್ದರು. ಸಂಘಟನೆಯ ಎಲ್ಲ ಶಿಬಿರಗಳಲ್ಲಿ, ಅಧ್ಯಯನ ಕೇಂದ್ರಗಳಲ್ಲಿ ಅದೇ ರೀತಿ ಇತರೆಲ್ಲ ಚಟುವಟಿಕೆಗಳಲ್ಲಿ ಜೋಷಿಯುವರು ಸಕ್ರಿಯುವಾಗಿ ಭಾಗವಹಿಸುತ್ತಿದ್ದರು.

ನಿಖರವಾಗಿ ಹೇಳುವುದಾದರೆ ೧೯೫೪ರಲ್ಲಿ ಜಯಪ್ರಕಾಶ್ ನಾರಾಯಣ್ ಅವರು ರಾಷ್ಟ್ರ ಸೇವಾದಳದ ಚಟುವಟಿಕೆ ಆರಂಭಿಸಲು ಬಯಸಿದ್ದರು. ಈ ಅವಧಿಯಲ್ಲಿ ಎಸ್.ಎಂ.ಜೋಶಿಯವರು ಪೂರ್ಣಾವಧಿ ಕಾರ್ಯಕರ್ತನಾಗಿ ಈ ಕಾರ್ಯಭಾರ ಸಂಘಟಿಸಲು ಬಿಹಾರಕ್ಕೆ ಹೋಗುವಂತೆ ನನ್ನನ್ನು ಕೇಳಿಕೊಂಡರು. ಆಗ ಅವರು ನನಗೆ 'ಜಯಪ್ರಕಾಶ್ ನಾರಾಯಣ್ ಅವರೊಂದಿಗೆ ಕೆಲಸ ಮಾಡಿದರೆ ನಿನ್ನ ಜೀವನದ ದಿಗಂತ ವಿಶಾಲಾವಾಗುವುದು. ಮಹಾರಾಷ್ಟ್ರದ ಹೊರಗಡೆ ಏನಿದೆ ಎಂಬ ಅನುಭವವೂ ನಿನಗಾಗುವುದು' ಎಂದು ಹೇಳಿದ್ದರು. ಅವರ ಸಲಹೆಯಂತೆ ನಾನು ಬಿಹಾರದಲ್ಲಿ ಸೊಕೋದೆವ್ರೋರ ಆಶ್ರಮದಲ್ಲಿ ಜಯಪ್ರಕಾಶ್ ನಾರಾಯಣ್‌ಜಿ ಅರರೊಂದಿಗೆ ಕಾರ್ಯನಿರ್ವಹಿಸಿದೆ ಮತ್ತು ಬಹುಶಃ ಅದು ನನ್ನ ಜೀವನದ ಅತ್ಯಂತ ಅವಿಸ್ಮರಣೀಯ ಸಂದರ್ಭವಾಗಿತ್ತು.

ನಾನು ಬಿಹಾರದಲ್ಲಿದ್ದಾಗ ಅಂದರೆ ೧೯೫೫-೫೬ ರಲ್ಲಿ ಸಂಯುಕ್ತ ಮಹಾರಾಷ್ಟ್ರ ಚಳವಳಿ ಗಂಭೀರ ತಿರುವು ಪಡೆದುಕೊಂಡಿತ್ತು. ಆಗ ನಾನು ಮಹಾರಾಷ್ಟ್ರಕ್ಕೆ ಮರಳುವುದು ಅನಿವಾರ್ಯವಾಗಿತ್ತು. ಈ ಚಳವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ನಾನು ಸೆರೆಮನೆವಾಸ ಅನುಭವಿಸ ಬೇಕಾಯಿತು. ಸೆರೆಮನೆಯಿಂದ ಹೊರ ಬಂದ ಮೇಲೆ ಈ ಚಳವಳಿಯಲ್ಲಿ ಎಸ್.ಎಂ. ಜೋಶಿಯವರಿಗೆ ನೆರವಾಗುವುದು ಇನ್ನಷ್ಟು ಅವಶ್ಯಕ ಎನಿಸಿತು. ನಾನು ಅವರ ಆಪ್ತ ಕಾರ್ಯದರ್ಶಿಯಾಗಿ ಬಹಳ ಕಾಲ ಕಾರ್ಯ ನಿರ್ವಹಿಸಿದೆ. ಮತ್ತು ಅವರಿಂದ ಸಂಘಟನಾ ಕಾರ್ಯದ ಅಗಾಧ ಅನುಭವವನ್ನೂ ಸಂಪಾದಿಸಿದೆ. ಎಸ್.ಎಂ. ಜೋಶಿಯವರ ಪ್ರಾಮಾಣಿಕತೆ, ಕಾರ್ಯತತ್ಪರತೆ ಮತ್ತು ಮಾನವೀಯತೆಗಳು ನನಗೆ ಸದಾ ಸ್ಫೂರ್ತಿಯಾಗಿದ್ದವು. ಅವರು ನನ್ನ ವ್ಯಕ್ತಿತ್ವಕ್ಕೆ ಆಧಾರ ನೀಡಿದರು. ಅದಕ್ಕೊಂದು ರೂಪ ನೀಡಿದರು ಮತ್ತು ನಾನೊರ್ವ ಸಾಮಾಜಿಕ ಕಾರ್ಯಕರ್ತನಾಗುವಂತೆ ಮಾಡಿದರು.

ನಾನು ಅವರ ಆಪ್ತ ಕಾರ್ಯದರ್ಶಿಯಾಗಿದ್ದಾಗ ನನ್ನ ಜೀವನದಲ್ಲಿ ಒಂದು ಪ್ರಮುಖ ಘಟನೆ ನಡೆಯಿತು. ಸುಧಾ ಮೈದೇವ್ ಎಂಬ ಹೆಸರಿನ ವಿದ್ಯಾರ್ಥಿನಿ ಪೂನಾ ವಿಶ್ವದ್ಯಾಲಯದಲ್ಲಿ ಎಂ.ಎ.ಕೋರ್ಸ್‌ಗೆ ವ್ಯಾಸಂಗ ನಡೆಸುತ್ತಿದ್ದಳು. ಆಕೆಯೂ ರಾಷ್ಟ್ರ ಸೇವಾದಳದಲ್ಲಿದ್ದಳು. ನಾವು ಮದುವೆಯಾಗಲು ನಿರ್ಧರಿದೆವು. ನಾವು ಬೇರೆ ಬೇರೆ ಜಾತಿಗೆ ಸೇರಿದವರಾಗಿದ್ದು, ನಮ್ಮ ಸಾಮಾಜಿಕ - ಆರ್ಥಿಕ ಹಿನ್ನಲೆ ಭಿನ್ನವಾಗಿದ್ದರಿಂದ ನಮ್ಮಿಬ್ಬರ ಮನೆಯವರೂ ತೀವ್ರ ವಿರೋಧ ವ್ಯಕ್ತಪಡಿಸಿದ್ದರು. ಆ ದಿನಗಳಲ್ಲಿ ಅಂತರಜಾತಿ ವಿವಾಹಗಳು ಅಷ್ಟಾಗಿ ನಡೆಯುತ್ತಿರಲಿಲ್ಲ ಮತ್ತು ಅದಕ್ಕೆ ಜನರ ಬೆಂಬಲವೂ ಇರಲಿಲ್ಲ. ಆಗ ಅಣ್ಣಾ (ನಾವು ಎಸ್.ಎಂ.ಅವರನ್ನು ಪ್ರೀತಿಯಿಂದ ಹಾಗೆ ಕರೆಯುತ್ತಿದ್ದೆವು) ನನ್ನ ತಂದೆಯವರನ್ನು - ಸುಧಾಳ ತಂದೆ ತಾಯಿಯವರನ್ನು ಕಂಡು ಎರಡೂ ಕುಟುಂಬಗಳಲ್ಲಿನ ಆತಂಕ - ದುಗುಡಗಳನ್ನು ತಿಳಿಗೊಳಿಸಿದರು. ಅನಂತರ ೧೯೫೭ರಲ್ಲಿ ನಮ್ಮ ಮದುವೆ ನಡೆಯಿತು. ಆಗ ನಾನು ವೈದ್ಯಕೀಯ ಪದವಿ ಪಡೆದು ಕೆಲಸದಲ್ಲಿದ್ದೆ. ಆದರೆ ಅಂದಿನ ಪರಿಸ್ಥಿತಿಯಿಂದಾಗಿ ನಾನು ವೈದ್ಯಕೀಯ ವೃತ್ತಿಯನ್ನು ಶಾಶ್ವತವಾಗಿ ತೊರೆಯಲು ನಿರ್ಧರಿಸಿದೆ ಮತ್ತು ರಾಷ್ಟ್ರ ಸೇವಾದಳದ ಮೂಲಕ ಸಮಾಜಸೇವೆಯ ವಿಸ್ತೃತ ಕ್ಷೇತ್ರವನ್ನು ಪ್ರವೇವಿಸಿದೆ. ಈ ಎರಡು ನಿರ್ಧಾರಗಳು ಅತ್ಯಂತ ನಿರ್ಣಾಯಕ ಸ್ವರೂಪದಾಗಿದ್ದುವು. ಅಂತಹ ಸಂದರ್ಭದಲ್ಲಿ ಎಸ್.ಎಂ.ಅವರು ನನ್ನ ಜೊತೆಗೆ ನಿಂತರು. ನನ್ನ ವಿವಾಹ ಜೀವನದ ಆರಂಭದ ದಿನಗಳಲ್ಲಿ ನಾವು ಸಂತುಷ್ಟರಾಗಿರುವಂತೆಯೂ ಅವರು ನೋಡಿಕೊಂಡರು.

ಎಸ್.ಎಂ. ಜೋಶಿಯವರು ಸಮಚಿತ್ತದ ವ್ಯಕ್ತಿಯಾಗಿದ್ದರು. ಯಾರ ವಿಷಯದಲ್ಲೂ ಅತೃಪ್ತಿ ಹೊಂದಿದ್ದಾಗಲಿ, ಮುನಿಸಿಕೊಂಡಿದ್ದಾಗಲಿ ಇಲ್ಲವೇ ಇಲ್ಲ. ಯಾವುದೇ ವಿಷಯಗಳನ್ನೂ ತಳ್ಳಿಹಾಕುವ ಬದಲು ಚರ್ಚೆ ಮಾಡುವುದರಲ್ಲಿ ಅವರಿಗೆ ಹೆಚ್ಚಿನ ನಂಬಿಕೆ ಇತ್ತು. ಅವರು ರಾಷ್ಟ್ರ ಸೇವಾದಳದಲ್ಲಿ ಮತ್ತು ಸೋಷಲಿಸ್ಟ್ ಪಾರ್ಟಿಯ ಸಮಾನತೆ ವಿರುದ್ಧದ ರ್‍ಯಾಲಿಗಳಲ್ಲಿ ಸಮಾಜ - ಸುಧಾರೆಯ ಅನೇಕ ಸಮಾವೇಶಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ತಾವು ನಂಬಿಕೊಂಡಿದ್ದ ನೀತಿ ಸಿದ್ಧಾಂತ ಮತ್ತು ವಿಚಾರಗಳನ್ನು ಇತರರಿಗೆ ವಿವರಿಸಿ ಹೇಳುವುದು ಎಂದೂ ಅವರಿಗೆ ಶ್ರಮವಿನಿಸುತ್ತಿರಲಿಲ್ಲ. ದೊಡ್ಡ ಸಭೆಯಾಗಿರಲಿ, ಸಣ್ಣ ಸಭೆಯಾಗಿರಲ್ಲಿ, ಬೇಕಿದ್ದರೆ ಒಬ್ಬನೇ ಒಬ್ಬ ವ್ಯಕ್ತಿ ಅವರ ಮುಂದಿರಲಿ ಅವರಿಗೇನೂ ಅನಿಸುತ್ತಿರಲಿಲ್ಲ.

ಎಂದೂ ನಿಲ್ಲದೇ ಇರುವುದು ಮತ್ತು ನಿರ್ಭಯವಾಗಿ ಇರುವುದು. ಹಾಗೆ ನೋಡಿದರೆ ನಿರ್ಭಯವೇ ಎಸ್.ಎಂ.ಜೋಶಿಯವರ ವ್ಯಕ್ತಿತ್ವದ ಹೆಗ್ಗುರತಾಗಿತ್ತು. ಅವರು ತಮ್ಮ ಪ್ರತಿಸ್ಪರ್ಧಿಗಳೊಂದಿಗೆ, ವಿರೋಧಿಗಳೊಂದಿಗೆ ಮುಕ್ತ ಮನಸ್ಸಿನಿಂದ ಮತ್ತು ಸ್ಪಷ್ಟ ಅಭಿಪ್ರಾಯಗಳಿಂದ ಬೌದ್ಧಿಕ ಸ್ತರದಲ್ಲಿ ಹೋರಾಡುತ್ತಿದ್ದರು. ಅವರು ತೆಳ್ಳನೇಯ ಕೃಶಕಾಯದ

ವ್ಯಕ್ತಿಯಾಗಿದ್ದರು. ಅವರ ವ್ಯಕ್ತಿತ್ವದಲ್ಲಿ ಉಕ್ಕಿನಂತಹ ಕಸುವು, ಅದಮ್ಯವಾದ ಧೈರ್ಯ ಮತ್ತು ದೃಢವಾದ ಸೈದ್ಧಾಂತಿಕ ನಿಷ್ಠೆ-ಬದ್ಧತೆಗಳಿದ್ದವು. ಪಾರದರ್ಶಕ ಗುಣ, ಧ್ಯೇಯ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದಾಗಿ ಎಸ್.ಎಂ.ಅವರು ಅಜಾತಶತ್ರುವಾಗಿದ್ದರು.

ಅವರ ಜೀವನದ ಕೊನೆಯ ಭಾಗದಲ್ಲಿ ಅವರಲ್ಲಿ ಮೂಳೆ ಕ್ಯಾನ್ಸರ್ ಕಾಣಿಸಿಕೊಂಡಿತು. ಈ ಮರಣಾಂತಿಕ ವ್ಯಾಧಿಯ ವಿರಿರುದ್ಧವೂ ಅವರು ಮೂರು ವರ್ಷಗಳ ಕಾಲ ಹೋರಾಡಿದರು. ಇಷ್ಟಾದರೂ ಕೊನೆಯ ತನಕವೂ ಅವರು ಲವಲವಿಕೆಯಿಂದಲೇ ಇದ್ದರು. ಉತ್ಸಾಹ ಎಂದೂ ಬತ್ತಿದ್ದೇ ಇಲ್ಲ. ಈ ವ್ಯಾಧಿಯ ವಿರುದ್ಧವೂ ಅವರು 'ಸ್ಥಿತಪ್ರಜ್ಞ ಸಮದುಃಖ ಸುಖಿಂಧೀರೆ' ಎಂಬ ಸ್ಫೂರ್ತಿಯಲ್ಲೇ ಹೋರಾಡಿದರು. ಈ ವ್ಯಾಧಿಯ ದಿನಗಳಲ್ಲಿ ಕೂಡಾ ಅವರು ಭಾರತದ ಮತ್ತು ಹೊರದೇಶಗಳ ಸಾಮಾಜಿಕ ರಾಜಕೀಯ ವಿಷಯಗಳಲ್ಲಿ ಆಸಕ್ತಿಯನ್ನು ಕಾಯ್ದುಕೊಂಡಿದ್ದರು. ಅವರು ಅತ್ಯಂತ ಯಾತನಮಯವಾದ, ಗುಣಪಡಿಸಲಾಗದ ವ್ಯಾಧಿಯಿಂದ ಸಾವಿಗೀಡಾದರು ಎಂಬುದು ಅತ್ಯಂತ ದುರದೃಷ್ಟಕರ ಸಂಗತಿಯಾಗಿದೆ. ಅವರ ಜೀವಿತದ ಕೊನೆಯ ತಿಂಗಳುಗಳಲ್ಲಿ ಅವರು ದುಬಾರಿ ವೈದ್ಯಕೀಯ ಚಿಕಿತ್ಸೆಯನ್ನು ಸಂಪೂರ್ಣವಾಗಿ ನಿರಾಕರಿಸಿದ್ದರು.

ಓದುವುದು, ಸಂಗೀತವನ್ನು ಆಲಿಸುವುದು, ಒಳ್ಳೆಯ ಚಿತ್ರಗಳನ್ನು ನೋಡುವುದು, ಸಿನಿಮಾ ನಟನಟಿಯರ ಬಗ್ಗೆ ಮಾತನಾಡುವುದು, ಮಕ್ಕಳೊಂದಿಗೆ ಆಟವಾಡುವುದು, ಅವರಿಗೆ ಕಥೆಗಳನ್ನು ಹೇಳುವುದು ಹೀಗೆ ಜೋಶಿಯವರ ಆಸಕ್ತಿಗಳು ಹತ್ತಾರು. ತುರ್ತುಪರಿಸ್ಥಿತಿಯ ಅವಧಿಯಲ್ಲಿ ಅವರು ಬರೆದ ಪತ್ರಗಳು ಅನೇಕ ಕುಟುಂಬಗಳಿಗೆ ಅಂದಿನ ಅನಿಶ್ಚಿತ, ಮತ್ತು ಕರಾಳ ಪರಿಸ್ಥಿತಿಯನ್ನು ಎದುರಿಸಲು ಧೈರ್ಯವನ್ನು ಕೊಟ್ಟವು, ನಿಧಿ ಸಂಗ್ರಹಿಸುವಲ್ಲಿ, ಅಸಹಾಯಕ ಕುಟುಂಬಗಳಿಗೆ ಸಹಾಯ ಮಾಡುವಲ್ಲಿ, ಜೈಲನಲ್ಲಿ ಮತ್ತು ಹೊರಗಡೆ ರಾಜಕೀಯ ಧುರೀಣರೊಂದಿಗೆ ಮಾತುಕತೆ ನಡೆಸುವಲ್ಲಿ ಅವರು ಹೆಚ್ಚಿನ ಉತ್ಸಾಹ ತೋರಿಸುತ್ತಿದ್ದರು. ಹೀಗೆ ಎಸ್.ಎಂ.ಅವರು ನಿರ್ಗತಿಕ ಕುಟುಂಬಗಳಿಗೆ ಅತ್ಯಮೂಲ್ಯ ಸಹಾಯವನ್ನು ನೀಡಿದರು. ಜನತಾ ಪಾರ್ಟಿಯ ರಚನೆಯಲ್ಲಿ ಜೋಶಿಯವರು ಅತ್ಯಂತ ಪ್ರಮುಖ ಹಾಗೂ ನಿರ್ಣಾಯಕ ಪಾತ್ರ ವಹಿಸಿದರು. ಜನತಾ ಪಕ್ಷದ ಸಿದ್ಧಾಂತ ಮತ್ತು ರಾಜಕೀಯ ಧೋರಣೆಗಳನ್ನು ರೂಪಿಸುವಲ್ಲಿ ಅವರು ಸತತವಾಗಿ ಶ್ರಮಿಸಿದ್ದರು. ಆದರೆ ಪಕ್ಷದ ವಿಭಜನೆ ಅವರಿಗೆ ಭಾರಿ ನೋವನ್ನು ಉಂಟು ಮಾಡಿತು.

ಎಸ್.ಎಂ. ಜೋಶಿಯವರು ಮಹಾರಾಷ್ಟ್ರ ವಿಧಾನಸಭೆಯ, ಸಂಸತ್ತಿನ ಇತರ ಅನೇಕ ಸಂಘ ಸಂಸ್ಥೆಗಳು ಸದಸ್ಯರಾಗಿದ್ದರು. ಆದರೂ ಮೂಲತಃ ಸಮೂಹದ ಓರ್ವ ಮನುಷ್ಯರಾಗಿದ್ದರು. ಅನೇಕ ಸ್ವಯಂಸೇವಕ ಸಂಘಟನೆಗಳ ಜೊತೆಗೂ ಅವರು ನಿಕಟ ಸಂಬಂಧ ಹೊಂದಿದ್ದರು. ಅವರು ಶಾಸಕರಾಗಿದ್ದಾಗ ತಮಗೆ ಬರುತ್ತಿದ್ದ ಗೌರವ

ಸಂಭಾವನೆಯನ್ನು ಅನೇಕ ಕಾರ್ಮಿಕರಿಗಾಗಿ ತ್ಯಾಗ ಮಾಡಿದ್ದರು. ಯಾವ ಹುದ್ದೆಯ ಗೀಳು ಅವರಿಗೆ ಇರಲಿಲ್ಲ. ಇಂತಹ ಯಾವುದೇ ತ್ಯಾಗಗಳಿಂದ ಅವರು ಯಾವುದೇ ರಾಜಕೀಯ ಬಂಡವಾಳ ಮಾಡಿಕೊಳ್ಳಲಿಲ್ಲ. ತಾವು ಮಾಡಿದ ಈ ಮಹಾನ್ ಕಾರ್ಯಗಳನ್ನು ಪ್ರದರ್ಶಿಸಲು ಹೋಗಲಿಲ್ಲ. ಬಹುಶಃ ಇದೇ ಅವರ ವ್ಯಕ್ತಿತ್ವದ ಶ್ರೇಷ್ಠತೆ. ಸುಂದರವಾದುದೆಲ್ಲವನ್ನು ಪ್ರಶಂಸಿಸುವ ವಿಶಾಲ ಮನಸ್ಸಿನವರಾಗಿದ್ದರು. ನ್ಯಾಯಪರತೆಯನ್ನು ಅವರು ಬಹುವಾಗಿ ಮೆಚ್ಚಿಕೊಳ್ಳುತ್ತಿದ್ದರು. ಕಾರ್ಮಿಕರು ಮತ್ತು ಅವರ ಮಕ್ಕಳು ಪ್ರಗತಿ ಸಾಧಿಸಿದ್ದನ್ನು ಕಂಡಾಗ ತುಂಬಾ ಹರ್ಷಪಡುತ್ತಿದ್ದರು. ತಮ್ಮ ದುಃಖವನ್ನು ಮತ್ತು ಅದಕ್ಕಿಂತಲೂ ಹೆಚ್ಚಾಗಿ ತಮ್ಮ ಸಂತೋಷವನ್ನು ನಮ್ಮೆಲ್ಲರೊಂದಿಗೆ ಹಂಚಿಕೊಳ್ಳುವ ಅವರ ಗುಣಗಳಿಂದಾಗಿಯೇ ಜೋಶಿ ನಮಗೆ ಒಬ್ಬ ನಾಯಕನಿಗಿಂತಲೂ ಮಿಗಿಲಾಗಿದ್ದರು. ಅವರು ಸಮ್ಮೊಡನೆ ಇದ್ದಾಗ ನಾವು ಓರ್ವನ ಸಂತನ ಜೊತೆ ಇದ್ದಂತೆ ಅನಿಸುತ್ತಿತ್ತು. ಅವರ ಮುಂದೆ ನಾವು ತೀರಾ ಕುಜರಂತೆ ಕಾಣುತ್ತಿದ್ದೆವು. ಆಗ ಅವರು ನಮ್ಮೊಂದಿಗೆ ಬೆರೆತು ನಮ್ಮ ಬೆನ್ನು ತಟ್ಟಿ ನಮ್ಮ ಬದುಕಿನ ಒಂದು ಭಾಗವೇ ಆಗಿಬಿಡುತ್ತಿದ್ದರು.

ಅನ್ಯಾಯದ ವಿರುದ್ಧ ಎದ್ದು ನಿಲ್ಲಲು ಅಣ್ಣಾ ನಮಗೆ ಅಗಾಧ ಧೈರ್ಯವನ್ನು ತಂದುಕೊಟ್ಟರು. ನಮ್ಮ ಹೋರಾಟದ ದಿನಗಳಲ್ಲಿ ಎದುರಾಗುವ ಸಂಕಷ್ಟಗಳನ್ನು ತಾಳಿಕೊಳ್ಳುವುದು ಹೇಗೆಂಬುದನ್ನು ಹೇಳಿಕೊಟ್ಟರು. ಅದೇ ರೀತಿ ನಾವು ನಂಬಿದ ತತ್ವ ಸಿದ್ಧಾಂತಗಳಿಗೆ ನಾವಿಟ್ಟ ಧ್ಯೇಯಗಳಿಗೆ ಹೇಗೆ ನಿಷ್ಠರಾಗಿರಬೇಕೆಂಬುದನ್ನು ಹೇಳಿಕೊಟ್ಟರು. ಇಂದು ಅವರು ನಮ್ಮ ಜೊತೆಯಲ್ಲಿ ಇಲ್ಲದೇ ಹೋಗಿದ್ದರೂ ಕೂಡಾ ಅವರ ಜೀವನ, ಅವರ ಆದರ್ಶ ಮತ್ತು ಅವರ ನಡವಳಿಕೆ ನಮಗೆ ಸದಾ ದಾರಿ ದಾರಿ ದೀಪವಾಗಿ ನಿಲ್ಲಲಿದೆ. ಇಂದಿನ ಅತ್ಯಂತ ಸಂಕೀರ್ಣ ಸಾಮಾಜಿಕ, ಆರ್ಥಿಕ ಸನ್ನಿವೇಶದಲ್ಲಿ ನಾವು ಅಣ್ಣಾ ಅವರಂತಹ ಓರ್ವ ಮಹಾನ್ ವ್ಯಕ್ತಿ ಹಾಗೂ ನೇತಾರರು ಇಲ್ಲದೆ ಹೋಗಿರಬಹುದು. ಆದರೆ ಅವರು ನನ್ನ ಮತ್ತುನನ್ನಂಥ ಇತರ ಅನೇಕರ ಮೇಲೆ ಒತ್ತಿರುವ ಛಾಪು ಎಂದೂ ಅಳಿಸಿ ಹೋಗುವಂತಹುದಲ್ಲ. ಈ ಎಲ್ಲ ಆದರ್ಶಗಳನ್ನು ನಾವು ಜಗತ್ತಿನಲ್ಲಿ ಇರುವ ತನಕವೂ ಮುಂದುವರಿಸಿಕೊಂಡು ಹೋಗುವವರೇ.

ಇಂದಿನ ಯುವ ಜನಾಂಗ ಜೋಶಿಯವರ ಜೀವನದಿಂದ ಕಲಿಯಬೇಕಾದ್ದು ಬಹಳಷ್ಟಿದೆ. ನಾವು ಯಾವುದೇ ಒಂದು ಸಮಸ್ಯೆಯ ಮೇಲೆ ಹೋರಾಡುವಾಗ ನಾವು ಪ್ರಾಮಾಣಿಕರಾಗಿದ್ದರೆ ಸರಿ ಯಾವುದು ಮತ್ತು ತಪ್ಪು ಯಾವುದು ಎಂಬುದನ್ನು ಆಯ್ದುಕೊಳ್ಳಲು ಕಷ್ಟವಾಗುವುದಿಲ್ಲ ಎಂಬುದನ್ನು ಅವವ ಬದುಕು ನಮಗೆ ತೋರಿಸಿ ಕೊಡುತ್ತದೆ. ಯಾವನೇ ಓರ್ವ ವ್ಯಕ್ತಿ ತನ್ನ ಅಭಿಲಾಷೆಯನ್ನು ಧ್ಯೇಯವನ್ನು ಸಾಧಿಸಲು ಹೋರಾಡುವ ಅಗತ್ಯ ಅತ್ಯಂತ ಬಲವಾಗಿರಬೇಕು. ಹೋರಾಟದಲ್ಲಿ ಈ ಆಗ್ರಹ ಇಲ್ಲದೆ

ಹೋದರೆ ಭರವಸೆ, ಆತ್ಮವಿಶ್ವಾಸ ಮತ್ತು ಸಾಮರ್ಥ್ಯ ಕ್ರಮೇಣ ಸೋರಿಹೋಗುತ್ತದೆ. ಕೊನೆಯಲ್ಲಿದು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತದೆ. 'ಹುಚ್ಚರಾಗಿರಿ ಆದರೆ ಸಂಪೂರ್ಣ ಹುಚ್ಚರಾಗಿರಿ. ಯಾವುದೇ ಕಾರಣಕ್ಕೂ ಅರ್ಧ ಹುಚ್ಚರಾಗಿರಬೇಡಿ' ಉದ್ದೇಶ ಯಾವುದೇ ಇರಲಿ ಸ್ವಾತಂತ್ರ್ಯ ಗಳಿಸುವ ಹೋರಾಟವಾಗಿರಲಿ, ಅನ್ಯಾಯದ ವಿರುದ್ಧದ್ದ ಅಂದೋಳನವಾಗಿರಲಿ, ಅಥವಾ ಬೋನಸ್‌ಗಾಗಿ ನಡೆಯುವ ಮುಷ್ಕರವೇ ಆಗರಲಿ ಎಂದು ಅವರು ಯಾವಾಗಲೂ ಹೇಳುತ್ತಿದ್ದರು. ಅದೇ ರೀತಿ ಪ್ರಮಾಣಿಕರಾಗಿ ನೀವು ನಂಬಿದ ಮೌಲ್ಯಗಳಿಗೆ ಸಂಪೂರ್ಣ ನಿಷ್ಠೆಯಿಂದಿರಿ: ಸವಾಲುಗಳನ್ನು ಯಾವಾಗಲೂ ಸಂತೋಷದಿಂದ ಮತ್ತು ಉತ್ಸಾಹದಿಂದ ಎದುರಿಸಿ ಎಂದು ಹೇಳುತ್ತಿದ್ದರು. ಎಸ್.ಎಂ.ಜೋಶಿಯವರ ಭವ್ಯ ಜೀವನವನ್ನು ನಾವು ಹತ್ತಿರದಿಂದ ಕಂಡಿದ್ದೇವೆ. ಅವರಿಂದ ಪ್ರಯೋಜನವನ್ನೂ ಪಡೆದಿದ್ದೇವೆ. ಅನೇಕರು ಅವರ ಬಳಿ ತರಬೇತಿ ಪಡೆದು ಲಾಭ ಗಳಿಸಿದ್ದಾರೆ. ಒಂದು ಮಾತಿನಲ್ಲಿ ಹೇಳುವುದಾದರೆ ಅವರು ದೊಡ್ಡ ಚಿನ್ನದ ಗಣಿಯಂತಿದ್ದರು. ಯಾರೂ ಬೇಕಾದರೂ, ಹೇಗೆ ಬೇಕಾದರೂ ಅದನ್ನು ಬಳಸಿಕೊಳ್ಳಬಹುದಾಗಿತ್ತು. ಇಂದು ನಮ್ಮಲ್ಲಿರುವ ಅನೇಕ ನೇತಾರರು ಎಸ್.ಎಂ.ಜೋಶಿಯವರು ಸಮಾಜಕ್ಕೆ ಬಿಟ್ಟು ಹೋದ ಅಮೂಲ್ಯ ನಿಧಿಯಂತೆ ನಮ್ಮ ಮುಂದಿದ್ದಾರೆ. ಇದೇ ಜೋಶಿಯವರ ಶ್ರೇಷ್ಠತೆಯ ಜೀವಂತ ದ್ಯೋತಕ.

## ಅಧ್ಯಾಯ - 8

## ಎಸ್.ಎಂ. ಜೋಶಿ - ಸಂತೃಪ್ತ ಯೋಧ

*ಎನ್. ಜಿ. ಗೋರೆ

ದಿ. ಎಸ್.ಎಂ. ಜೋಶಿಯವರ ಕುರಿತು ನಾನು ಬರೆಯಲು ಪೆನ್ನನ್ನು ಕೈಗೆತ್ತಿಕೊಂಡಾಗಲೆಲ್ಲ ನನ್ನ ಬರವಣಿಗೆ ಜೀವನಚರಿತ್ರೆ ಬದಲಾಗಿ ಆತ್ಮ ಚರಿತ್ರೆಯತ್ತ ಹೊರಳುತ್ತಿದೆಯೇ ಎಂಬ ಭಾವನೆ ನನ್ನ ಮನಸ್ಸಿನಲ್ಲಿ ಮೂಡುತ್ತದೆ. ಆದರೆ ಅಂತಹ ಸಂದರ್ಭಗಳಲ್ಲಿ ಅವು ಬೇರೆ ರೀತಿಯಾಗಿರುವುದು ಸಾಧ್ಯವೇ ಇಲ್ಲ ಎಂದು ನಾನು ನನ್ನಷ್ಟಕ್ಕೆ ಹೇಳಿಕೊಳ್ಳುತ್ತೇನೆ. ಜೀವನದುದ್ದಕ್ಕೂ ಒಂದೇ ಧೋರಣೆಯಿಂದ ಕೆಲಸ ಕಾರ್ಯಗಳನ್ನು ಜತೆ ಜತೆಯಾಗಿ ನಡೆಸಿಕೊಂಡು ಬಂದ ಯಾರೇ ಆದರೂ ಅವರ ಬಗ್ಗೆ ಸಂಪೂರ್ಣ ವಸ್ತುನಿಷ್ಠರಾಗಿ ಬರೆಯಬೇಕೆಂದು ನಿರೀಕ್ಷಿಸುವುದಾದರೂ ಹೇಗೆ?

1922 ರಿಂದ ಎಸ್.ಎಂ.ಅವರು ಕೊನೆಯುಸಿರೆಳೆಯುವ ತನಕವೂ ನಾವು ಒಂದಾಗಿಯೇ ಯೋಚಿಸಿದೆವು. ಜತೆ ಜತೆಯಾಗಿಯೇ ಸ್ವಾತಂತ್ರ್ಯ ಹೋರಾಟವನ್ನು ಸೇರಿದೆವು. ಜೊತೆಯಲ್ಲಿಯೇ ಜೈಲುವಾಸ ಅನುಭವಿಸಿದೆವು ಮತ್ತು ಅದೇ ರೀತಿ ರಾಷ್ಟ್ರೀಯ ಕಾಂಗ್ರೆಸ್ಸಿನಿಂದಲೂ ಜತೆಯಲ್ಲಿಯೇ ಹೊರಬಂದೆವು. ಅಲ್ಲಿಗೆ ಮುಗಿಯಲಿಲ್ಲ, ಟ್ರೇಡ್ ಯೂನಿಯನ್ ಚಳವಳಿಯಲ್ಲೂ ಕೂಡ ನಾವು ಜತೆ ಜತೆಯಲ್ಲೇ ಇದ್ದೆವು. ಇನ್ನು ನಾನಾ ಚಳವಳಿಗಳಲ್ಲೂ ಅದು ಸಾಮಾಜಿಕ ಪರಿವರ್ತನೆಗಾಗಿನ ಆಂದೋಲನವಾಗಿರಲಿ, ಗೋವಾ ವಿಮೋಚನೆಗಾಗಿನ ಹೋರಾಟವಾಗಿರಲಿ ಅಲ್ಲೆಲ್ಲಾ ನಾವು ಜತೆಯಲ್ಲೇ ಇದ್ದೆವು. ಹೀಗೆ ಸಹಜವಾಗಿಯೇ ನಮ್ಮ ರಾಜಕೀಯ ಮತ್ತು ಸಾಮಾಜಿಕ ಕಾರ್ಯಭಾರ ನಡೆದುಕೊಂಡೇ ಇತ್ತು. ಅದೇನಿದ್ದರೂ ಎಸ್.ಎಂ. ಜೋಶಿಯವರಾಗಲಿ ಅಥವಾ ನಾನಾಗಲಿ ನಮ್ಮ ನಮ್ಮ ವ್ಯಕ್ತಿತ್ವವನ್ನು ಪ್ರತ್ಯೇಕವಾಗಿಯೇ ಕಾಯ್ದುಕೊಂಡಿದ್ದೆವು ಮತ್ತು ನಮ್ಮ ವೈಯಕ್ತಿಕ ವರ್ಚಸ್ಸನ್ನು ನಾವು ಉಳಿಸಿಕೊಂಡಿದ್ದೆವು ಎಂಬುದೇ ಇಲ್ಲಿ ಗಮನಾರ್ಹವಾದ ಅಂಶ. ಅದೇನೇ ಇದ್ದರೂ ಭಾರತದಲ್ಲಿ ಬೇರೆಲ್ಲೂ ಕೂಡಾ ಇಂತಹ ಜೊತೆಗಾರರನ್ನು ಯಾರೂ ಕಂಡಿರಲಿಕ್ಕಿಲ್ಲ ಎಂದು ನಾನು ಹೆಮ್ಮೆಯಿಂದಲೇ ಹೇಳುತ್ತೇನೆ. ನಮ್ಮ ನಡುವಣ ಸ್ನೇಹ ಸತತ ಅರವತ್ತು ವರ್ಷಗಳದ್ದಾಗಿತ್ತು. ಅನೇಕ ಸಂದರ್ಭಗಳಲ್ಲಿ ನಮ್ಮೊಳಗೆ ಭಿನ್ನಾಭಿಪ್ರಾಯ ಬಂದಿದ್ದರೂ, ತದ್ವಿರುದ್ಧ ವೈಯಕ್ತಿಕ ಹಿತಾಸಕ್ತಿಗಳಿದ್ದರೂ ಈ ಸ್ನೇಹಕ್ಕೆ ಎಂದೂ ಕುತ್ತು ಬರಲಿಲ್ಲ.

---

* ಎನ್. ಜಿ. ಗೋರೆಯವರು ಬ್ರಿಟನ್ನಿನ ಮಾಜಿ ಹೈಕಮೀಷನರ್ ಮತ್ತು ಮಾಜಿ ಸಂಸತ್ ಸದಸ್ಯರು.

ಎಸ್.ಎಂ. ಅವರು ಸಂಪೂರ್ಣವಾಗಿ ಮತ್ತು ಮಹತ್ವದ ಘಟನಾವಳಿಗಳಿಂದ ಕೂಡಿದ ಪರಿಪೂರ್ಣ ಬದುಕನ್ನು ಬಾಳಿದರು. ಅವರು ಪುಣೆಯಲ್ಲಿ ಹುಟ್ಟಿದವರಲ್ಲ. ಪಶ್ಚಿಮ ಕರಾವಳಿಯ ಪುಟ್ಟ ಗ್ರಾಮವೊಂದರಲ್ಲಿ ಜನಿಸಿದರು. ಈಗಲೂ ತೀರಾ ಅಲಕ್ಷಿತವಾಗಿಯೇ ಇರುವ ರತ್ನಗಿರಿಯ ಬಂದರಿಗೆ ಸಮೀಪದಲ್ಲಿದ್ದ ಸ್ಥಳ ಅದಾಗಿತ್ತು. ಅಂದಿನ ದಿನಗಳಲ್ಲಿ ಜೋಶಿಯವರ ಕುಟುಂಬವು ಇತರೆಲ್ಲ ಚಿತ್ಪಾವನ ಬ್ರಾಹ್ಮಣ ಕುಟುಂಬಗಳಂತೆಯೇ ತುಂಬು ಕುಟುಂಬವಾಗಿದ್ದು ಆರ್ಥಿಕವಾಗಿ ದುಸ್ಥಿತಿಯಲ್ಲಿತ್ತು. ಇದು ಸಾಲದೆಂಬಂತೆ ಎಸ್.ಎಂ. ಅವರ ತಂದೆ ಕೆಳದರ್ಜೆಯ ಓರ್ವ ಸರ್ಕಾರಿ ನೌಕರರಾಗಿದ್ದು ಸಣ್ಣ ವಯಸ್ಸಿನಲ್ಲೇ ಸಾವಿಗೀಡಾದರು. ಇದರಿಂದಾಗಿ ಅವರ ಕುಟುಂಬ ಚದುರಿ ಹೋಯಿತು. ಹುಡುಗನಾಗಿದ್ದಾಲೇ ಎಸ್.ಎಂ. ಪುಣೆಗೆ ಬಂದು ತಮ್ಮ ಹೊಟ್ಟೆಯನ್ನು ತಾವೇ ಹೊರೆದುಕೊಳ್ಳಬೇಕಾಯಿತು. ಏಳನೆ ವಯಸ್ಸಿನಲ್ಲಿ ಅನೇಕ ಸಂಕಷ್ಟಗಳನ್ನು ಅವರು ಎದುರಿಸಬೇಕಾಯಿತು. ಬಡತನದಿಂದಾಗಿ ಶಾಲೆಯ ವಿದ್ಯಾಭ್ಯಾಸವು ಅನೇಕ ಬಾರಿ ಮುಗ್ಗರಿಸಿತು. ಅವರು ಲೋಕಮಾನ್ಯ ತಿಲಕ್ ಮತ್ತು ಸಮಾಜ ಸುಧಾರಕ ಆಗರಕರ್ ಅವರು ಸ್ಥಾಪಿಸಿದ ಡೆಕ್ಕನ್ ಎಜುಕೇಷನ್ ಸೊಸೈಟಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ನಾನು ಸೇರಿದಾಗ ಜೋಶಿಯವರು ಅಲ್ಲಿ ವಿದ್ಯಾರ್ಥಿಯಾಗಿದ್ದರು. ನಾವು ಒಂದೇ ತರಗತಿಯಲ್ಲಿದ್ದರೂ ಎಸ್.ಎಂ. ಅವರು ತರಗತಿಯಲ್ಲೇ ಹಿರಿಯರಾಗಿದ್ದರು. ಆ ವೇಳೆಗಾಗಲೇ ಜೋಶಿಯವರು ಶಾಲೆಯಲ್ಲಿ ಭಾರಿ ಪ್ರಭಾವಶಾಲಿಯಾಗಿದ್ದನ್ನು ನಾನು ಕಂಡುಕೊಂಡೆ. ಶಾಲೆಯಲ್ಲಿ ಎಲ್ಲರಿಗೂ ಅವರು ಬೇಕಾದವರಾಗಿದ್ದರು. ಇದು ಅವರ ಹಿರಿಯತನದಿಂದ ಅಥವಾ ವಯಸ್ಸಿನಿಂದ ಬಂದ ಗೌರವವಲ್ಲ. ಅವರಲ್ಲಿ ಬುದ್ಧಿ ಮತ್ತು ಹೃದಯಕ್ಕೆ ಸಂಬಂಧಿಸಿದ ಅನೇಕ ಉದಾತ್ತ ಗುಣಗಳಿದ್ದದ್ದೇ ಅದಕ್ಕೆ ಕಾರಣ. ಎಸ್. ಎಂ. ಎಂದೂ ತರಗತಿಯಲ್ಲಿ ಅತಿ ಚತುರ ವಿಧ್ಯಾರ್ಥಿಯಾಗಿರಲಿಲ್ಲ. ಆದರೆ ಅವರು ತುಂಬಾ ಧೈರ್ಯಶಾಲಿಯಾಗಿದ್ದರು. ಎಳವೆಯ ಆ ದಿನಗಳಲ್ಲೇ ಅವರು ನಾಯಕತ್ವದ ಗುಣಗಳನ್ನು ಪ್ರದರ್ಶಿಸಿದ್ದರು.

ಅವರ ಕಿಸೆಗಳು ಯಾವಾಗಲೂ ಬರಿದಾಗಿರುತ್ತಿದ್ದವು. ಆದರೆ ಅವರಲ್ಲಿ ಇತರರು ಅಸೂಯೆ ಪಡುವಂತಹ ದೈಹಿಕ ಸಂಪತ್ತಿತ್ತು. ಬೆಳ್ಳನೆ, ತೆಳ್ಳನೆಯ ಮೃದುವಾದ ಮೈಕಾಂತಿಯಿಂದ ಅವರು ಎಲ್ಲರ ಗಮನ ಸೆಳೆಯುತ್ತಿದ್ದರು. ಎತ್ತರದ ನಿಲುವಿನವರಾಗಿದ್ದರು. ದಟ್ಟವಾದ ಕೂದಲಿತ್ತು. ಅದನ್ನು ಅವರು ಬಹಳ ಎಚ್ಚರದಿಂದ ಸೊಂಪಾಗಿ ಬೆಳೆಸಿಯೂ ಇದ್ದರು. ಅದನ್ನು ಬೇರೆಯವರಿಗೆ ತೋರಿಸುವುದರಲ್ಲಿಯೂ ಅವರಿಗೆ ಬಹಳ ಹೆಮ್ಮೆ ಇದ್ದಿರಬೇಕು. ಆದರೆ ಇವೆಲ್ಲಕ್ಕಿಂತಲೂ ನಮ್ಮ ಮನಸ್ಸಿನ ಅಚ್ಚಳಿಯದೆ ಉಳಿಯುವುದು ಅವರ ಕಣ್ಣುಗಳು. ಅವು ಸ್ಪಟಿಕದಂತೆ ಪಾರದರ್ಶಕವಾಗಿ ತಿಳಿನೀಲಿ ಮಿಶ್ರಿತ ಬೂದು ಬಣ್ಣದವು. ಆ ಕಣ್ಣುಗಳು ಯಾವಾಗಲೂ ನನ್ನ ಮುಂದಿರುತ್ತದೆ.

ಎಲ್ಲಾದರೂ ಯಾರಿಗಾದರೂ ಅನ್ಯಾಯವಾದಾಗ, ಯಾರಲ್ಲಾದರೂ ಅಪ್ರಾಮಾಣಿಕತೆ ಕಂಡು ಬಂದಾಗ ಆ ಕಣ್ಣುಗಳು ಜ್ವಾಲೆಯಂತೆ ಉರಿಯುತ್ತಿದ್ದವು. ಅದೇ ರೀತಿ ಒಳ್ಳೆಯ ಕೆಲಸಗಳು ನಡೆದಾಗ ಅವು ಮಿನುಗುತ್ತಿದ್ದವು. ಅವರು ತೋರಿಕೆಯ ಬುದ್ಧಿಜೀವಿ ಆಗಿರಲಿಲ್ಲ. ಆದರೆ ಅವರಲ್ಲಿ ವಿಚಾರ ಮತ್ತು ನ್ಯಾಯಾದ ಸೂಕ್ಷ್ಮ ಪ್ರಜ್ಞೆ ಇತ್ತು. ನೂರಕ್ಕೆ ನೂರು ಪ್ರಾಮಾಣಿಕರು. ಯಾವುದೇ ಒಳ್ಳೆಯ ಧ್ಯೇಯಕ್ಕಾಗಿ ತಮ್ಮನ್ನು ತೆತ್ತುಕೊಳ್ಳಲು ಸಿದ್ಧರಾಗುವವರು.

ಆ ಅವಧಿಯಲ್ಲಿ ನಮ್ಮಲ್ಲಿ ಅನೇಕರಂತೆ ಅವರು ಕಾರ್ಲ್ಸ್ ಮಾರ್ಕ್ಸ್‌ನಿಂದ ಬಹುವಾಗಿ ಪ್ರಭಾವಿತರಾಗಿದ್ದರು. ಅದಕ್ಕಿಂತಲೂ ಮಿಗಿಲಾಗಿ ಮಹಾತ್ಮಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿದ್ದರು. ಅದಕ್ಕೆ ಅವರು ಓರ್ವ ರಚನಾತ್ಮಕ ಕಾರ್ಯಕರ್ತರಾಗಿದ್ದುದ್ದೇ ಕಾರಣ ಎಂದು ನಾನು ಊಹಿಸುತ್ತೇನೆ. ನಿಪುಣನಾದ ಓರ್ವ ಗಾರೆ ಕೆಲಸಗಾರನಂತೆ ಹಂತ ಹಂತವಾಗಿ ಇಟ್ಟಿಗೆಯ ಮೇಲೆ ಇಟ್ಟಿಗೆ ಇಟ್ಟು ತಮ್ಮ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಅವರು ಸಿದ್ಧಹಸ್ತರು. 1930ರ ದಶಕದಲ್ಲಿ ಅವರು ದಿ. ಎಂ.ಎನ್.ರಾಯ್ ಅವರ ಪ್ರಭಾವಕ್ಕೆ ಒಳಗಾದಾಗ ನನಗೊಂದಿಷ್ಟು ಗಾಬರಿಯೇ ಆಯಿತೆನ್ನಬಹುದು. ಆದರೆ ಅದು ತಾತ್ಕಾಲಿಕವಾಗಿ ತಟ್ಟಿದ ಭ್ರಮೆಯಾಗಿದ್ದು ಕೆಲವೇ ಸಮಯದಲ್ಲಿ ಅದರಿಂದ ತಾವಾಗಿಯೇ ಹೊರ ಬರುವರೆಂದು ನಾನು ಅದಕ್ಕೆ ವ್ಯಾಖ್ಯಾನ ಮಾಡಿದ್ದುಂಟು. ಅವರು ಉರ್ದು ಬಲ್ಲವರಾಗಿದ್ದರು. ಆ ಭಾಷೆಯಲ್ಲಿ ಅವರು ನಿರರ್ಗಳವಾಗಿ ಮಾತನಾಡುತ್ತಿದ್ದರು. ಈ ಭಾಷೆಯಲ್ಲಿ ಅವರು ಸಾಧಿಸಿದ ಪ್ರಾವಿಣ್ಯ ಮತ್ತು ಪ್ರೌಢಿಮೆಗಳು ಮತ್ತು ಒಂದು ವಿಶೇಷ ಸಂದರ್ಭದಲ್ಲಿ ಅವರು ಬೆಳೆಯಗೊಟ್ಟ ಅವರ ಗಡ್ಡ ಕ್ವಿಟ್ ಇಂಡಿಯಾ ಚಳವಳಿಯ ಸಂದರ್ಭದ ಭೂಗತ ಹೋರಾಟದಲ್ಲಿ ಅವರಿಗೆ ಬಹಳಷ್ಟು ಸಹಕಾರಿಯಾಗಿರಬೇಕು. ಇದರಿಂದಾಗಿ ಮುಂಬಯಿಯಲ್ಲಿ ಮತ್ತು ಭಾರತದ ವಾಯುವ್ಯ ಪ್ರಾಂತ್ಯದಲ್ಲಿ ಕೂಡಾ ನಿರ್ಭಯವಾಗಿ ಅಡ್ಡಾಡಬಲ್ಲವರಾಗಿದ್ದರು. ಆಗ ನಾವು ಅವರನ್ನು ಇಮಾಂ ಸಾಹೇಬ್ ಎಂದು ಕರೆಯುತ್ತಿದ್ದೆವು. ಹಲವು ತಿಂಗಳುಗಳ ಕಾಲ ಅವರು ಬಂಧನಕ್ಕೆ ಒಳಗಾಗದೆ ಮುಕ್ತರಾಗಿ ಅತ್ತಿಂದಿತ್ತ ಸಂಚರಿಸುತ್ತಿದ್ದರು.

ಆದರೆ ಅವರ ಜೀವನದಲ್ಲಿ ಅತ್ಯುಚ್ಚ ಯಶಸ್ಸನ್ನು ಕಂಡ ಕ್ಷಣವೆಂದರೆ ಸಂಯುಕ್ತ ಮಹಾರಾಷ್ಟ್ರ ಆಂದೋಳನಕ್ಕೆ ಅವರು ನೀಡಿದ ನೇತೃತ್ವದ ವೇಳೆ (1954 -55). ದಕ್ಷಿಣ ಮಹಾರಾಷ್ಟ್ರ ಭಾವನಾತ್ಮಕವಾಗಿ ಹತ್ತಿ ಉರಿಯುತ್ತಿತ್ತು. ಮುಂಬಯಿಯಲ್ಲಂತೂ ಈ ಚಳವಳಿ ಪ್ರಕೋಪಕ್ಕೆ ಹೋಗಿತ್ತು. ನಿಶ್ಯಸ್ತ್ರ ಪ್ರದರ್ಶನಕಾರರ ಮೇಲೆ ಪೊಲೀಸರು ಗೋಲಿಬಾರ್ ನಡೆಸಿದಾಗ ಕೆಲವರು ಸತ್ತು ಹೋದರು. ಈ ಸಂದರ್ಭದಲ್ಲಿ ಜನರ ಗುಂಪೊಂದು ತರುಣ ಪೊಲೀಸ್ ಅಧಿಕಾರಿಯೊಬ್ಬನನ್ನು ಸುತ್ತುವರಿದು ಆತನನ್ನು ಕೊಲ್ಲಲು

ಮುಂದಾಯಿತು. ಆ ಸಂದರ್ಭದಲ್ಲಿ ಜೋಶಿಯವರು ಆ ಅಧಿಕಾರಿ ಮತ್ತು ಅವನ ರಕ್ತ ಕುಡಿಯಲು ಹಾತೊರೆಯುತ್ತಿದ್ದ ಜನರ ಗುಂಪಿನ ಮಧ್ಯೆ ನಿಂತು ಬಿಟ್ಟರು. ಆ ಯುವ ಅಧಿಕಾರಿಯ ಮೇಲೆ ಕೈಮಾಡುವುದಕ್ಕೆ ಮೊದಲು ನನ್ನನ್ನು ಕೊಂದು ಮುಂದಕ್ಕೆ ಹೋಗಬೇಕು ಎಂದು ಅವರು ಖಡಾಖಂಡಿತವಾಗಿ ಹೇಳಿದರು. ಮರು ಮಾತಿಲ್ಲದೆ ಗುಂಪು ಚದುರಿ ಹೋಯಿತು. ಒಂದು ಹೇಯ ಘಟನೆ ಸಂಭವಿಸುವುದು ತಪ್ಪಿಹೋಯಿತು. ಎಸ್.ಎಂ. ಅವರ ಈ ನಡೆ ಗಾಂಧೀವಾದದ ಪರಮೋಚ್ಚ ಮೌಲ್ಯವಾಗಿತ್ತು. ಇತರ ದೇಶಗಳಲ್ಲಿ ಇಂತಹ ಒಂದು ಘಟನೆ ಸಂಭವಿಸುವುದು ಸಾಧ್ಯವೇ ಇಲ್ಲ.

ಶಾಸಕರಾಗಿ ಕಾರ್ಯನಿರ್ವಹಿಸುವುದನ್ನು ಎಸ್.ಎಂ. ಜೋಶಿಯವರು ಎಂದೂ ತಮ್ಮ ಘನತೆಗೆ ಕಡಿಮೆ ಎಂದು ತಿಳಿದವರಲ್ಲ. ಮಹಾರಾಷ್ಟ್ರ ವಿಧಾನಸಭೆಗೆ ಪುಣೆಯಿಂದ ಮತ್ತು ಅನಂತರದಲ್ಲಿ ಅದೇ ಕ್ಷೇತ್ರದಿಂದ ಲೋಕಸಭೆಗೆ ಎರಡು ಬಾರಿ ಚುನಾಯಿತರಾಗಿದ್ದರು. ಶಾಸಕರಾಗಿ ಪ್ರತಿಪಕ್ಷಗಳ ಸ್ಥಾನದಲ್ಲಿ ಕುಳಿತಿರುತ್ತಿದ್ದ ಅವರು ಆಡಳಿತ ಪಕ್ಷವನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿದ್ದರು. ಆದರೆ ಅಷ್ಟೇ ರಚನಾತ್ಮಕವಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಪ್ರಜಾಸತ್ತಾತ್ಮಕ ಸಮಾಜವಾದಿ ಮೌಲ್ಯಗಳಿಗೆ ಬದ್ಧರಾಗಿದ್ದ ಅವರು ಸರ್ಕಾರದ ಧೋರಣೆಗಳ ವಿಷಯಲ್ಲಿ ಎಂದೂ ಅಗ್ಗದ ಟೀಕೆಗಳಿಗೆ ಮುಂದಾಗುತ್ತಿರಲಿಲ್ಲ. ಕುದುರೆ ವ್ಯಾಪಾರದಲ್ಲಿ (ಶಾಸಕರ ಖರೀದಿ ವಿಷಯ) ಇಂದಿನ ಸಂಸದೀಯ ಕಾರ್ಯಕಲಾಪಗಳಲ್ಲಿ ಸಾಮಾನ್ಯವಾಗಿರುವ ದುರಾವರ್ತನೆಯ ಮತ ಪ್ರದರ್ಶನಗಳಲ್ಲಿ ಎಂದೂ ಅವರು ಪಾಲ್ಗೊಂಡವರಲ್ಲ. ಎಸ್.ಎಂ. ಅವರು ಅಸಾಧಾರಣ ವಾಗ್ಮಿಯೇನೂ ಆಗಿರಲಿಲ್ಲ. ಹಾಗಾಗುವ ಅಭಿಲಾಷೆಯೂ ಅವರಲ್ಲಿ ಇರಲಿಲ್ಲ. ಆದರೆ ಸದನದಲ್ಲಿ ಅವರು ಏನನ್ನಾದರೂ ಹೇಳಿದರೆ ಅದು ಅಂತಹ ಗಾಡಬದ್ಧತೆ, ನಿಷ್ಠೆಯಿಂದ, ಪಾರದರ್ಶಕ ಪ್ರಾಮಾಣಿಕತೆಯಿಂದ ಮತ್ತು ಸಹಾಯಕರ ಬಗೆಗೆ ಅವರಲ್ಲಿದ್ದ ಗಾಢ ಸಹಾನುಭೂತಿಯಿಂದ ಕೂಡಿರುತ್ತಿತ್ತು.

ಮಹಾರಾಷ್ಟ್ರದಲ್ಲಿ ರಾಷ್ಟ್ರ ಸೇವಾದಳದ ಸಂಘಟನೆ ಮತ್ತು ಅದರ ಕಾರ್ಯ ಚಟುವಟಿಕೆಯ ವಿಸ್ತರಣೆ ಅವರು ರಾಜ್ಯಕ್ಕೆ ನೀಡಿದ ಅತ್ಯಮೂಲ್ಯ ಕೊಡುಗೆಯಾಗಿತ್ತು. ಭಾರತದ ಇನ್ನಾವುದೇ ರಾಜ್ಯದಲ್ಲೂ ಕೂಡಾ ಈ ತರಹದ ಹೋರಾಟ ನಡೆದಿದ್ದಿಲ್ಲ. ಈ ಚಳವಳಿಯ ಸಂಘಟನೆಯನ್ನು ಅರ್ಥ ಮಾಡಿಕೊಳ್ಳಬೇಕಾದರೆ, ನಾವು ಕೆಲವೊಂದು ವಾಸ್ತವಾಂಶಗಳನ್ನು ಗ್ರಹಿಸಿಕೊಳ್ಳಬೇಕು. ಅನೇಕ ರೂಢಿ ಬಾಹಿರ ಸಂಪ್ರದಾಯಗಳನ್ನು ಒಂದಕ್ಕೊಂದು ವಿರುದ್ಧವಾಗಿರುವ ಮತ ಪಂಥಗಳನ್ನು, ವಿಭಜನೆ ಪ್ರವೃತ್ತಿಯ ಜಾತಿ ವ್ಯವಸ್ಥೆಯನ್ನು ಮತ್ತು ವರಮಾನಗಳಲ್ಲಿ, ಮತ್ತು ಸ್ಥಾನಮಾನಗಳಲ್ಲಿ ಅಗಾಧ ವ್ಯತ್ಯಾಸಗಳನ್ನು ಹೊಂದಿರುವ ನಾಡು ನಮ್ಮದು.

ಭಾರತವು ನಾವು ಇಂದು ಬಳಸುವ ಪರಿಭಾಷೆಯಲ್ಲಿ ಎಂದೂ ಒಂದು ರಾಷ್ಟ್ರವಾಗಿ ಇರಲೇ ಇಲ್ಲ. ಅದು ಸದಾ ಕೋಮುವಾದಿ ಮತ್ತು ಮೂಲಭೂತವಾದಿ ಶಕ್ತಿಗಳಿಗೆ ಸಮೃದ್ಧವಾದ ಭೂ ಪ್ರದೇಶವಾಗಿತ್ತಷ್ಟೆ. ಭಾರತದ ಸಮಾಜ ವ್ಯವಸ್ಥೆಯಲ್ಲಿ ಅಡಕವಾಗಿರುವ ವಿಭಜಕ ಪ್ರವೃತ್ತಿಯ ಮತ್ತು ಪ್ರತಿಯೊಂದನ್ನು ತನ್ನೆಡೆಗೆ ಕೇಂದ್ರಿಕರಿಸುವ ಮೂಲಭೂತ ಪ್ರವೃತ್ತಿಗಳು ಸಮಾಜವಾದ ಮತ್ತು ಜನತಂತ್ರದ ದಾರಿಯಲ್ಲಿ ಅಡ್ಡಗೋಡೆಗಳಾಗಿ ನಿಂತಿವೆ. ಇಂತಹ ಪರಸ್ಪರ ವಿರೋಧಾಭಾಸದ ಪ್ರಬಲ ವಿರೋಧಿ ಶಕ್ತಿಗಳ ವ್ಯೂಹದಿಂದ ರಾಷ್ಟ್ರವನ್ನು ಹೊರತರಲು ಭಾರತದಂತಹ ದೇಶಕ್ಕೆ ಒಂದು ಹೊಸ ಚಿಂತನೆ, ಪರಿಕಲ್ಪನೆ ಮತ್ತು ನವೀನ ದೃಷ್ಟಿಕೋನವನ್ನು ಒಂದು ಹೊಸ ಕಾರ್ಯಭಾರದ ಮಾರ್ಗವನ್ನು ತೋರಿಸಿ ಕೊಡುವುದು ಅವಶ್ಯವಾಗಿತ್ತು. ಜಾತಿ, ಮತ, ಬಣ ಮತ್ತು ಸಮುದಾಯದ ಆಚೆಗೆ ನೋಡಲು ಸಾಧ್ಯವಾಗುವ ರೀತಿಯ ಪ್ರಜಾಸತ್ತಾತ್ಮಕ ಮತ್ತು ಜಾತ್ಯಾತೀತ ಮೌಲ್ಯಗಳನ್ನು ಯುವಕ - ಯುವತಿಯರಲ್ಲಿ ಬಿತ್ತಿ ಅವರನ್ನು ಸಂಘಟಿತ ಶಕ್ತಿಯಾಗಿ ಬೆಳೆಸಿದರೆ ಮಾತ್ರವೇ ಅದು ಸಾಧ್ಯ. ಸ್ವಾತಂತ್ರ್ಯ ಪೂರ್ವದ ಅರ್ಧ ಶತಮಾನದ ಅವಧಿಯಲ್ಲಿ ಇಂತಹ ಪ್ರಯತ್ನವೊಂದನ್ನು ಮಾಡಿದ್ದಲ್ಲಿ ಭಾರತವು ನಾವಿಂದು ಕಾಣುತ್ತಿರುವ ಪ್ರತ್ಯೇಕವಾದಿ ಮತ್ತು ಕೋಮುವಾದಿ ಶಕ್ತಿಗಳ ಜಾಲದಲ್ಲಿ ಅಸಹಾಯಕವಾಗಿ ಬೀಳುತ್ತಿರಲಿಲ್ಲ. ರಾಷ್ಟ್ರ ನಿರ್ಮಾಣದಲ್ಲಿ ಎಸ್.ಎಂ. ಜೋಶಿಯವರ ಕೊಡುಗೆಗಳ ವಿಷಯದಲ್ಲಿ ಸರಿಯಾದ ಮೌಲ್ಯಮಾಪನ ಮಾಡಬೇಕೆಂದಾದಲ್ಲಿ, ಇನ್ನೊಂದು ಅಂಶವನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಭಾರತದ ಪ್ರಜೆಗಳಲ್ಲಿ ಶೇ. 60 ಕ್ಕಿಂತಲೂ ಹೆಚ್ಚು ಮಂದಿ ಇನ್ನೂ ಅನಕ್ಷರಸ್ಥರಾಗಿಯೇ ಇದ್ದಾರೆ. ಜನತಂತ್ರ ಸಮಾನತೆ, ವಿಮೋಚನೆ ಮತ್ತು ಜಾತ್ಯಾತೀತತೆಯಂತಹ ಪದಗಳು ಅವರ ಶಬ್ದಕೋಶದಲ್ಲಿ ಇನ್ನು ಮೇಲಷ್ಟೆ ಸೇರಬೇಕಾಗಿದೆ. ಅವರಿಗಿದ್ದ ಏಕೈಕ ಶಿಕ್ಷಣವೆಂದರೆ ಪರಂಪರೆ. ತಲೆಮಾರಿನಿಂದ ತಲೆಮಾರಿಗೆ, ಬಾಯಿಯಿಂದ ಬಾಯಿಗೆ, ಪುರಾಣ ಮತ್ತು ದಂತಕಥೆಗಳ ರೂಪದಲ್ಲಿ ಹರಿದು ಬಂದ ಶಿಕ್ಷಣವೊಂದೇ.

ಎಸ್.ಎಂ. ಜೋಶಿಯವರು ಓರ್ವ ಸಂತೃಪ್ತಯೋಧನ ಅಂತ್ಯವನ್ನು ಕಂಡರು. ಸಂಕಷ್ಟಮಯ ಮತ್ತು ಸಂಕ್ಷೋಭೆ ಜಗತ್ತಿನಲ್ಲಿ ನಾವಿಂದು ಬದುಕುತ್ತಿದ್ದೇವೆ. ಈ ಸಂದರ್ಭದಲ್ಲಿ ಎಸ್.ಎಂ. ಜೋಶಿಯವರ ಸಂದೇಶವೊಂದು ನಮಗೆ ಆಶಾದೀಪದಂತೆ ಕಾಣುತ್ತಿದೆ. ನಾವು ಸದಾ ಪ್ರಯತ್ನಶೀಲರಾಗಿರಬೇಕು. ಸದಾ ಹೊಸದನ್ನು ಹುಡುಕುತ್ತಿರಬೇಕು ಎಂದು ಯಾರಿಗೂ ಶರಣಾಗಬಾರದು. ಎಸ್.ಎಂ. ಅವರ ಈ ಸಂದೇಶ ನಮ್ಮೆಲ್ಲರಿಗೂ ಚಿರಸ್ಫೂರ್ತಿಯನ್ನು ಕೊಡಲಿದೆ.

## ಅಧ್ಯಾಯ - 9

## ಎಸ್. ಎಂ. ಜೋಶಿ - ಓರ್ವ ಜನನಾಯಕ

*ಪ್ರೊ: ಸಮರ್ ಗುಹ

ಭಾರತದ ಸ್ವಾತಂತ್ರ್ಯ ಆಂದೋಲನ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಸಾಮಾಜಿಕ - ಆರ್ಥಿಕ ಪರಿವರ್ತನೆಗಳಿಗಾಗಿ ನಡೆದ ಹೋರಾಟದ ಇತಿಹಾಸವು ಈ ನಿಟ್ಟಿನಲ್ಲಿ ಸಮಾಜವಾದಿಗಳ ಕೊಡುಗೆಯನ್ನು ನಿಶ್ಚಿತವಾಗಿಯೂ ದಾಖಲಿಸಲಿದೆ. ಎಸ್.ಎಂ. ಜೋಶಿಯವರು ಈ ಸಮಾಜವಾದಿ ಸಮುದಾಯದ ಪ್ರಮುಖ ನೇತಾರರಲ್ಲಿ ಒಬ್ಬರಾಗಿದ್ದರು. ಅವರು 1924 ರಲ್ಲಿ ರಚಿತವಾದ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ (ಸಿಎಸ್‌ಪಿ)ಯ ಸಂಸ್ಥಾಪಕರಲ್ಲಿ ಒಬ್ಬರಾಗಿಯೂ ಸುಪ್ರಸಿದ್ಧರು. ಮೂವತ್ತರ ಹರೆಯದಲ್ಲಿದ್ದ ಜೋಶಿಯವರು, ಆಚಾರ್ಯ ನರೇಂದ್ರ ದೇವ್, ಜಯಪ್ರಕಾಶ ನಾರಾಯಣ್, ಯೂಸುಫ್ ಮೆಹರುಲಿ, ಮೀನು ಮಸಾನಿ, ಅಚ್ಯುತ್ ಪಟವರ್ಧನ್, ಡಾ. ರಾಮಮನೋಹರ್ ಲೋಹಿಯಾ, ಅಶೋಕ್ ಮೆಹ್ತಾ ಮತ್ತಿತರರಂತೆ ಮುಂಚೂಣಿಯ ನಾಯಕರ ಸಾಲಿಗೆ ಸೇರಿರದಿದ್ದರೂ ಮಹಾರಾಷ್ಟ್ರದಲ್ಲಿ ಈ ಪಾರ್ಟಿಯನ್ನು ಕಟ್ಟುವಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿದ್ದರು. ಸಮಾಜವಾದಿ ಸಿದ್ಧಾಂತಗಳಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದ ಓರ್ವ ಅತ್ಯಂತ ಸಮರ್ಥ ಸಂಘಟಕರೆನಿಸಿಕೊಂಡಿದ್ದ ಜೋಶಿಯವರು ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ ರಚನೆಯಾದ ನಂತರದಲ್ಲಿ ಎಲ್ಲೆಡೆ ಪ್ರಸಿದ್ಧಿಯನ್ನು ಪಡೆದರಲ್ಲದೆ ಸಮಾಜವಾದಿಗಳ ವರ್ತುಲದಲ್ಲೂ ಭಾರಿ ಮನ್ನಣೆಗೆ ಪಾತ್ರರಾಗಿದ್ದರು.

ಎಸ್.ಎಂ. ಜೋಶಿಯವರು ಅತ್ಯುನ್ನತ ಶ್ರೇಣಿಯ ಪ್ರಭಾವವಲಯವನ್ನು ಹೊಂದಿರಲಿಲ್ಲ. ಆದರೆ ಅವರ ಚಟುವಟಿಕೆಗಳು ಅವರ ನಾಯಕತ್ವಕ್ಕೆ ತಮ್ಮನ್ನದೇ ಮೆರುಗನ್ನು ನೀಡಿದ್ದವು. ಅವರ ಸರಳ ಮತ್ತು ಸಾತ್ವಿಕ ಜೀವನ ಶೈಲಿ ಮಾನವೀಯ ನಡವಳಿಕೆ ಪಕ್ಷದ ಕಾರ್ಯಕರ್ತರೊಂದಿಗೆ ಅವರಿಗಿದ್ದ ಗಾಢ ಸ್ನೇಹ ಮತ್ತು ಜನಸಾಮಾನ್ಯರ ಒಳಿತಿನ ಬಗೆಗೆ ಅವರಲ್ಲಿದ್ದ ಕಾಳಜಿ ಮತ್ತು ಅವರಿಗಾಗಿ ಹೋರಾಡುವ ಉತ್ಸಾಹ ಹಾಗೂ ಸಮಾಜವಾದಿ ಸಿದ್ಧಾಂತಗಳಲ್ಲಿ ಅವರಿಗಿದ್ದ ನಿಷ್ಠೆಗಳಿಂದಾಗಿ ಅವರು ಎಲ್ಲರ ಪ್ರೀತಿಗೆ ಪಾತ್ರಾರಾಗಿದ್ದರು. ಸಮಾಜವಾದಿಗಳ ಸಮುದಾಯದಲ್ಲಿ ಎಸ್.ಎಂ. ಜೋಶಿಯವರ ಬಗ್ಗೆ ಇದೇ ಭಾವನೆ ಇದ್ದಿತು. ಜಯಪ್ರಕಾಶ್ ನಾರಾಯಣ್ ಅವರನ್ನು ಎಲ್ಲ ಸಮಾಜವಾದಿಗಳು ಹಿರಿಯರು, ಕಿರಿಯರು ಎಂಬ ಭೇದವಿಲ್ಲದೆ ಅತ್ಯಂತ ಪ್ರೀತಿಯಿಂದ 'ಜೆ.ಪಿ' ಎಂದೇ ಕರೆಯುತ್ತಿದ್ದರು.

---

*ಶ್ರೀ ಸಮರ್ ಗುಹ ಮಾಜಿ ಸಂಸದ್ ಸದಸ್ಯರು ಮತ್ತು ಮಾಜಿ ಸದಸ್ಯರು

ಸಾಮಾಜಿಕ ಬದಲಾವಣೆಗಳನ್ನು ಕಾರ್ಯರೂಪಕ್ಕೆ ತರಲು ರಾಜಕೀಯ ಅಧಿಕಾರ ಒಂದು ಅತ್ಯವಶ್ಯಕ ಸಾಧನವಾಗಿದೆ ಎಂದು ಎಸ್.ಎಂ. ಅವರು ನಂಬಿದ್ದರು. ಆದರೆ ಅವರು ಸ್ವಪ್ರಯೋಜನಕ್ಕಾಗಿ ಎಂದೂ ಅಧಿಕಾರದ ಹಿಂದೆ ಓಡಿದವರಲ್ಲ. ಎಲ್ಲ ಬಗೆಯ ಸಾಮಾಜಿಕ ಮತ್ತು ರಾಜಕೀಯ ಅನ್ಯಾಯಗಳ ವಿರುದ್ಧದ ಹೋರಾಟವನ್ನು ಸಂಘಟಿಸುವುದರಲ್ಲಿ, ಸಾಮೂಹಿಕ ಚಳವಳಿಗಳನ್ನು ಹೂಡುವುದರಲ್ಲಿ, ಸಾಮೂಹಿಕ ಸಂಘಟನೆಗಳನ್ನು ಸಂಘಟಿಸುವಲ್ಲಿ ಅವರು ಹೆಚ್ಚು ಆಸಕ್ತರಾಗಿದ್ದರು. ಇದರಿಂದ ಅಂತಿಮವಾಗಿ ರಾಜ್ಯಾಧಿಕಾರ ಜನರ ಕೈಗೆ ಬರಲು ಮತ್ತು ನೈಜ ಪ್ರಜಾಸತ್ತಾತ್ಮಕ ಧ್ಯೇಯಗಳಿಗಾಗಿ ಜನರು ಇದನ್ನು ಬಳಸಿಕೊಳ್ಳಲು ಸಹಾಯವಾಗುವುದೆಂದು ಅವರು ದೃಢವಾಗಿ ನಂಬಿದ್ದರು.

ಎಸ್.ಎಂ. ಜೋಶಿಯವರು ಅನೇಕ ಚುನಾವಣೆಗಳಲ್ಲಿ ಹೋರಾಡಿದರು. ಅನೇಕ ಚುನಾವಣೆಗಳನ್ನು ಕಳೆದುಕೊಂಡರು. ಅನೇಕ ಚುನಾವಣೆಗಳನ್ನು ಗೆದ್ದುಕೊಂಡರು. ಪುಣೆಯ ಮಹಾನಗರಪಾಲಿಕೆಯಲ್ಲಿ ಓರ್ವ ಸಮರ್ಥ ಕಾರ್ಪೊರೇಟರ್ ಆಗಿ ಕಾರ್ಯನಿರ್ವಹಿಸಿದರು. ಮಹಾರಾಷ್ಟ್ರ ವಿಧಾನಸಭೆಯಲ್ಲೂ ಹಾಗೂ ಒಮ್ಮೆ ಲೋಕಸಭೆಯಲ್ಲೂ ಪ್ರತಿಪಕ್ಷಗಳ ನಾಯಕರಾಗಿದ್ದರು. ಮಹಾರಾಷ್ಟ್ರ ವಿಧಾನಸಭೆಯಲ್ಲಿ ಅವರು ಸಂಯುಕ್ತ ಮಹಾರಾಷ್ಟ್ರ ಸ್ಥಾಪನೆಗಾಗಿ ಸಂಯುಕ್ತ ಹೋರಾಟ ನಡೆಸುವ ಸಲುವಾಗಿ ಪಿ.ಎಸ್.ಪಿ, ಸಿ.ಪಿ.ಐ, ಪಿ.ಡಬ್ಲ್ಯುಡಿ. ಆರ್.ಪಿ.ಐ ಮತ್ತಿತರ ಪ್ರತಿ ಪಕ್ಷಗಳ ಸಂಯುಕ್ತರಂಗದ ನೇತೃತ್ವ ವಹಿಸಿದ್ದರು. ತಮ್ಮ ಪ್ರಾಮಾಣಿಕತೆ, ನೇರ ನಡೆನುಡಿ, ಧ್ಯೇಯನಿಷ್ಠೆ ಮತ್ತು ಸ್ನೇಹಶೀಲ ಪ್ರವೃತ್ತಿಗಳಿಂದಾಗಿ ಮಹಾರಾಷ್ಟ್ರ ವಿಧಾನಸಭೆಯಲ್ಲಿ ಅವರು ಗಣನೀಯ ಕೊಡುಗೆ ನೀಡಿದರು. ವಿಧಾಸಭೆಯ ಪ್ರತಿಪಕ್ಷದ ನಾಯಕತ್ವ ಸಂಯುಕ್ತರಂಗದ ಎಲ್ಲ ಪಕ್ಷಗಳಿಗೂ ಪರ್ಯಾಯವಾಗಿ ಬರಬೇಕೆಂದು ನಿರ್ಧರಿಸಲಾಯಿತು. ಆಗ ಎಸ್.ಎಂ. ಅವರು ಒಂದೇ ಅವಧಿಗೆ ವಿಧಾನಸಭೆಯ ನಾಯಕರಾಗಿ ಕಾರ್ಯ ನಿರ್ವಹಿಸಿದರು. ಉಳಿದ ಅವಧಿಯುದ್ದಕ್ಕೂ ಪ್ರತಿಯೊಬ್ಬರು ಅವರನ್ನು ನೈತಿಕ ಸ್ಫೂರ್ತಿಯಾಗಿ ಮಾರ್ಗದರ್ಶಕರಾಗಿ ನೋಡುತ್ತಿದ್ದರು. ಸಂಯುಕ್ತ ರಂಗವನ್ನು ಪಕ್ಷಾತೀತ ನೆಲೆಯಲ್ಲಿ ಮುನ್ನಡೆಸುವ ಅವರ ಸಾಮರ್ಥ್ಯದಲ್ಲಿ ಇತರೆಲ್ಲ ಪಕ್ಷಗಳು ನಂಬಿಕೆ ಇಟ್ಟಿದ್ದವು.

1962 ರಲ್ಲಿ ಎಸ್.ಎಂ. ಲೋಕಸಭೆಯಲ್ಲಿ ನನ್ನ ಜೊತೆ ಇದ್ದರು. ಮಹಾರಾಷ್ಟ್ರ ವಿಧಾನಸಭೆಯಲ್ಲಿ ಕಾರ್ಯನಿರ್ವಹಿಸಿ ಅಗಾಧ ಅನುಭವ ಸಂಪಾದಿಸಿದ ಅವರು ಲೋಕಸಭೆ ಗಣ್ಯ ಸಂಸದೀಯ ಪಟು ಎನಿಸಲು ಅಂತಹ ಉತ್ಸಾಹವನ್ನೇನೂ ತೋರಿಸಲಿಲ್ಲ. ಅವರು ಅಂತಹ ದೊಡ್ಡ ಮಾತುಗಾರರಾಗಿಯೇನೂ ಇರಲಿಲ್ಲ. ಅದೇ ವೇಳೆಗೆ ಸಂಸತ್ತಿನಲ್ಲಿ ಜನರನ್ನು ವಾಕಾಡಂಬರದಲ್ಲಿ ಮರುಳುಗೊಳಿಸುವ ಮಾತಿನಲ್ಲೂ ಅವರಿಗೆ ಆಸಕ್ತಿ ಇರಲಿಲ್ಲ.

ಆದರೂ ಎಸ್. ಎಂ. ಅವರು ಸದನದಲ್ಲಿ ಯಾವುದೇ ಪ್ರಮುಖ ವಿಷಯದ ಮೇಲೆ ತಮ್ಮ ಅಭಿಪ್ರಾಯ ಪ್ರಕಟಿಸುವಲ್ಲಿ ತಪ್ಪಿಸಿಕೊಳ್ಳುತ್ತಿರಲಿಲ್ಲ. ಅವರು ಯಾವಾಗಲೂ ಅವರ ಹೃದಯಾಂತರಾಳದಿಂದಲೇ ಮಾತನಾಡುತ್ತಿದ್ದರು. ಮತ್ತು ಯಾವುದೇ ಚರ್ಚೆಯಲ್ಲಿ ಭಾಗವಹಿಸಿದಾಗಲೂ ಅವರ ಅಭಿವ್ಯಕ್ತಿ ತೀಕ್ಷ್ಣ ಸ್ಪಷ್ಟ, ವಾಸ್ತವಕ್ಕೆ ಹತ್ತಿರ ಮತ್ತು ಎಷ್ಟು ಬೇಕೋ ಅಷ್ಟೇ ಇರುತ್ತಿತ್ತು. ಹೋರಾಟಗಾರರಾಗಿ ಅದಾಗಲೇ ತಮ್ಮದ್ದೇ ಆದ ವ್ಯಕ್ತಿತ್ವವನ್ನು ಬೆಳೆಯಿಸಿಕೊಂಡಿದ್ದ ಮತ್ತು ರಾಜಕಾರಣದಲ್ಲಿ ಎಂದೂ ಯಾವುದೇ ತರಹದ ದ್ವಂದ್ವ ನೀತಿಯನ್ನು ಅನುಸರಿಸದೇ ಇದ್ದ ಅವರ ಅಭಿಪ್ರಾಯಗಳನ್ನು ಸದಸ ಹೆಚ್ಚು ಗೌರವದಿಂದ ಆಲಿಸುತ್ತಿತ್ತು. ಇದೇ ಕಾರಣಕ್ಕೆ ಆಗಿನ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ಅವರನ್ನು ಸದಾ ಗೌರವದಿಂದ ಕಾಣುತ್ತಿದ್ದರು.

ಎಸ್.ಎಂ. ಜೋಶಿಯವರು ಹುಟ್ಟು ಹೋರಾಟಗಾರರು. ಕೆಳ ಮಧ್ಯಮ ದರ್ಜೆಯ ಕುಟುಂಬವೊಂದರಿಂದ ಬಂದವರು. ತಮ್ಮ ಶಾಲೆ ಮತ್ತು ಕಾಲೇಜ್ ಶಿಕ್ಷಣವನ್ನು ಪೂರ್ಣಗೊಳಿಸುವುದಕ್ಕೆ ಅವರು ಹೋರಾಡಬೇಕಾಯಿತು. ಅವರು ಶಾಲಾ ದಿನಗಳಲ್ಲೇ ಲೋಕಮಾನ್ಯ ಬಾಲಗಂಗಾಧರ್ ತಿಲಕ್ ಅವರ ತೀವ್ರಗಾಮಿ ರಾಷ್ಟ್ರೀಯವಾದದ ಧ್ಯೇಯಧೋರಣೆಗಳಿಂದ ಸ್ಫೂರ್ತಿ ಪಡೆದಿದ್ದರು. ಹೀಗೆ ಮಹಾರಾಷ್ಟ್ರದ ಸಿಂಹ ಅವರ ದೇಶಾಭಿಮಾನದ ಆರಾಧ್ಯಮೂರ್ತಿಯಾಗಿದ್ದರು. ಕನ್ನಾಟ್ ಡ್ಯೂಕ್ ಅವರು ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅವರನ್ನು ಸ್ವಾಗತಿಸುವ ಸಂಕೇತವಾಗಿ ಬ್ರಿಟಿಷ್ ಬ್ಯಾಡ್ಜವೊಂದನ್ನು ಧರಿಸಬೇಕೆಂಬ ಶಾಲಾ ಆಡಳಿತದ ಆದೇಶವನ್ನು ಅವರು ಉಲ್ಲಂಘಿಸಲು ಅವರ ಈ ದೇಶಾಭಿಮಾನದ ಪ್ರೇರಣೆಯೇ ಕಾರಣವಾಗಿತ್ತು. ಅಂತಹ ಗುಲಾಮಗಿರಿಯ ಮನೋವೃತ್ತಿಗೆ ತಲೆಬಾಗಲು ಅವರು ಎಂದೂ ಸಿದ್ಧರಿರಲಿಲ್ಲ. ಇದರ ಪರಿಣಾಮವಾಗಿ ಅವರು ಶಾಲಾ ಆಡಳಿತದ ತೀವ್ರ ಸ್ವರೂಪದ ಶಿಕ್ಷೆಗೂ ಗುರಿಯಾಗಬೇಕಾಯಿತು. ಕಾಲೇಜಿನಿಂದ ತಮ್ಮ ಆಪ್ತ ಸ್ನೇಹಿತರಾದ ಶ್ರೀ ಎನ್.ಜಿ. ಗೋರೆಯವರೊಂದಿಗೆ ಹೊರಬಂದ ನಂತರದಲ್ಲಿ ಅವರು ಆ ದಿನಗಳಲ್ಲಿ ಭಾರತದ ಸಿಡಿಲಮರಿ ಎನಿಸಿದ್ದ ಸುಭಾಷ್ ಚಂದ್ರ ಬೋಸ್ ಅವರು ನೀಡಿದ ಕರೆಗೆ ಓಗೊಟ್ಟು ಯೂತ್ ಲೀಗ್ ಸಂಘಟನೆಯಲ್ಲಿ ನಿರತರಾದರು. ಜೋಶಿ ಮತ್ತು ಗೋರೆಯವರು 1929 ರಲ್ಲಿ ಪುಣೆಯಲ್ಲಿ ಸಂಘಟಿಸಿದ್ದ ಯುವ ಸಮ್ಮೇಳನದ ಅಧ್ಯಕ್ಷತೆಗೆ ಆಹ್ವಾನಿಸಿದರು. ಎಸ್.ಎಂ. ಜೋಶಿಯವರಿಗೆ ಸುಭಾಷ್ ಚಂದ್ರ ಬೋಸರ ವಿಷಯದಲ್ಲಿ ವಿಶೇಷ ಆದರವಿದ್ದಿತು ಮತ್ತು ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ದೊರೆಯಬೇಕು ಎಂಬ ಅವರ ಸಿದ್ಧಾಂತದಲ್ಲಿ ಅವರು ಸಹಮತರಾಗಿದ್ದರು. ಎಸ್.ಎಂ. ಜೋಶಿಯವರಿಗೆ ವಕೀಲಿ ವೃತ್ತಿ ಮಾಡುವ ಕಾನೂನು ಪದವಿ ಇದ್ದಿತಾದರೂ ಲೋಕಮಾನ್ಯ ಬಾಲಗಂಗಾಧರ ತಿಲಕ್ ಅವರಿಂದ

ಬಳುವಳಿಯಾಗಿ ಪಡೆದಿದ್ದ ತೀವ್ರ ರಾಷ್ಟ್ರವಾದಿ ಸ್ಫೂರ್ತಿಯು ಅವರನ್ನು ಸಂಪೂರ್ಣವಾಗಿ ರಾಷ್ಟ್ರಸೇವೆಗೆ ತೊಡಗಿಸುವಲ್ಲಿ ಕ್ರಿಯಾಶೀಲವಾಯಿತು. ಅವರ ಹೆಂಡತಿ ತಾರಾಬಾಯಿ ಆಗ ಓರ್ವ ಶಾಲಾ ಶಿಕ್ಷಕಿಯಾಗಿದ್ದು ಅವರಿಗೆ ಎಲ್ಲ ರೀತಿಯಲ್ಲೂ ಬೆಂಬಲವಾಗಿದ್ದರು.

ಶ್ರೀಮತಿ ತಾರಾಬಾಯಿಯವರು ಅಸಾಧಾರಣ ರಾಷ್ಟ್ರಾಭಿಮಾನ ಹೊಂದಿದ ಮಹಿಳೆಯಾಗಿದ್ದು ಅವರು ಇಲ್ಲವಾಗಿದ್ದರೆ ಎಸ್. ಎಂ. ಜೋಶಿಯವರು ಸ್ವಾತಂತ್ರ್ಯ ಹೋರಾಟಕ್ಕೆ ಇಷ್ಟೊಂದು ದೊಡ್ಡ ದೇಣಿಗೆಯನ್ನು ನೀಡುವುದು ಮತ್ತು ತಮ್ಮನ್ನು ತಾಯ್ನಾಡಿನ ಸೇವೆಗಾಗಿ ಸಮರ್ಪಿಸಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ.

1930 ರಲ್ಲಿ ಎಸ್. ಎಂ. ಜೋಶಿಯವರು ಮಹಾತ್ಮ ಗಾಂಧೀಜಿ ಅವರು ಹೂಡಿದ ಪೌರ ಐತಿಹಾಸಿಕ ಅಸಹಕಾರ ಚಳವಳಿಯನ್ನು ಸೇರಿದರು. ಅವರು ಮಹಾತ್ಮಾಜಿಯವರ ಅಹಿಂಸಾತ್ಮಕ ಅಸಹಕಾರ ಚಳವಳಿ ಸಂದೇಶವನ್ನು ಹರಡುತ್ತಾ ಮಹಾರಾಷ್ಟ್ರದ ಗ್ರಾಮ ಗ್ರಾಮಗಳಲ್ಲಿ ಸಂಚರಿಸಿದರು. ಈ ಸಂದರ್ಭದಲ್ಲಿ ಅವರು ಎರಡು ಬಾರಿ ಬಂಧಿಸಲ್ಪಟ್ಟು ಸೆರೆಮನೆಯನ್ನು ಸೇರಬೇಕಾಯಿತು. ಮಹಾರಾಷ್ಟ್ರದ ನಾಸಿಕ್ ಸೆರೆಮನೆಯಲ್ಲಿ ಅವರು ಸೆರೆವಾಸ ಅನುಭವಿಸುತ್ತಿದ್ದ ದಿನಗಳಲ್ಲೇ ಅವರು ತಮ್ಮ ಜೊತೆಗಿದ್ದ ಇತರ ಸಮಾನಮಸ್ಕ ರಾಜಕೀಯ ಕೈದಿಗಳ ಸಂಗಾತಿಗಳ ಜೊತೆಗೂಡಿ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ರಚನೆಯ ಪರಿಕಲ್ಪನೆಗೆ ಒಂದು ರೂಪ ಕೊಟ್ಟರು. ಮಹಾತ್ಮ ಗಾಂಧೀಜಿಯವರ ಅಸಹಕಾರ ಚಳುವಳಿ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದು ಕೊಡುವಲ್ಲಿ ವಿಫಲವಾದುದನ್ನು ಗುರುತಿಸಿದ ಕಾಂಗ್ರೆಸ್ ಪಕ್ಷದಲ್ಲಿನ ಅನೇಕ ಯುವಕರು 1930 ರಲ್ಲಿ ಮಧ್ಯಭಾಗದಲ್ಲಿ ಹತಾಶೆಯ ಅಂಚಿಗೆ ಬಂದು ಮುಟ್ಟಿದ್ದರು. ಹೀಗಾಗಿ ಮಹಾತ್ಮ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಿಗೆ ಮಾತ್ರವೇ ಮೀಸಲಾದ ಕಾರ್ಯಭಾರಕ್ಕಿಂತ ಹೊರತಾಗಿ ಸಾಮೂಹಿಕ ಸಂಘಟನೆ ಮತ್ತು ಚಳವಳಿಯ ಪರ್ಯಾಯ ಮಾರ್ಗವೊಂದನ್ನು ಈ ಯುವಕರು ಎದುರು ನೋಡುತ್ತಿದ್ದರು. ಹೀಗೆ ಕಾಂಗ್ರೆಸ್ ಪಕ್ಷದೊಳಗಿನ ತೀವ್ರಗಾಮಿಗಳ ಚಟುವಟಿಕೆಗಳಿಗೆ ಒಂದು ಪರ್ಯಾಯ ವೇದಿಕೆಯಾಗಿ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ ರೂಪುಗೊಂಡಿತು. ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯು ಕ್ಷಿಪ್ರವಾಗಿಯೇ ಬೆಳೆದು ನಿಂತಿತು. 1930 ರ ದಶಕದ ನಂತರದಲ್ಲಿ ಬ್ರಿಟಿಷ್ ಆಧಿಪತ್ಯದ ಭಾರತದ ಉದ್ದಕ್ಕೂ ಎಲ್ಲ ಪ್ರಾಂತಗಳಿಗೂ ಅದರ ಶಾಖೆಗಳು ವಿಸ್ತರಿಸಿದವು.

ಈ ಸಂಘಟನೆಯ ನಾಯಕರು ಮತ್ತು ಸಮಾಜವಾದಿ ಕಾರ್ಯಕರ್ತರು 1942 ರಲ್ಲಿ ಮಹಾತ್ಮ ಗಾಂಧೀಜಿಯವರು ನೀಡಿದ ಕ್ವಿಟ್ ಇಂಡಿಯಾ ಚಳವಳಿಯವರೆಗೆ ಪ್ರತಿ ಸ್ಪಂದಿಸಿ ಮಹೋನ್ನತವಾದ ಪಾತ್ರವನ್ನು ವಹಿಸಿದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಎಲ್ಲ ಧುರೀಣರು ಹಠಾತ್ತಾಗಿ ಬಂಧಿಸಲ್ಪಟ್ಟ ನಂತರದಲ್ಲಂತೂ ಸೆರೆಮನೆಯಿಂದ ಪಲಾಯನ

ಮಾಡಿ ಬಂದ ಜಯಪ್ರಕಾಶ್ ನಾರಾಯಣ್, ಅಚ್ಯುತ್ ಪಟವರ್ಧನ್, ಅರುಣ್ ಅಸಫ್ ಅಲಿ, ರಾಮಮನೋಹರ್ ಲೋಹಿಯಾ, ಎಸ್.ಎಂ. ಜೋಶಿ ಮತ್ತು ಇತರ ಅನೇಕರು ಹೋರಾಟದ ಮಂಚೂಣಿಯಲ್ಲಿ ನಿಂತರು. 1942 ರ ಆಗಸ್ಟ್ ಬಂಡಾಯದಲ್ಲಂತೂ ಅವರು ಅತಿ ಪ್ರಮುಖ ಪಾತ್ರ ವಹಿಸಿದರು. ಎಸ್.ಎಂ. ಜೋಶಿಯವರು ಮಾಡು ಇಲ್ಲವೆ ಮಡಿ ಸಿದ್ಧಾಂತದ ರಾಷ್ಟ್ರೀಯ ಹೋರಾಟವನ್ನು ಸಂಘಟಿಸಲು ಭೂಗತರಾದರು. ಅವರು ಚೆನ್ನಾಗಿ ಉರ್ದು ಮಾತನಾಡಬಲ್ಲವರಾಗಿದ್ದರಿಂದ ಇಮಾಂ ಅಲಿ ಎಂದು ತಮ್ಮ ಹೆಸರನ್ನು ಬದಲಿಸಿಕೊಂಡು ತಮ್ಮ ಕಾರ್ಯಾಚರಣೆಯ ಕೇಂದ್ರವನ್ನು ಮುಂಬಯಿಂದ ಕರಾಚಿಗೆ ಸ್ಥಳಾಂತರಿಸಿದರು. 1943 ರಲ್ಲಿ ಮುಂಬಯಿಯಲ್ಲಿ ಅವರು ಬಂಧಿಸಲ್ಪಟ್ಟ ಸ್ಥಾನಬದ್ಧತೆಗೆ ಒಳಗಾದರು. 1946 ರ ಮಧ್ಯಭಾಗದಲ್ಲಿ ಅವರು ಜೈಲಿನಿಂದ ಬಿಡುಗಡೆ ಹೊಂದಿದರು.

ಎಸ್.ಎಂ. ಜೋಶಿಯವರು ತಮ್ಮ ಎಳೆಯ ವಯಸ್ಸಿನಲ್ಲಿ ಲೋಕಮಾನ್ಯ ಬಾಲಗಂಗಾಧರ್ ತಿಲಕ್ ಅವರ ರಾಷ್ಟ್ರೀಯವಾದದ ಸಿದ್ಧಾಂತದಿಂದ ಗಾಢವಾಗಿ ಪ್ರಭಾವಿತರಾಗಿದ್ದರು. ಅದೇ ವೇಳೆಗೆ ಯುವ ಚಳವಳಿಯನ್ನು ಸಂಘಟಿಸುತ್ತಿದ್ದ ದಿನಗಳಲ್ಲಿ ಸುಭಾಷ್ ಚಂದ್ರ ಬೋಸ್ ಅವರ ಹೋರಾಟದ ದಾರಿಯೂ ಅವರ ಮೇಲೆ ಗಾಢ ಪ್ರಭಾವ ಬೀರಿತ್ತು. ಆದರೆ 1930 ರ ದಶಕದಲ್ಲಿ ಅವರು ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ಅನೇಕ ಸಮಾಜವಾದಿ ಧುರೀಣರ ನಿಕಟ ಸಂಪರ್ಕಕ್ಕೆ ಬಂದಿದ್ದುದರಿಂದ ಎಸ್.ಎಂ. ಜೋಶಿಯವರು ಸೈದ್ಧಾಂತಿಕವಾಗಿ ಆಚಾರ್ಯ ನರೇಂದ್ರದೇವ್ ಮತ್ತು ಜಯಪ್ರಕಾಶ್ ನಾರಾಯಣ್ ಅವರು ಪ್ರತಿಪಾದಿಸುತ್ತಿದ್ದ ಮಾರ್ಕ್ಸ್‌ವಾದಿ ಚಿಂತನೆಗೆ ಹತ್ತಿರವಾದರು. ಈ ಇಬ್ಬರು ಮಹಾನ್ ಸಮಾಜವಾದಿ ನಾಯಕರು ಸಮಾಜವಾದಿ ಸಿದ್ಧಾಂತವನ್ನು ಮಾರ್ಕ್ಸ್ ವಾದದ ಭೂಮಿಕೆಯಲ್ಲಿ ವ್ಯಾಖ್ಯಾನಿಸುತ್ತಿದ್ದರಾದರೂ ಅವರು ಎಂದೂ ಪರಂಪರವಾದಿ ಮಾರ್ಕ್ಸಿಸ್ಟ್‌ಗಳಾಗಿರಲಿಲ್ಲ. ಅವರ ಮುಂದಿದ್ದ ತಕ್ಷಣದ ಆದ್ಯತೆ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಸಾಧಿಸುವುದೇ ಆಗಿತ್ತು. ತಮ್ಮ ಸೈದ್ಧಾಂತಿಕ ವಿಚಾರಧಾರೆಯಲ್ಲಿ ಎಸ್.ಎಂ. ಜೋಶಿಯವರು ಆಚಾರ್ಯ ನರೇಂದ್ರದೇವ್ ಮತ್ತು ಜೆ.ಪಿಯವರ ತತ್ವಗಳಿಗೆ ಪೂರ್ಣವಾಗಿ ನಿಷ್ಠರಾಗಿದ್ದರು. ಆದರೂ ಕೂಡಾ ಅವರು ಎಂದೂ ಸಿದ್ಧಾಂತವಾದಿಯಾಗಲು ಬಯಸಲಿಲ್ಲ ಅಥವಾ ಎಂದೂ ಅವರ ಕಠಿಣ ಸೈದ್ಧಾಂತಿಕ ನಿಲುವಿಗೆ ಅಂಟಿಕೊಂಡವರೂ ಅಲ್ಲ. 1948 ರ ವೇಳೆಗೆ ಜಯಪ್ರಕಾಶ ನಾರಾಯಣ್ ಅವರ ದೃಷ್ಟಿಕೋನದಲ್ಲಿ ಮೂಲಭೂತ ಬದಲಾವಣೆ ಕಾಣಿಸಿಕೊಂಡಿತು. ಸಮಾಜವಾದ ಮತ್ತು ಗಾಂಧೀಜಿಯವರ ಸಿದ್ಧಾಂತಗಳೆರಡನ್ನು ಒಗ್ಗೂಡಿಸಿ ಹೊಸ ಸಿದ್ಧಾಂತವನ್ನು ಅನುಸರಿಸಬೇಕೆಂಬುದು ಅದರ ತಿರುಳಾಗಿತ್ತು. ಕ್ರಮೇಣ ಎಸ್.ಎಂ. ಜೋಶಿಯವರು ಜಯಪ್ರಕಾಶ್ ನಾರಾಯಣ್‌ರವರ ಈ ಹೊಸ ಚಿಂತನೆಯನ್ನು ಅಂಗೀಕರಿಸಿದರು.

ವಾಸ್ತವವಾಗಿ ಜಯಪ್ರಕಾಶ ನಾರಾಯಣ್ ಅವರಂತೆ ಎಸ್.ಎಂ. ಜೋಶಿಯವರು ಗಾಂಧೀಜಿಯವರು ಪ್ರತಿಪಾದಿಸಿದ ರಾಜಕೀಯ ಮೌಲ್ಯಗಳು ಮತ್ತು ಸಮುದಾಯ ಸಂಘಟನೆಗಳ ಮಾರ್ಗದತ್ತ ಹೆಚ್ಚು ಹೆಚ್ಚು ಆಕರ್ಷಿತರಾಗುತ್ತಾ ಬಂದರು. ಜನರ ಸೇವೆ ಮಾಡಲು ನಿಜವಾಗಿಯೂ ಆಸಕ್ತನಾಗಿರುವ ಮತ್ತು ಜನನಾಯಕನಾಗ ಬಯಸುವ ಯಾವನೇ ಓರ್ವ ಪ್ರಾಮಾಣಿಕ ರಾಜಕಾರಣಿಯಾಗಲು ಯಾವುದೇ ಬಗೆಯ ದ್ವಂದ್ವ ಮೌಲ್ಯಗಳನ್ನು ಅನುಸರಿಸಬಾರದು ಮತ್ತು ಅಂತಹ ನಾಯಕರು ಖಾಸಗಿ ನೆಲೆಯಲ್ಲಿ ಒಂದು ಮತ್ತು ಸಾರ್ವಜನಿಕ ನೆಲೆಯಲ್ಲಿ ಇನ್ನೊಂದು ಮೌಲ್ಯ ಹೊಂದಿರಬಾರದೆಂದು ದೃಢವಾಗಿ ನಂಬಿದ್ದರು. ಇಂತಹ ಉದಾತ್ತ ವ್ಯಕ್ತಿತ್ವ ಚಾರಿತ್ರ್ಯಗಳಿಂದಾಗಿ ಎಸ್.ಎಂ. ಜೋಶಿಯವರು ಎಲ್ಲ ರಾಜಕಾರಣಿಗಳು ಮತ್ತು ಮಹಾರಾಷ್ಟ್ರದ ಜನತೆಯ ಸಾರ್ವತ್ರಿಕ ಗೌರವಕ್ಕೆ ಪಾತ್ರರಾದರು.

ಬ್ರಿಟಿಷರ ಆಳ್ವಿಕೆಯ ದಿನಗಳಲ್ಲಿ ಎಸ್.ಎಂ. ಜೋಶಿಯವರು ಅನೇಕ ಹೋರಾಟಗಳಲ್ಲಿ ಭಾಗವಹಿಸಿದ್ದರು. ಗೋವಾ ವಿಮೋಚನಾ ಚಳವಳಿಯಲ್ಲೂ ಅವರು ಪ್ರಮುಖ ವ್ಯಕ್ತಿಯಾಗಿದ್ದರು. ಆದರೆ ಸಂಯುಕ್ತ ಮಹಾರಾಷ್ಟ್ರ ಚಳವಳಿಯಲ್ಲಿ ವಹಿಸಿದ ಪಾತ್ರವು ಅವರಿಗೆ ಮಹಾರಾಷ್ಟ್ರದ ಅತಿ ಗಣ್ಯ ನಾಯಕನೆಂಬ ಮಾನ್ಯತೆಯನ್ನು ತಂದುಕೊಟ್ಟಿತು. ಈ ಚಳವಳಿಗೆ ಅವರು ನೀಡಿದ ಮಹತ್ತರ ಕೊಡುಗೆಯಿಂದಾಗಿಯೇ ಅವರನ್ನು ಸಂಯುಕ್ತ ಮಹಾರಾಷ್ಟ್ರ ಸಮಿತಿಯ ಕಾರ್ಯದರ್ಶಿಯಾಗಿ ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಪ್ರಜಾ ಸೋಷಲಿಸ್ಟ್ ಪಾರ್ಟಿ, ಕಾರ್ಮಿಕರು ಮತ್ತು ರೈತರ ಪಕ್ಷ, ಕಮ್ಯುನಿಸ್ಟ್ ಪಕ್ಷ, ರಿಪಬ್ಲಿಕನ್ ಪಕ್ಷ ಮತ್ತು ಇತರ ಅನೇಕ ಸಂಘಟನೆಗಳು ಈ ಸಮಿತಿಯಲ್ಲಿದ್ದವು. ಈ ಎಲ್ಲ ಸಂಘಟನೆಗಳಿಗೂ ಜೋಶಿಯವರ ಬಗ್ಗೆ ಅಗಾಧ ವಿಶ್ವಾಸ. ಅದೇ ವೇಳೆಗೆ ಅವರ ಪಕ್ಷಾತೀತ ದೃಷ್ಟಿಕೋನ ಮತ್ತು ಉದಾರ ಮನಸ್ಥಿತಿ ಅದಕ್ಕೆ ಕಾರಣವಾಗಿತ್ತು. ಎಸ್.ಎಂ. ಜೋಶಿಯವರು ಈ ಸಂಯುಕ್ತ ರಂಗ ಚಳವಳಿಯನ್ನು ಒಂದು ನೈಜ ಜನತಾ ಚಳವಳಿಯಾಗಿ ಪರಿವರ್ತಿಸುವಲ್ಲಿ ಯಶಸ್ವಿಯಾದರು. ಮಹಾರಾಷ್ಟ್ರದ ಎಲ್ಲ ಜನ ವರ್ಗಗಳು ಸ್ವಯಂಪ್ರೇರಣೆಯಿಂದ ಈ ಸಂಘಟನೆಯಲ್ಲಿ ಪಾಲ್ಗೊಳ್ಳುವಂತೆ ಅವರು ಪ್ರೇರೇಪಿಸಿದರು. ಪ್ರಸ್ತಾಪಿತ ಮಹಾರಾಷ್ಟ್ರ ರಾಜ್ಯದಲ್ಲಿ ಮುಂಬಯಿಯನ್ನು ಸೇರಿಸುವುದು ಅತ್ಯಂತ ಅಪಾಯಕಾರಿಯಾಗಿತ್ತು. ಏಕೆಂದರೆ ಮುಂಬಯಿಯಲ್ಲಿ ಮಹಾರಾಷ್ಟ್ರೀಯರು ಮತ್ತು ಗುಜರಾತಿಗಳು ಸರಿಸಮ ಪ್ರಮಾಣದಲ್ಲಿದ್ದರು. ಈ ಚಳವಳಿಗೆ ವೇಗ ದೊರೆಯುತ್ತಾ ಹೋದಂತೆ ಮುಂಬಯಿಯಲ್ಲಿ ಅತ್ಯಂತ ಸ್ಫೋಟಕವಾದ ಪರಿಸ್ಥಿತಿ ನಿರ್ಮಾಣವಾಯಿತು. ಅದು ಮಹಾರಾಷ್ಟ್ರೀಯನ್ನರು ಮತ್ತು ಗುಜರಾತಿಗಳ ಮಧ್ಯೆ ಗಂಭೀರ ಸ್ವರೂಪದ ಹಿಂಸಾಚಾರಕ್ಕೆ ಎಡೆಮಾಡಿಕೊಡುವ

ಅಪಾಯವೂ ಅಲ್ಲಿತ್ತು. ಎಸ್.ಎಂ. ಜೋಶಿಯವರ ಮಾನವೀಯ ದೃಷ್ಟಿಕೋನ ಮತ್ತು ಮುಂಬಯಿಯ ಎಲ್ಲ ಪೌರರಿಗೆ ಮೊದಲೇ ಪರಿಚಿತವಾಗಿದ್ದ ಅವರ ದೇಶಾಭಿಮಾನ ಮತ್ತು ಗುಜರಾತಿಗಳ ಸುರಕ್ಷತೆ ಮತ್ತು ಭದ್ರತೆ ಬಗ್ಗೆ ಅವರಲ್ಲಿದ್ದ ಕಾಳಜಿ ಮಂಬಯಿ ಒಂದು ಭಾಷಾ ಸಂಬಂಧಿ ದಂಗೆಗೆ ಈಡಾಗುವುದನ್ನು ತಪ್ಪಿಸಿತು ಎಂದು ಧಾರಾಳವಾಗಿ ಹೇಳಬಹುದು. ಇಂದಿನ ಮತ್ತು ಭಾವಿ ಪೀಳಿಗೆಯವರು ಇಂದಿನ ಸಂಯುಕ್ತ ಮಹಾರಾಷ್ಟ್ರದ ಶಿಲ್ಪಿಗಳಲ್ಲಿ ಒಬ್ಬರೆಂದು ಎಸ್.ಎಂ. ಅವರನ್ನು ಚಿರಕಾಲ ಸ್ಮರಿಸುವರು.

ಎಸ್.ಎಂ. ಜೋಶಿಯವರು ತಮ್ಮ ಜೀವನವನ್ನು ಹೋರಾಟ ಮತ್ತು ಬಲಿದಾನಗಳಿಗಾಗಿಯೇ ಮೀಸಲಿಟ್ಟರು ಮತ್ತು ಪ್ರತಿಯೊಂದು ಹೋರಾಟದಲ್ಲಿಯೂ ತಮ್ಮ ದೃಢಸಂಕಲ್ಪ ಮತ್ತು ಹಿರಿಮೆಯನ್ನು ತೋರಿಸಿದರು. ಆದರೆ ಅವರು ಬರಿ ಹೋರಾಟಗಾರರಾಗಿಯೇ ಮಾತ್ರವೇ ಉಳಿಯುವುದಿಲ್ಲ. ಅವರು ರಚನಾತ್ಮಕ ಕಾರ್ಯಗಳಲ್ಲೂ ಅತೀವ ಆಸಕ್ತಿಯನ್ನು ತಾಳಿದ್ದರು. ರಕ್ಷಣಾ ಕಾರ್ಮಿಕರು ಕೂಟದ ಅಧ್ಯಕ್ಷರಾಗಿ ಎಸ್.ಎಂ. ಅವರು ಅಗ್ರಗಣ್ಯ ಕಾರ್ಮಿಕ ನೇತಾರರಲ್ಲಿ ಒಬ್ಬರಾಗಿ ಹೊರಹೊಮ್ಮಿದ್ದರು. ಅಂಚೆ ಮತ್ತು ತಂತಿ ಇಲಾಖೆ ನೌಕರರ ಒಕ್ಕೂಟ ಮತ್ತು ಇತರ ಕಾರ್ಮಿಕ ಸಂಘಟನೆಗಳಲ್ಲೂ ಅವರು ಭಾಗಿಯಾಗಿದ್ದರು. ಈ ಸಾರ್ವಜನಿಕ ಕ್ಷೇತ್ರದ ಸಂಸ್ಥೆಗಳಲ್ಲಿ ಅನೇಕ ಯಶಸ್ವಿ ಮುಷ್ಕರಗಳನ್ನು ಹೋರಾಟಗಳನ್ನು ಅವರು ಸಂಘಟಿಸಿದರು. ಅದೇನಿದ್ದರೂ ಎಸ್.ಎಂ. ಅವರು ವೃತ್ತಿಪರ ಕಾರ್ಮಿಕ ನಾಯಕರಾಗಿರಲಿಲ್ಲ. ಆಸ್ಪತ್ರೆ ಸೇವೆಗಳು, ಅಧ್ಯಾಪನ ವೃತ್ತಿ ಮತ್ತಿತರ ಕ್ಷೇತ್ರಗಳಲ್ಲಿ ಮುಷ್ಕರದ ದಾರಿಯನ್ನು ಅವರು ಎಂದೂ ಒಪ್ಪಿರಲಿಲ್ಲ. ಎಸ್.ಎಂ. ಜೋಶಿಯವರಿಗೆ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಅವರು ತಮ್ಮನ್ನು ತೊಗಿಸಿಕೊಂಡಿದ್ದರು. ಅದೇ ರೀತಿ ಲೋಕನಾಯಕ ಜಯಪ್ರಕಾಶ್ ನಾರಾಯಣ್ ಅವರ ಸಂಘಟನೆಗಳಲ್ಲಿ ಅವರು ಸಕ್ರಿಯರಾಗಿದ್ದರು. ಮಹಾರಾಷ್ಟ್ರದಲ್ಲಿ ರಾಷ್ಟ್ರೀಯ ಸೇವಾದಳ (ಆರ್.ಎಸ್. ಡಿ) ದಂತಹ ಸಮಾಜ ಸೇವಾ ಸಂಘಟನೆ ಕಟ್ಟುವ ದಿಸೆಯಲ್ಲಿ ಜೋಶಿಯವರ ಈ ವಿಶೇಷವಾದ ಒಲವು ಮತ್ತು ಪರಿಣತಿ ಕಂಡು ಬಂದಿತು. ಮಹಾರಾಷ್ಟ್ರದ ಮಣ್ಣಿನಲ್ಲಿ ಆಳವಾಗಿ ಬೇರು ಬಿಟ್ಟಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಎಳವೆಯ ದಿನಗಳಲ್ಲಿ ಎಸ್.ಎಂ. ಅವರನ್ನು ಆಕರ್ಷಿಸಿತಾದರೂ ಹಿಂದೂಗಳಲ್ಲದವರನ್ನು ಸಂಘದೊಳಕ್ಕೆ ಸೇರಿಸಿಕೊಳ್ಳಲು ನಿರಾಕರಿಸುತ್ತಿದ್ದದ್ದೇ ಅವರು ಆರ್.ಎಸ್. ಎಸ್. ನಿಂದ ದೂರ ಸರಿಯಲು ಕಾರಣವಾಯಿತು. ಈ ಹಿನ್ನೆಲೆಯಲ್ಲಿ ಮಹಾರಾಷ್ಟ್ರದ ಎಲ್ಲ ಜನಸಮುದಾಯಗಳಿಗೆ ಅವಕಾಶ ನೀಡುವ ರಾಷ್ಟ್ರೀಯವಾದಿ ಸ್ವಯಂ ಸೇವಕರ ಸಂಘಟನೆಯೊಂದನ್ನು ಕಟ್ಟಲು ಅವರು ನಿರ್ಧರಿಸಿದರು. ಮಹಾರಾಷ್ಟ್ರದ ಹಿಂದೂಗಳ ಸಮುದಾಯದಲ್ಲಿದ್ದ ಮತಾಂಧತೆ ಮತ್ತು ಅಂಥ ಸಂಪ್ರದಾಯವನ್ನು ವಿಮುಕ್ತಗೊಳಿಸಲು ಈ ಸಂಘಟನೆ ಅವಶ್ಯವಾಗಿತ್ತು ಎಂಬುದನ್ನು ಅವರು ಅರಿತುಕೊಂಡಿದ್ದರು. ಇಂತಹ

ಸ್ವಯಂಸೇವಕರ ಸಂಘಟನೆಯೊಂದನ್ನು ಸ್ಥಾಪಿಸುವಲ್ಲಿ ಅವರು ಯಶಸ್ವಿಯಾದುದು ಮಾತ್ರವಲ್ಲ. ಅಂತಹ ಸಂಘಟನೆಗೆ ಮಹಾರಾಷ್ಟ್ರದ ಯುವ ಸಮುದಾಯದಿಂದ ಉತ್ತಮ ಪ್ರತಿಕ್ರಿಯೆಯೂ ಬಂದಿತು. ರಾಷ್ಟ್ರೀಯ ಸೇವಾದಳ ಎಂದು ಹೆಸರಾಗಿದ್ದ ಈ ಸ್ವಯಂಸೇವಕರ ಸಂಘಟನೆಯು ಇಂದಿಗೂ ಮಹಾರಾಷ್ಟ್ರದಲ್ಲಿ ಸಕ್ರಿಯವಾಗಿದೆ. ಅದೇ ರೀತಿ ಎಸ್. ಎಂ. ಜೋಶಿಯವರು ಅದರ ಪ್ರಮುಖ ಶಿಲ್ಪಿಗಳಲ್ಲಿ ಒಬ್ಬರೆಂದು ಮಾನ್ಯರಾಗಿದ್ದಾರೆ.

ಎಸ್.ಎಂ. ಜೋಶಿಯವರು ಉಚ್ಚ ಜಾತಿಗಳಲ್ಲಿ ಒಂದಾದ ಚಿತ್ಪಾವನ ಬ್ರಾಹ್ಮಣ ಸಮುದಾಯದಲ್ಲಿ ಜನಿಸಿದ್ದರು. ಈ ಸಂಪ್ರದಾಯವಾದಿ ಸಮುದಾಯವು ಮಹಾರಾಷ್ಟ್ರದ ಸಾಮಾಜಿಕ ಜೀವನದಲ್ಲಿ ಅತ್ಯುನ್ನತ ಸ್ಥಾನವನ್ನು ಪಡೆದಿತ್ತು. ಆದರೆ ಎಸ್.ಎಂ. ಜೋಶಿಯವರು ಹಿಂದುಳಿದವರು ಮತ್ತು ನಿಮ್ನ ವರ್ಗದವರ ಸಾಮಾಜಿಕ ಮತ್ತು ಆರ್ಥಿಕ ಹಕ್ಕುಗಳಿಗಾಗಿ ಹೋರಾಡಿ ಅಂಥವರೊಂದಿಗೆ ತಮ್ಮನ್ನು ಗುರುತಿಸಿಕೊಂಡರು. ಚಿಕ್ಕಂದಿನಲ್ಲಿಯೇ ಪುಣೆಯ ಸುಪ್ರಸಿದ್ಧ ಪರ್ವತಿ ದೇವಸ್ಥಾನಕ್ಕೆ ಹರಿಜನರಿಗೆ ಮುಕ್ತಾವಕಾಶ ನೀಡಬೇಕೆಂಬ ಹೋರಾಟದಲ್ಲಿ ಅವರು ಸಕ್ರಿಯವಾಗಿ ಪಾಲ್ಗೊಂಡರು. 1960 ರದಶಕದಲ್ಲಿ ಜೋಶಿಯವರು ಡಾ. ರಾಮಮನೋಹರ ಲೋಹಿಯಾ ಅವರ ಸಮಾಜವಾದಿ ಸಿದ್ಧಾಂತವನ್ನು ಸಂಪೂರ್ಣವಾಗಿ ಬೆಂಬಲಿಸಿದರು. ಹಿಂದುಳಿದ ವರ್ಗದವರು, ಪರಿಶಿಷ್ಟ ಜಾತಿಯವರು, ಆದಿವಾಸಿಗಳು ಮತ್ತು ಮಹಿಳೆಯರಿಗೆ ಅಂದಿನ ಭಾರತೀಯ ಸಮಾಜದಲ್ಲಿ ಅಂಟಿಕೊಂಡಿದ್ದ ಸಾಮಾಜಿಕ-ಆರ್ಥಿಕ ಅಸಮಾನತೆಗಳನ್ನು ನಿವಾರಿಸಲು ಅವರಿಗೆ ಆದ್ಯತೆಯ ಮೇರೆಗೆ ಅವಕಾಶ ಕಲ್ಪಿಸಿಕೊಡಬೇಕೆಂದು ಡಾ. ಲೋಹಿಯಾ ಅವರ ಸಿದ್ಧಾಂತವನ್ನು ಅವರು ಸಂಪೂರ್ಣವಾಗಿ ಅಂಗೀಕರಿಸಿದರು. ಮರಾಠವಾಡ ವಿಶ್ವವಿದ್ಯಾಲಯಕ್ಕೆ ಡಾ. ಅಂಬೇಡ್ಕರ್ ಮರಾಠವಾಡ ವಿಶ್ವವಿದ್ಯಾಲಯ ಎಂದು ಪುನರ್ ನಾಮಕರಣ ನಡೆಯಬೇಕೆಂದು ಇದ್ದ ಬೇಡಿಕೆಗೂ ಜೋಶಿಯವರು ಬೆಂಬಲವಾಗಿ ನಿಂತರು. ಈ ಸಂಬಂಧದಲ್ಲಿ ಮಹಾರಾಷ್ಟ್ರದ ಪರಂಪರವಾದಿ ಮೇಲ್ಜಾತಿಯ ಜನರಿಂದ ಬಂದ ವಿರೋಧವನ್ನು ಲಕ್ಷಿಸದೆ ಹರಿಜನರ ಉದ್ಧಾರಕ್ಕಾಗಿ ಮಹಾನ್ ಹೋರಾಟ ನಡೆಸಿದ ಡಾ. ಅಂಬೇಡ್ಕರ್ ಅವರ ಗೌರವಾರ್ಥ ವಿಶ್ವವಿದ್ಯಾಲಯದ ಹೆಸರು ಬದಲಿಸುವ ಚಳವಳಿಗೆ ಬೆಂಬಲ ಇತ್ತರು. ಡಾ. ಅಂಬೇಡ್ಕರ್ ಅವರು ಹಿಂದೂ ಸಮಾಜದ ನಿಮ್ನ ವರ್ಗೀಯರ ಸಾಮಾಜಿಕ, ರಾಜಕೀಯ ಆಶೋತ್ತರಗಳಿಗೆ ಸಂಕೇತವಾಗಿ ನಿಂತರವರು ಎಂಬುದು ಇಲ್ಲಿ ಗಮನಾರ್ಹ.

ಎಸ್.ಎಂ. ಜೋಶಿಯವರು ನನಗೆ ವೈಯಕ್ತಿಕವಾಗಿ ಪರಿಚಯವಾಗುವುದಕ್ಕೆ ಮೊದಲೇ ಅಂದರೆ ನಮ್ಮ ಫಾರ್ವರ್ಡ್ ಬ್ಲಾಕ್ ಪ್ರಜಾಸೋಷಲಿಸ್ಟ್ ಪಾರ್ಟಿ (ಪಿ ಎಸ್ ಪಿ) ಯೊಂದಿಗೆ ವಿಲೀನಗೊಂಡಾಗ ನಾನು ಆಗಾಗ ಜಯಪ್ರಕಾಶ್‌ಜಿ ಅವರನ್ನು ಭೇಟಿಯಾಗುವ ಸಂದರ್ಭಗಳು ಒದಗುತ್ತಿದ್ದವು. ಆಗ ಜೆ.ಪಿ. ಯವರು ಹೊಸ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಆಗ ನಾನು ಸಮಾಜವಾದಿ ನಾಯಕರ ವೈಯಕ್ತಿಕ ಸ್ವಭಾವ - ನಡವಳಿಕೆಗಳ ಬಗ್ಗೆ ಜೆ.ಪಿ. ಅವರಿಂದ ಸಾಧ್ಯವಾದಷ್ಟು ಮಟ್ಟಿಗೆ ಮಾಹಿತಿ ಪಡೆಯಲು ಯತ್ನಿಸುತ್ತಿದ್ದೆ. ಆಗ ಜೆ.ಪಿ. ಯವರು ನನಗೆ ಎಸ್.ಎಂ. ಅವರ ಬಗ್ಗೆ, ಅವರ ಪಾರದರ್ಶಕ ಜೀವನದ ಬಗ್ಗೆ, ಅವರ ಪ್ರಾಮಾಣಿಕತೆಯ ಬಗ್ಗೆ ಮತ್ತು ರಾಜನೈತಿಕತೆಯ ಬಗ್ಗೆ, ಅವರಲ್ಲಿದ್ದ ನಿಷ್ಠೆಯ ಬಗ್ಗೆ ವಿವರವಾಗಿ ಹೇಳುತ್ತಿದ್ದರು. ಇದಾದ ನಂತರ ನಾನು ಎಸ್.ಎಂ. ಜೋಶಿಯವರನ್ನು ಭೇಟಿಯಾದೆ. ಸುಮಾರು ಮೂರು ದಶಕಗಳ ಕಾಲ ಅವರೊಂದಿಗೆ ಕೆಲಸ ಮಾಡುವ ಅವಕಾಶ ನನಗೆ ದೊರೆಯಿತು. ಎಸ್.ಎಂ. ಅವರ ಬಗ್ಗೆ ಅವರ ವ್ಯಕ್ತಿತ್ವದ ಬಗ್ಗೆ ಜೋಶಿಯವರು ಮಾಡಿದ್ದ ಮೌಲ್ಯಮಾಪನ ಎಷ್ಟೊಂದು ಸಮರ್ಪಕ ಎಂಬುದು ಆಗ ನನಗೆ ಅರಿವಾಯಿತು. ಎಸ್.ಎಂ. ಜೋಶಿಯವರು ಲೋಕನಾಯಕ ಜಯಪ್ರಕಾಶ್ ನಾರಾಯಣ್ ಅವರ ಅತ್ಯಂತ ನಿಕಟವರ್ತಿ ಹಾಗೂ ಅತ್ಯಂತ ವಿಶ್ವಾಸಪಾತ್ರ ಸಂಗಾತಿಗಳಲ್ಲಿ ಒಬ್ಬರಾಗಿದ್ದರು. ನಿಜ, ಎಸ್.ಎಂ. ಜೋಶಿಯವರು ಒಂದು ನಿರ್ದಿಷ್ಟ ರಾಜಕೀಯ ಪಕ್ಷಕ್ಕೆ ಸೇರಿದವರಾಗಿದ್ದರು. ಆದರೆ ರಾಜಕಾರಣದಲ್ಲಿ ಅವರ ನಿಲುವು ಧೋರಣೆಗಳು ಅವರು ನಿಜವಾದ ಜನನಾಯಕನೆಂಬುದನ್ನು ತೋರಿಸಿಕೊಟ್ಟವು.

## ಅಧ್ಯಾಯ - 10

## ಎಸ್.ಎಂ. ಜೋಶಿ - ಸಾಮಾಜಿಕ ನ್ಯಾಯದ ನಿರ್ಭೀತ ಹೋರಾಟಗಾರ

*ರಾಜೇಂದ್ರ ಸಿಂಗ್ ಸ್ವಾರೋ

ಶ್ರೀ ಶ್ರೀಧರ ಮಹಾದೇವ ಜೋಶಿ ಅವರು ನಮ್ಮೆಲ್ಲರಿಗೂ ಎಸ್.ಎಂ. ಎಂದೇ ಪರಿಚಿತರಾದವರು. ಅವರು 1904ರ ನವೆಂಬರ್ 12 ರಂದು ಪುಣೆ ಜಿಲ್ಲೆಯ ಜುನ್ನಾರ್‌ನಲ್ಲಿ ಜನಿಸಿದರು. ಅವರು ಚಿತ್ಪಾವನ ಬ್ರಾಹ್ಮಣ ಸಮುದಾಯದ ಕೆಳ ಮಧ್ಯಮ ದರ್ಜೆಯ ಕುಟುಂಬವೊಂದಕ್ಕೆ ಸೇರಿದವರಾಗಿದ್ದರು. ತಂದೆ ಜುನ್ನಾರ್‌ನ ನ್ಯಾಯಾಲಯದಲ್ಲಿ ಗುಮಾಸ್ತರಾಗಿದ್ದರು. ಎಸ್.ಎಂ. ತೀರಾ ಚಿಕ್ಕವರಿದ್ದಾಗಲೇ ಅವರು ನಿಧನ ಹೊಂದಿದರು. ವಾಸ್ತವವಾಗಿ ಶ್ರೀ ಜೋಶಿಯವರು ತಮ್ಮ ನೆರೆಹೊರೆಯ ಬಡತನದ ವಾತಾವರಣದಿಂದಲೇ ಸ್ಫೂರ್ತಿಯನ್ನು ಪಡೆದುಕೊಂಡರು. ಅವರ ಭಾವೀ ಜೀವನದಲ್ಲಿ ಅದು ಅವರನ್ನು ಅತ್ಯಂತ ಬಲಿಷ್ಟ ವ್ಯಕ್ತಿಯನ್ನಾಗಿ ಮಾಡಿತು. ತಮ್ಮ ಎಳವೆಯ ದಿನಗಳಿಂದಲೇ ಅವರು ಸಾಮಾಜಿಕ ನ್ಯಾಯದ ಓರ್ವ ನಿರ್ಭೀತ ಹೋರಾಟಗಾರರಾಗಿ ರಾಜಕೀಯ ಕ್ರಾಂತಿಕಾರಿಯಾಗಿ ಮೇಲೆದ್ದು ಬಂದರು. ಚಿಕ್ಕಂದಿನಿಂದಲೇ ಮನಸ್ಸಿನ ಮೇಲಾದ ಸಂಸ್ಕಾರದಿಂದ ಅವರು ಈ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದರು. ತೀರಾ ಚಿಕ್ಕ ವಯಸ್ಸಿನಲ್ಲೇ ಅವರು ದೇಶದಲ್ಲಿನ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿಬಿಟ್ಟರು. ಸ್ವತಂತ್ರ ಭಾರತದಲ್ಲಿ ಅಧಿಕಾರಕ್ಕಾಗಿ ಹಾತೊರೆಯದೆ ಸಮಾಜದ ದುರ್ಬಲ ವರ್ಗಗಳ ಹಿತರಕ್ಷಣೆಗಾಗಿ ಮುಂಚೂಣಿಯಲ್ಲಿ ನಿಂತರು. ಅವರು ಸುಪ್ರಸಿದ್ಧ ರಾಜಕೀಯ ನೇತಾರರಾಗಿದ್ದರು. ಮಹಾನ್ ಕಾರ್ಮಿಕ ನಾಯಕರಾಗಿದ್ದರು. ಅದಕ್ಕಿಂತಲೂ ಮಿಗಿಲಾಗಿ ಮಾನವತಾವಾದಕ್ಕೆ ತಮ್ಮನ್ನು ಅರ್ಪಿಸಿಕೊಂಡ ಓರ್ವ ಆದರ್ಶವಾದಿಯಾಗಿದ್ದರು. ಆಳೆತ್ತರದ, ತೆಳ್ಳನೆಯ ಎಸ್.ಎಂ. ಅವರ ವ್ಯಕ್ತಿತ್ವ ಸುಮಾರು ಐದು ದಶಕಗಳ ಕಾಲ ದೇಶದಲ್ಲಿನ ಸಮಾಜವಾದಿ ಚಳವಳಿಯ ಸಂಕೇತವಾಗಿ ನಿಂತಿತು.

ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಪದವಿ ಶಿಕ್ಷಣ ಪೂರೈಸಿ ಹೊರಬರುವ ವೇಳೆಗೆ ಶ್ರೀ ಜೋಶಿಯವರಲ್ಲಿ ದೇಶಾಭಿಮಾನದ ಕಿಚ್ಚು ಹತ್ತಿಕೊಂಡಿತ್ತು. ರಾಷ್ಟ್ರಪಿತನ ಕರೆಗೆ ಓಗೊಟ್ಟು ರಾಷ್ಟ್ರಸೇವೆಗಾಗಿ ತಮ್ಮನ್ನು ಅರ್ಪಿಸಿಕೊಳ್ಳಲು ಸನ್ನದ್ಧರಾದರು. ಹೀಗೆ ಅವರು ಸ್ವಾತಂತ್ರ್ಯ ಹೋರಾಟಕ್ಕೆ ಅಣಿಯಾದರು. 1930 ಮತ್ತು 1939 ರ ಮಧ್ಯೆ ಶ್ರೀ ಜೋಶಿಯವರು ಹಲವು ಸಲ ಸೆರೆಮನೆವಾಸದ ಶಿಕ್ಷೆಗೂ ಗುರಿಯಾದರು. ಅದೇ ವೇಳೆಗೆ ಸಂಯುಕ್ತ ಮಹಾರಾಟ್ರದ ಸ್ಥಾಪನೆಗಾಗಿನ ಹೋರಾಟಕ್ಕೂ ಮುಂದಾದರು. ಸಂಯುಕ್ತ ಮಹಾರಾಷ್ಟ್ರ ಸಮಿತಿಯ ನೇತೃತ್ವವು ಅವರ ಪಾಲಿಗೆ ಬಂದಿತು. ಎಸ್.ಎಂ.

* ಮೇಜರ್ ಜನರಲ್ ರಾಜೇಂದರ್ ಸಿಂಗ್ ಸ್ವಾರೋ ಅವರು ಮಾಜಿ ಸಂಸತ್ ಸದಸ್ಯರು

ಜೋಶಿ ಒಳಗೊಂಡಂತೆ ತರುಣ ಸಮಾಜವಾದಿಗಳ ಗುಂಪು 1937ರಲ್ಲಿ ಕಾಂಗ್ರೆಸ್ ಅಧಿಕಾರಕ್ಕೆ ಬರುವುದನ್ನು ವಿರೋಧಿಸಿತು. ಅದೇ ವೇಳೆಯಲ್ಲಿ ಪುರೋಗಾಮಿ ಒಕ್ಕಲುತನ ಶಾಸನವನ್ನು ಜಾರಿಗೆ ತರುವಂತೆ ಒತ್ತಾಯಿಸಿ ರೈತರ ಮೋರ್ಚಾ ಸಂಘಟಿಸಿದರು. 1939 ರಲ್ಲಿ ವಾಮ ಪಂಥೀಯರ ಏಕತೆಯ ಘೋಷಣೆ ಜನಪ್ರಿಯವಾಯಿತು. ಆದರೆ ಸಂಯುಕ್ತ ರಂಗ ರಾಜಕೀಯದ ಫಲವಾಗಿ ಕಾಂಗ್ರೆಸ್ ಸೋಷಲಿಸ್ಟ್‌ಗಳು ಭಾರೀ ಪಡಿಪಾಟಲು ಅನುಭವಿಸಬೇಕಾಯಿತು.

ಜೋಶಿಯವರಿಗೆ ವಿವಾಹವಾಗಲು ಮನಸ್ಸಿಲ್ಲದಿದ್ದರೂ ಕು. ತಾರಾ ಪೆಂಡ್ಸೆ ಅವರನ್ನು ಮದುವೆಯಾಗಲು ಮುಂದೆ ಬಂದರು. ತಾರಾ ಹೆಣ್ಣು ಮಕ್ಕಳ ಶಾಲೆಯೊಂದರಲ್ಲಿ ಅಧ್ಯಾಪಕಿಯಾಗಿದ್ದರು. ಹಲವು ವರ್ಷಗಳ ಕಾಲ ಆಕೆ ಜೋಶಿಯವರ ಸಾಮಾಜಿಕ, ರಾಜಕೀಯ ಚಟುವಟಿಕೆಗಳಲ್ಲಿ ಅವರು ಸಂಗಾತಿಯಾಗಿದ್ದರು. ಅಂತೂ ಇಂತೂ 1939 ರಲ್ಲಿ ಅವರಿಬ್ಬರು ವಿವಾಹವಾದರು. ಜೋಶಿಯವರ ಎಲ್ಲ ರಾಜಕೀಯ ಚಟುವಟಿಕೆಗಳಲ್ಲಿ ಆಕೆ ಬೆಂಬಲವಾಗಿ ನಿಂತರು.

1942ರಲ್ಲಿ ಜೋಶಿಯವರು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. 1943ರಲ್ಲಿ ಭೂಗತರಾಗಿದ್ದಾಗ ಬ್ರಿಟಿಷ್ ಆಡಳಿತದ ವಿರುದ್ಧ ಒಳಸಂಚು ನಡೆಸಿದ ಆರೋಪದ ಮೇರೆಗೆ ಇತರ ಸಮಾಜವಾದಿ ಮಿತ್ರರ ಜೊತೆ ಇನ್ನೊಮ್ಮೆ ಬಂಧಿಸಲ್ಪಟ್ಟರು. ನಂತರದಲ್ಲಿ ಸಾಕ್ಷ್ಯಾಧಾರಗಳ ಅಭಾವದಿಂದಾಗಿ ಅವರೆಲ್ಲರೂ ಬಿಡುಗಡೆ ಹೊಂದಿದರು.

ಕಾಂಗ್ರೆಸ್ ಪಕ್ಷದಲ್ಲಿನ ಸಮಾಜವಾದಿಗಳು ಸ್ವಯಂ ಸೇವಕರ ಸಂಘಟನೆಯೊಂದನ್ನು ರಚಿಸಿ ಅದಕ್ಕೆ ರಾಷ್ಟ್ರಸೇವಾದಳ ಎಂದು ಹೆಸರಿಟ್ಟರು. ಎಸ್.ಎಂ. ಜೋಶಿಯವರಿಗೆ ಈ ಸಂಘಟನೆಯ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಡಲಾಯಿತು. ಜೋಶಿಯವರ ಸಮರ್ಥ ನಾಯಕತ್ವದಲ್ಲಿ ಸಂಘಟನೆಯ ಚಟುವಟಿಕೆಗಳಿಗೆ ಒಳ್ಳೆಯ ವೇಗವೂ ಒದಗಿತು. ಸೇವಾದಳದ ಕಾರ್ಯಕರ್ತರು ಆಗಾಗ ಶ್ರಮದಾನಗಳನ್ನು ಸಂಘಟಿಸಿದರು. ಮತ್ತು ಮಹಾರಾಷ್ಟ್ರದಲ್ಲಿ ಬರಗಾಲ ಕಾಣಿಸಿಕೊಂಡಾಗ ಸಾಕಷ್ಟು ಪರಿಹಾರ ಕಾರ್ಯಗಳನ್ನು ನಡೆಸಿದರು. ಸ್ವಾತಂತ್ರ್ಯ ನಂತರದಲ್ಲಿ ಎಸ್.ಎಂ. ಅವರು ಕಾರ್ಮಿಕ ಸಂಘಗಳ ಸಂಘಟನೆಯಲ್ಲಿ ಹೆಚ್ಚು ಹೆಚ್ಚು ಆಸಕ್ತಿ ತಳೆದರು ಮತ್ತು ಬಹುದೀರ್ಘಕಾಲ ಡಿಫೆನ್ಸ್ ಎಂಪ್ಲಾಯಿಸ್ ಫೆಡರೇಷನ್‌ನ ಪ್ರಧಾನ ಕಾರ್ಯದರ್ಶಿಯಾಗಿ, ಸ್ಟೇಟ್ ಬ್ಯಾಂಕ್ ನೌಕರರ ಸಂಘಟನೆಯ ಅಧ್ಯಕ್ಷರಾಗಿ, ಮಹಾರಾಷ್ಟ್ರ ಟ್ರಾನ್ಸ್‌ಪೋರ್ಟ್ ಸಂಘದ ಅಧ್ಯಕ್ಷರಾಗಿ ಅವರು ಕಾರ್ಯ ನಿರ್ವಹಿಸಿದರು. ಇದಲ್ಲದೆ ಅನೇಕ ಕಾರ್ಮಿಕರ

ಮುಷ್ಕರಗಳನ್ನು ಅವರು ನಿರ್ವಹಿಸಿದರು. ಆದರೆ ಮುಷ್ಕರಗಳಿಂದಾಗಿ ಉತ್ಪಾದನೆಗೆ ಅಡ್ಡಿಯಾಗಬಾರದೆಂದು ಅವರು ದೃಢವಾದ ನಿಲುವು ಹೊಂದಿದವರಾಗಿದ್ದರು.

1952ರಲ್ಲಿ ಪಡೆದ ಗೋವಾ ಸ್ವಾತಂತ್ರ್ಯ ಚಳವಳಿಯಲ್ಲಿ ಜೋಶಿಯವರು ಪ್ರಮುಖ ಪಾತ್ರ ವಹಿಸಿದರು. 1953 ರಲ್ಲಿ ಅವರು ಮುಂಬಯಿ ವಿಧಾನಸಭೆಗೆ ಆಯ್ಕೆಯಾದರು. ಇದಲ್ಲದೆ ಸಂಯುಕ್ತ ಮಹಾರಾಷ್ಟ್ರ ಸಮಿತಿಯಲ್ಲೂ ಅವರು ಸಕ್ರಿಯರಾಗಿದ್ದರು. 1957 ರಲ್ಲಿ ಅವರು ಮತ್ತೊಮ್ಮೆ ವಿಧಾನಸಭೆಗೆ ಚುನಾಯಿತರಾದರು. 1960 ರಲ್ಲಿ ಸಂಯುಕ್ತ ಮಹಾರಾಷ್ಟ್ರ ರಚಿತವಾಯಿತು. ಆದರೆ 1962ರಲ್ಲಿ ಮಹಾರಾಷ್ಟ್ರ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ಜೋಶಿಯವರು ಪರಾಭವಗೊಂಡರು. 1967 ರಲ್ಲಿ ಸಂಯುಕ್ತ ಮಹಾರಾಷ್ಟ್ರ ಸಮಿತಿ ಮತ್ತು ಸಂಯುಕ್ತ ಸೋಷಲಿಸ್ಟ್ ಪಾರ್ಟಿಯ ಅಭ್ಯರ್ಥಿಯಾಗಿ ಅವರು ಲೋಕಸಭೆಗೆ ಚುನಾಯಿತರಾದರು. ಈ ಎಲ್ಲಾ ಚುನಾವಣೆಗಳಲ್ಲಿಯೂ ಪುಣೆ ನಗರವೇ ಅವರ ಮತಕ್ಷೇತ್ರವಾಗಿತ್ತು.

ಶ್ರೀ ಜೋಶಿಯವರು ಪತ್ರಿಕೋದ್ಯಮ ಕ್ಷೇತ್ರಕ್ಕೂ ಗಮನಾರ್ಹ ಕೊಡುಗೆ ನೀಡಿದ್ದಾರೆ. ಅವರು ಪೂನಾ ಡೈಲಿ ನ್ಯೂಸ್ (1953) ಮತ್ತು 1964 ರಲ್ಲಿ ಮುಂಬಯಿ ಲೋಕಮಿತ್ರ (1958-1962) ಪತ್ರಿಕೆಗಳನ್ನು ಸಂಪಾದಿಸಿದರು. ಅದೇ ವೇಳೆಗೆ ಅಂದಿನ ಅನೇಕ ಮರಾಠಿ ಪತ್ರಿಕೆಗಳಿಗೆ ಅವರು ರಾಜಕೀಯ ಮತ್ತು ಸಮಾಜದ ಕುರಿತಂತೆ ಲೇಖನಗಳನ್ನು ಬರೆದು ಕೊಡುತ್ತಿದ್ದರು. ಅವರು ಬರೆದ ಪ್ರಸಿದ್ಧ ಕೃತಿಗಳೆಂದರೆ "ಸೋಷಲಿಸ್ಟ್ ಇನ್ ರೈಟ್ ಪಾತ್" ಮತ್ತು ಮರಾಠಿಯಲ್ಲಿ ಬರೆದ " ಮೀ ಎಸ್.ಎಂ" ಎಂಬ ಹೆಸರಿನ ಆತ್ಮಚರಿತ್ರೆ. ಅವರಿಗೆ ಅರವತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಸಾರ್ವಜನಿಕವಾಗಿ ಗೌರವಿಸಿದಾಗ ಅವರ ಕಾರ್ಯ ಚಟುವಟಿಕೆಗಳನ್ನು ಶ್ಲಾಘಿಸಿದ ಎರಡು ಕೃತಿಗಳನ್ನು ಅವರ ಭಾಷಣಗಳು ಮತ್ತು ಬರಹಗಳ ಒಂದು ಸಂಕಲನವನ್ನು ಪ್ರಕಟಿಸಲಾಯಿತು.

ಜೋಶಿಯವರು 1989ರ ಏಪ್ರಿಲ್ 1ರಂದು ಪುಣೆಯಲ್ಲಿ ಸುದೀರ್ಘ ಕಾಲದ ಅಸ್ವಸ್ಥತೆಯಿಂದಾಗಿ ನಿಧನ ಹೊಂದಿದರು. ಪ್ರತಿಭೆ ಮತ್ತು ದೇಶಾಭಿಮಾನಕ್ಕೆ ಸ್ಫೂರ್ತಿದಾಯಕ ಪ್ರತೀಕದಂತಿದ್ದ ಈ ಮಹಾನ್ ನಾಯಕನ ಅಂತ್ಯ ಹೀಗೆ ಒದಗಿತು. ಜೋಶಿಯವರ ನಿಧನಕ್ಕೆ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತಾ ರಾಜ್ಯಸಭೆಯಲ್ಲಿ ರಾಷ್ಟ್ರಪತಿ ಡಾ. ಶಂಕರ್ ದಯಾಳ್ ಶರ್ಮಾ ಅವರು *ಶ್ರೀ "ಶ್ರೀಧರ ಮಹಾದೇವ ಜೋಶಿಯವರ ನಿಧನದಿಂದ ಒಂದು ಶಕೆಯೇ ಅಂತ್ಯಗೊಂಡಿದೆ. ಅವರು ಸ್ವಾತಂತ್ರ್ಯ ಪೂರ್ವದ ಗಾಂಧಿಯುಗ ಮತ್ತು ಸ್ವಾತಂತ್ರ್ಯೋತ್ತರದ ಅವಧಿಯ ಮಹಾರಾಷ್ಟ್ರದ ರಾಜಕಾರಣದ ನಡುವಣ ಒಂದು ಸ್ವರ್ಣರೇಖೆಯಂತಿದ್ದರು ಎಂದಿದ್ದರು." ಮೌಲ್ಯಾಧಾರಿತ

* ರಾಜ್ಯ ಸಭಾ ಚರ್ಚೆ 3.4.1989 ಸಿಸಿ-1-2

ರಾಜಕಾರಣದಲ್ಲಿ ದೃಢ ನಂಬಿಕೆ ಇರಿಸಿದ್ದ ಜೋಶಿಯವರು ಶ್ರೀ ಜಯಪ್ರಕಾಶ್ ನಾರಾಯಣ್, ಡಾ. ರಾಮಮನೋಹರ ಲೋಹಿಯಾ, ಆಚಾರ್ಯ ನರೇಂದ್ರದೇವ್ ಮತ್ತು ಆ ಕಾಲದ ಇತರ ಸಮಾಜವಾದಿ ನಾಯಕರೊಂದಿಗೆ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ಸಂಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರು. ತಾವು ನಂಬಿದ್ದ ಸಮಾಜವಾದಿ ಸಿದ್ಧಾಂತವನ್ನು ಅವರು ತಮ್ಮ ಸಾವಿನತನಕವೂ ಪ್ರತಿಪಾದಿಸಿದರು. ಸಾಮಾಜಿಕ ಅಸಮಾನತೆಗಳ ವಿಷಯದಲ್ಲಿ ಅವರು ಎಂದಿಗೂ ಯಾರೊಂದಿಗೂ ರಾಜಿ ಮಾಡಿಕೊಂಡವರಲ್ಲ. ಅಸಮಾನತೆಯನ್ನು ಅವರು ಎಂದೂ ಸಹಿಸುತ್ತಿರಲಿಲ್ಲ. ತಮ್ಮ ಜೀವನದುದ್ದಕ್ಕೂ ಜೋಶಿಯವರು ಬಡವರ ಹಿತಸಾಧನೆಗಾಗಿಯೇ, ದೀನದಲಿತರ ಸಲುವಾಗಿಯೇ ಶ್ರಮಿಸಿದರು. ಅವರು ಸಮಾಜದ ಈ ಅಸಹಾಯಕ ವರ್ಗಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವಲ್ಲಿ ಮತ್ತು ಸಮಾಜದಲ್ಲಿ ನ್ಯಾಯಬದ್ಧ ಸ್ಥಾನವನ್ನು ಕಲ್ಪಿಸಿಕೊಡುವ ನಿಟ್ಟಿನ ಹೋರಾಟದಲ್ಲಿ ಸದಾ ಮುಂಚೂಣಿಯಲ್ಲಿ ನಿಂತರು.

ಭಾಗ - ಮೂರು

# ಅವರ ವಿಚಾರಧಾರೆಗಳು

(ಶ್ರೀ ಎಸ್.ಎಂ. ಜೋಶಿಯವರು ಸಂಸತ್ತಿನಲ್ಲಿ ಮಾಡಿದ ಆಯ್ದ ಭಾಷಣಗಳ ಸಾರಾಂಶ)

## *1964-65 ಮತ್ತು 1965-66ರ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳಿಗಾಗಿನ ಆಯುಕ್ತರ 14-15ನೇ ವರದಿಗಳು

ಮಾನ್ಯ ಉಪಾಧ್ಯಕ್ಷರೇ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೇಲಣ ಚರ್ಚೆಯು ಬಹುದಿನಗಳಿಂದ ಇಲ್ಲಿ ನಡೆಯುತ್ತಿದೆ. ಇವತ್ತಿನ ಚರ್ಚೆಯನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ನಾವು ಈ ಪ್ರಶ್ನೆಯನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸುತ್ತಿಲ್ಲ ಎಂದು ಕಾಣಿಸುತ್ತದೆ. ಇಲ್ಲಿ ಹೇಳಿರುವುದೆಲ್ಲವೂ ಅಂಕಿ-ಅಂಶಗಳನ್ನು ಆಧರಿಸಿದೆ. ನನ್ನ ಅಭಿಪ್ರಾಯದಲ್ಲಿ ಇದು ನಿಯಮ ನಿಬಂಧನೆಗಳ ಮೇಲೆ ನಡೆಯುತ್ತಿರುವ ಒಂದು ಬಗೆಯ ತಿಣುಕಾಟವಾಗಿದೆ ಎಂದೇ ನನಗೆ ಅನಿಸುತ್ತಿದೆ. ಅದೇನಿದ್ದರೂ ಬರಿಯ ಅಂಕಿ ಸಂಖ್ಯೆಗಳನ್ನು ಆಧರಿಸಿಕೊಂಡು ನಾವು ಯೋಚಿಸುವುದನ್ನು ಕೈಬಿಡಲು ಈಗ ಕಾಲ ಸನ್ನಿಹಿತವಾಗಿದೆ ಎಂದು ನಾನು ಭಾವಿಸುತ್ತೇನೆ. ಇಂತಹ ವಿಷಯಗಳಲ್ಲಿ ನಾವೀಗ ಗುಣಾತ್ಮಕ ಬದಲಾವಣೆಗಳನ್ನು ತರಬೇಕಾಗಿದೆ. ನಾವು ಈ ಬದಲಾವಣೆಗಳನ್ನು ತರದಿದ್ದರೆ ನಮ್ಮ ಮುಂದಿರುವ ಕಠಿಣ ಕಾರ್ಯಭಾರಗಳನ್ನು ಬಗೆಹರಿಸಲು ನಾವು ಸಮರ್ಥರಲ್ಲ ಎಂದೇ ಅದರ ತಾತ್ಪರ್ಯ. ಅದೃಷ್ಟವಶಾತ್ ಮಹಾರಾಷ್ಟ್ರದಲ್ಲಿ ಓರ್ವ ಮಹಾನ್ ನೇತಾರ, ಓರ್ವ ಅಸಾಧಾರಣ ನಾಯಕರ ಜನನವಾಗಿದೆ. ಈ ಮಹಾನ್ ನೇತಾರರು ಪರಿಶಿಷ್ಟ ಜಾತಿಗಳ ದೇವದೂತ ಎಂದೇ ಕರೆಯಬಹುದಾದ ಮಹಾನುಭಾವ. ಆದರೆ ಈ ರಾಜ್ಯದಲ್ಲಿ ಪರಿಶಿಷ್ಟ ಜಾತಿಗಳ ಜನರ ಪಾಡೇನಾಗಿದೆ ನೋಡಿ. ಈ ಜಾತಿಯ ಜನರ ಪರಿಸ್ಥಿತಿ ಒಟ್ಟಾರೆಯಾಗಿ ಬಹಳಷ್ಟು ಸುಧಾರಿಸಿದೆ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಕೆಲವು ವರ್ಷಗಳ ಹಿಂದೆ ಈ ರಾಜ್ಯದಲ್ಲಿ ಭೂಮಿಯ ಮೇಲಿನ ಹಕ್ಕಿಗಾಗಿ ಒಂದು ದೊಡ್ಡ ಚಳವಳಿಯನ್ನೇ ಅವರು ಹೂಡಿದ್ದರು. ನಾನು ಕೂಡಾ ಆ ಚಳವಳಿಯಲ್ಲಿ ಭಾಗಿಯಾಗಿದ್ದೆ. ಸ್ವಾತಂತ್ರ್ಯ ದೊರೆತಂದಿನಿಂದ ಈ ತನಕವೂ ರಾಜ್ಯದ ಪರಿಶಿಷ್ಟ ಜಾತಿಗಳಿಗೆ ಸೇರಿದ ಜನರು ಹೂಡಿದ ಇಂತಹ ಆತ್ಮೀಯ ಸ್ವರೂಪದ ಮತ್ತೊಂದು ಚಳವಳಿಯನ್ನು ನಾನು ಕಂಡಿದ್ದಿಲ್ಲ. ಆದರೆ ದೇಶದ ಯಾವೊಂದು ಪ್ರಮುಖ ದಿನಪತ್ರಿಕೆಯ ಈ ಚಳವಳಿಯ ಬಗ್ಗೆ ಒಂದೇ ಒಂದು ತುಣುಕು ಸುದ್ದಿಯನ್ನು ಪ್ರಕಟಿಸಿರಲಿಲ್ಲ ಎಂಬುದೇ ಇಲ್ಲಿನ ಬಹುದೊಡ್ಡ ವ್ಯಂಗ್ಯವಾಗಿದ. ಅಂತಹ ಅತಿ ಪ್ರಾಮುಖ್ಯ ಚಳವಳಿಗೆ ನೀಡಬೇಕಾಗಿದ್ದ ಆದ್ಯತೆಯನ್ನು ನೀಡಿರಲಿಲ್ಲ ಎಂಬುದನ್ನು ಇದು ತೋರಿಸಿಕೊಡುತ್ತದೆ. ಈ ಚಳವಳಿಯಲ್ಲಿ ಜನರು ಮುಂದಿಟ್ಟ ಬೇಡಿಕೆಗಳಲ್ಲಿ ಕೆಲವನ್ನು ಸ್ವಲ್ಪ ಮಟ್ಟಿಗೆ ಅಂಗೀಕರಿಸಲಾಯಿತು. ಆದರೆ ಈ ಅಂಶಗಳನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗಲಿಲ್ಲ.

---

*ಲೋಕಸಭಾ ಚರ್ಚೆ, 7, ಆಗಸ್ಟ್ 1962, ಸಿಸಿ, 17586-17592

ಮಹಾರಾಷ್ಟ್ರದ ಪುಣೆ ನಗರದಲ್ಲಿ ಸರ್ವೋಚ್ಚ ನ್ಯಾಯಾಲಯದ ಆಗಿನ ಮುಖ್ಯ ನ್ಯಾಯಮೂರ್ತಿಗಳು ಡಾ. ಅಂಬೇಡ್ಕರ್ ಪ್ರತಿಮೆಯನ್ನು ಅನಾವರಣಗೊಳಿಸಿದರು. ಆಗಲೂ ಕೂಡಾ ರಕ್ಷಣಾ ಖಾತೆಯ ಒಂದು ಘಟಕದಲ್ಲಿ ಡಾ. ಅಂಬೇಡ್ಕರ್ ಅವರ ಜಯಂತಿಯ ಅಂಗವಾಗಿ ರಜೆಯನ್ನು ಕೊಟ್ಟಿರಲಿಲ್ಲ. ಇತರ ಎಲ್ಲ ರಕ್ಷಣಾ ಸ್ಥಾವರಗಳಲ್ಲೂ ಅಂದು ರಜೆ ನೀಡಲಾಗಿತ್ತು. ಈ ಸಂಬಂಧದಲ್ಲಿ ಪರಿಶಿಷ್ಟ ಜಾತಿಗಳಿಗೆ ಸೇರಿದ ಕೆಲವು ಮಂದಿ ಆ ಘಟಕಕ್ಕೆ ಸಂಬಂಧಪಟ್ಟಂತೆ ಡಾ. ಅಂಬೇಡ್ಕರ್ ಅವರ ಜನ್ಮದಿನದಲ್ಲಿ ರಜೆ ನೀಡಬೇಕೆಂದು ಪ್ರಸ್ತಾಪವನ್ನು ಮಿುದಿಟ್ಟರು. ಈ ವಿಷಯದಲ್ಲಿ ಭಾರಿ ಜಗಳವೂ ನಡೆಯಿತು. ಆಗ ನಾನು ಈ ಸಂಬಂಧದಲ್ಲಿ ಆಗಿನ ರಕ್ಷಣಾ ಸಚಿವ ಸಿ. ಯಶವಂತರಾವ್ ಚವಾಣ್ ಅವರಿಗೆ ಒಂದು ಪತ್ರವನ್ನು ಬರೆದೆ. ಇದರ ಫಲಿತಾಂಶವಾಗಿ ಆ ಘಟಕದಲ್ಲೂ ಅವರು ರಜೆ ಘೋಷಿಸಬೇಕಾಯಿತು. ಆದರೆ ಅನಂತರದ ದಿನಗಳಲ್ಲಿ ಅದರ ಕಾರ್ಮಿಕ ಮುಖಂಡರಿಗೆ ದಂಡ ವಿಧಿಸಲಾಯಿತು. ಈ ಚಳವಳಿಯಲ್ಲಿ ಮುಂದಾಳತ್ವ ವಹಿಸಿದ್ದ ವ್ಯಕ್ತಿಯೊಬ್ಬನನ್ನು ದೆಹಲಿಗೆ ವರ್ಗಾಯಿಸಲಾಯಿತು. ಹಾಗೆ ಚಳವಳಿ ನಡೆಸಿದ ಇತರ ಕಾರ್ಮಿಕರಲ್ಲಿ ಶ್ರೀ ರಂಖಾಂಬೆ ಎಂಬುವರೊಬ್ಬರಿದ್ದರು. ಅವರ ಕುರಿತು ನಾನು ಮತ್ತು ದಾದಾ ಸಾಹೇಬ್ ಗಾಯಕವಾಡ್ ಅವರು ಸೇರಿ ರಕ್ಷಣಾ ಸಚಿವರಿಗೂ ಪತ್ರ ಬರೆದಿದ್ದೆವು. ಈ ವ್ಯಕ್ತಿ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದಾಗ ಒಂದು ಅಪಘಾತ ಸಂಭವಿಸಿತು. ಆದರೆ ಈ ಅಪಘಾತದಿಂದ ಸರ್ಕಾರಕ್ಕೆ ಭಾರಿ ನಷ್ಟವೇನೂ ಸಂಭವಿಸದಿದ್ದರೂ ಈತನ ಮೇಲೆ ಚಾರ್ಜ್‌ಶೀಟ್ ಹಾಕಿ ಅನಂತರದಲ್ಲಿ ಸೇವೆಯಿಂದ ವಜಾಗೊಳಿಸಲಾಯಿತು. ಇದು ಏಕಾಯಿತೋ? ಇಂತಹ ಪ್ರಕರಣಗಳಾದಾಗ ಇತರ ಜಾತಿಯ ವ್ಯಕ್ತಿಗಳಿಗೂ ಇದೇ ರೀತಿ ದಂಡನೆ ವಿಧಿಸಲಾಗುತ್ತದೆಯೇ ಎಂಬುದನ್ನು ತಿಳಿಯಲು ನಾನು ಅಪೇಕ್ಷಿಸುತ್ತೇನೆ. ಆದರೆ ಅಂತಹ ಸಂದರ್ಭಗಳು ನಮಗೆ ಸಿಗುವುದಿಲ್ಲ. ಇತರ ಜಾತಿಯವರಿಗೆ ಇಂತಹ ದಂಡನೆ ಇಲ್ಲವೆಂದಾದರೆ ಪರಿಶಿಷ್ಟ ಜಾತಿಯವರಿಗೆ ಮಾತ್ರವೇ ಇಂತಹ ದಂಡನೆಗಳು ಏಕೆ? ಅಂದರೆ ಮೇಲ್ಜಾತಿಗಳಿಗೆ ಸೇರಿದ ಮನೋವೃತ್ತಿ ಇನ್ನು ಬದಲಾಗಿಲ್ಲ ಎಂಬ ವಾಸ್ತವಾಂಶವೇ ಇದಕ್ಕೆ ಕಾರಣ. ಪರಿಶಿಷ್ಟ ಜಾತಿಗಳ ಜನರ ವಿಷಯದಲ್ಲಿ ಮಾತ್ರವೇ ಇಂತಹ ನಡವಳಿಕೆ ಎಂದಾದರೆ ಅದರ ಅರ್ಥವೇನು? ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಅವರ ನೇತೃತ್ವದಲ್ಲಿ ಬೃಹತ್ ಆಂದೋಲನ ನಡೆದ ಮಹಾರಾಷ್ಟ್ರದಲ್ಲಿ ಪರಿಶಿಷ್ಟ ಜಾತಿಯವರು ಈ ರೀತಿ ಹೀನಾಯವಾಗಿ ಅನ್ಯಾಯವನ್ನು ಸಹಿಸಬೇಕೆ? ಮಹಾರಾಷ್ಟ್ರದಲ್ಲೇ ಹೀಗಾದರೆ ಇತರ ಕಡೆಗಳಲ್ಲಿ ಪರಿಶಿಷ್ಟ ಜಾತಿಗಳ ಜನರ ಪರಿಸ್ಥಿತಿ ಹೇಗಿರಬಹುದೆಂದು ಸುಲಭವಾಗಿ ಊಹಿಸಬಹುದು. ನೀವು ಅವರಿಗಾಗಿ ಉದ್ಯೋಗಗಳಲ್ಲಿ ಮೀಸಲಾತಿ ಕಲ್ಪಿಸಿಕೊಟ್ಟಿದ್ದೀರಿ. ಅದೇ ರೀತಿ ಹರಿಜನರು ಮತ್ತು ಪರಿಶಿಷ್ಟ ಪಂಗಡದ ಜನರಿಗೆ ನಗರಗಳಲ್ಲಿ ಹೌಸಿಂಗ್ ಬೋರ್ಡ್ ಮತ್ತು ಆಯೋಗಗಳು

ನಿರ್ಮಿಸಿದ ಮನೆಗಳನ್ನು ಮಂಜೂರು ಮಾಡಿದ್ದೀರಾ? ಎಂದು ನಾನು ನಿಮ್ಮನ್ನು ಈ ಸಂದರ್ಭದಲ್ಲಿ ಕೇಳಬಯಸುತ್ತೇನೆ. ಈ ಮನೆಗಳ ಮಂಜೂರಾತಿಯಲ್ಲಿ ಅವರಿಗೂ ಏನಾದರೂ ಮೀಸಲಾತಿ ಇದೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ. ಮುಂಬಯಿ ಮತ್ತು ಪುಣೆಯಂತಹ ನಗರಗಳಲ್ಲಿ ಈ ವರ್ಗದ ಜನರು ಯಾವಾಗಲೂ ಕೊಳಚೆ ಪ್ರದೇಶಗಳಲ್ಲೇ ವಾಸವಾಗಿರುತ್ತಾರೆ. ಅಲ್ಲೇ ಅವರು ವಾಸ ಮಾಡಬೇಕಾಗಿದೆ. ಅವರಿಗೆ ಅಲ್ಲಿ ಮನೆಗಳೂ ಸಿಗುವುದಿಲ್ಲ. ಈ ಜನರಿಗೂ ಮನೆಗಳ ನಿರ್ಮಾಣಕ್ಕೆ ಯಾವ ಪ್ರದೇಶವನ್ನು ವಿಂಗಡಿಸಿಯೂ ಇಲ್ಲ. ಮಹಾನಗರಗಳಲ್ಲಿ ಈಚೆಗಂತೂ ಮನೆಗಳೂ ಸಿಗುತ್ತಿಲ್ಲ. ಸರ್ಕಾರದ ವಸತಿ ನಿರ್ಮಾಣ ಸಂಸ್ಥೆಗಳು ನಿರ್ಮಿಸುವ ಮನೆಗಳಲ್ಲಿ ಮಾತ್ರವೇ ಅವರಿಗೆ ವಸತಿ ಸೌಕರ್ಯ ಲಭಿಯಸಬಹುದಾಗಿದೆ. ಈ ವರ್ಗದ ಜನರಿಗಾಗಿ ಮನೆಗಳನ್ನು ಮೀಸಲಿಡಲಾಗಿದೆಯೇ ಹೇಗೆಂದು ನಾನು ಹೌಸಿಂಗ್ ಬೋರ್ಡ್‌ನ / ಕಮೀಷನ್‌ನ ಅಧ್ಯಕ್ಷರಾಗಿದ್ದ - ನನ್ನ ಮಿತ್ರರಾಗಿದ ನಾನಾಸಾಹೇಬ್ ಕುಥೆ ಅವರನ್ನೊಮ್ಮೆ ಕೇಳಿದ್ದೆ. ಆದರೆ ಅಂತಹ ಒಂದು ನಿಯಮ ಇಲ್ಲದೆ ಇರುವುದರಿಂದ ಅಂತಹ ಮೀಸಲಾತಿ ಕಲ್ಪಿಸಿಲ್ಲ ಎಂದು ಅವರು ನನಗೆ ಹೇಳಿದ್ದರು. ಹಾಗಾಗಿ ಈಗ ಇನ್ನು ಹೆಚ್ಚು ಕಾಲಹರಣ ಮಾಡದೆ ಅಂತಹ ನಿಯಮವನ್ನು ಹೊಂದಿರುವುದು ಅತ್ಯವಶ್ಯ ಎಂದು ನಾನು ಭಾವಿಸಿದ್ದೇನೆ. ಈ ವರ್ಗದ ಜನರ ವಾಸಕ್ಕೆ ಮನೆಗಳನ್ನು ಒದಗಿಸಿದೆ ಸರ್ಕಾರದ ಕರ್ತವ್ಯವಾಗಿ ಆದರೆ ಸರ್ಕಾರ ಇದನ್ನು ಮಾಡುತ್ತಿಲ್ಲ.

ಈ ವರ್ಗದ ಜನರಿಗೆ ನಾವು ಉದ್ಯೋಗಗಳನ್ನು ಮೀಸಲಿರಿಸಿದ್ದೇವೆ. ಅವರು ಬೇಡಿದ್ದರೆಂದು ಈ ಸೌಕರ್ಯವನ್ನು ನಾವು ಕಲ್ಪಿಸಿಕೊಟ್ಟಿಲ್ಲ. ಈ ಜನರ ವಿರುದ್ಧ ಅಧಿಕಾರಶಾಹಿಗಳು ಮತ್ತು ಮೇಲ್ಜಾತಿಯ ಜನರು ಹೂಡಿರುವ ಸಂಚನ್ನು ವಿಫಲಗೊಳಿಸಿ ಈ ಸಮುದಾಯಕ್ಕೆ ಸಲ್ಲಬೇಕಿದ್ದ ನ್ಯಾಯವನ್ನು ಒದಗಿಸುವ ಸಲುವಾಗಿ ನಾವು ಅವರಿಗೆ ಈ ಸೌಕರ್ಯವನ್ನು ಕಲ್ಪಿಸಿಕೊಟ್ಟೆವು. ಎಲ್ಲ ಕಡೆಗಳಲ್ಲೂ ಈ ವರ್ಗಕ್ಕೆ ಸೇರಿದ ಜನರ ವಿರುದ್ಧ ಇಂಥ ಸಂಚು-ವಂಚನೆಗಳು ನಡೆದೇ ಇವೆ. ನಿನ್ನೆ ಶ್ರೀ ಜಯಪ್ರಕಾಶ್ ನಾರಾಯಣ್ ಅವರೊಡನೆ ಮಾತನಾಡುವ ಮತ್ತು ಅವರ ಭಾಷಣವನ್ನು ಕೇಳುವ ಅವಕಾಶ ನನಗೆ ಲಭ್ಯವಾಗಿತ್ತು. ಬಿಹಾರದಲ್ಲಿನ ಕಾಂಗ್ರೆಸ್ ಸರ್ಕಾರವು ಈ ಸಂಬಂಧದಲ್ಲಿ (ಹಿತ್ತಲು ಮನೆ) ಕಾಯ್ದೆಯೊಂದನ್ನು ಮಾಡಿದೆ. ಆದರೆ ಪೂರ್ಣಿಯಾದಲ್ಲಿ ಸರ್ಕಾರ ಈ ಕಾಯ್ದೆಯನ್ನು ಜಾರಿಗೊಳಿಸಿಲ್ಲ. ಅಲ್ಲಿ ಜನರನ್ನು ತೋಳ್ಬಲದಿಂದ ಒಕ್ಕಲೆಬ್ಬಿಸಲಾಗುತ್ತಿದೆ. ಗ್ರಾಮಾಂತರ ಪ್ರದೇಶದಲ್ಲಿ ಕೂಡಾ ಗ್ರಾಮದಾನ್ ಯೋಜನೆ ಜಾರಿಗೆ ತರಲು ಕಠಿಣವಾಗುತ್ತದೆ ಎಂದು ಅವರು ನನಗೆ ಹೇಳಿದ್ದರು. ಅದೇ ರೀತಿ ಉಳುಮೆಯ ಜಮೀನಿನ ಮತ್ತೊಂದು ಕಾಯ್ದೆಯು ಅಸ್ತಿತ್ವದಲ್ಲಿತ್ತು. ಬೆಳೆಗಾರ ಭೂಮಿಯನ್ನು ಉಳುಮೆಯನ್ನೇನೋ ಮಾಡುತ್ತಾನೆ. ಆದರೆ ಪೈರನ್ನು ಮಾತ್ರ ಕಟಾವಿನ ಸಂದರ್ಭದಲ್ಲಿ ಇನ್ನೊಬ್ಬರು ಹೊತ್ತುಕೊಂಡು

ಹೋಗುತ್ತಾರೆ. ಅವನ ಹೆಸರು ಕೂಡಾ ಪಾಲುದಾರಿಕೆ ಬೆಳೆಗಾರನಾಗಿ ದಾಖಲಾಗುವುದಿಲ್ಲ. ಹಾಗಾಗಿ ಶಾಸನವೊಂದನ್ನು ರೂಪಿಸುವುದರಿಂದ ಈ ಉದ್ದೇಶವನ್ನು ಈಡೇರಿಸಲಾರದು. ಈ ನಿಟ್ಟಿನಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದು, ಅದಕ್ಕೆ ಚಾಲನೆ ನೀಡುವುದು ಜನಾಂದೋಲನವನ್ನು ನಡೆಸುವುದು ಅಗತ್ಯವಾಗಿದೆ. ಜನರ ಯೋಚನೆ ಮತ್ತು ಮನೋವೃತ್ತಿಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತರುವ ದಿಸೆಯಲ್ಲಿ ನೀವು ಏನನ್ನು ಮಾಡಲು ಯೋಚಿಸಿದ್ದೀರಿ ಎಂದು ನಾನು ಈ ಖಾತೆಯ ಉಸ್ತುವಾರಿ ವಹಿಸಿಕೊಂಡಿರುವ ಶ್ರೀ ಅಶೋಕ್ ಬಾಯಿ ಅವರನ್ನು ಕೇಳಬಯಸುತ್ತೇನೆ. ಹಾಗಾಗಿ ಸಾರ್ವಜನಿಕ ಸೇವಾ ಆಯೋಗದಲ್ಲಿ ಈ ವರ್ಗದವರ ಹಿತಾಸಕ್ತಿಗಳನ್ನು ರಕ್ಷಿಸುವ ಸಲುವಾಗಿ ಆಯಾ ವರ್ಗದಿಂದ ಕನಿಷ್ಠ ಒಬ್ಬ ಪ್ರತಿನಿಧಿ ಇರಬೇಕು. ಈ ಜನವರ್ಗಗಳಲ್ಲಿ ಸಾರ್ವಜನಿಕ ಸೇವಾ ಆಯೋಗದ ಸದಸ್ಯನಾಗುವ ಅರ್ಹತೆ ಹೊಂದಿರುವ ಒಬ್ಬನೇ ಒಬ್ಬ ವ್ಯಕ್ತಿಯಾದರೂ ಇಲ್ಲವೇ ಎಂದು ನಾನು ಅವರಿಂದ ತಿಳಿಯಬಯಸುತ್ತೇನೆ. ಈ ಜನಸಮುದಾಯದಿಂದ ಇದು ತನಕ ಸದರಿ ಆಯೋಗಕ್ಕೆ ಒಬ್ಬನೇ ಒಬ್ಬ ಪ್ರತಿನಿಧಿಯನ್ನು ಏಕೆ ನೇಮಿಸಿಲ್ಲ? ಈ ವಿಚಾರ ಪರಿಶೀಲನೆಯಲ್ಲಿದೆ ಎಂದು ನೀವು ಹೇಳುತ್ತಿದ್ದೀರಿ. ಎಷ್ಟು ಕಾಲ ಈ ಪರಿಶೀಲನೆ ಮುಂದುವರಿಯುತ್ತದೆ? ಈಗ ಭರ್ತಿಯಾಗದೆ ಉಳಿದಿರುವ ಹುದ್ದೆಗಳನ್ನು ತುಂಬಲು ಯಾವ ಕ್ರಮ ಕೈಗೊಂಡಿದ್ದೀರಿ ಎಂದು ನಿನ್ನೆಯಷ್ಟೇ ನಾನು ನನ್ನ ಮಿತ್ರ ಅಶೋಕ್ ಬಾಯಿಯವರನ್ನು ಕೇಳಿದೆ. ಮೀಸಲಿಟ್ಟ ಎಲ್ಲ ಹುದ್ದೆಗಳನ್ನು 1962-63, 1964 ಮತ್ತು 1965 ರಲ್ಲಿ ಭರ್ತಿ ಮಾಡಲಾಗಿದೆ ಎಂದು ಮಾನ್ಯ ಸಚಿವರು ಈಗಷ್ಟೇ ಹೇಳಿರುವರು. ಆದರೆ ಈ ನಿಷ್ಪತ್ತಿ ಹುದ್ದೆಗಳು ಕೇವಲ ಶೇ. 5 ರಷ್ಟಾಗಿದೆ. ಅಂದರೆ ಈಗ ಬಾಕಿ ಇರುವ ಹುದ್ದೆಗಳನ್ನು ತುಂಬಲಿಲ್ಲ ಎಂಬುದೇ ಇದರ ಅರ್ಥ. ಈಗ ಬಾಕಿ ಉಳಿದಿರುವ ಈ ಹುದ್ದೆಗಳನ್ನು ತುಂಬಲು ನಿಮ್ಮ ಮುಂದಿರುವ ಯೋಜನೆ ಏನು? ಈ ಜಾತಿ ಮತ್ತು ಪಂಗಡಗಳಿಗೆ ಮೀಸಲಿಟ್ಟಿರುವ ಪ್ರಮಾಣವನ್ನು (ಕೋಟಾ) ಇಮ್ಮಡಿಗೊಳಿಸಬೇಕು ಎಂಬುದೇ ನನ್ನ ಸಲಹೆಯಾಗಿದೆ. ಯಾವನೇ ಒಬ್ಬನು ಕನಿಷ್ಠ ವಿದ್ಯಾರ್ಹತೆ ಹೊಂದಿದ್ದಲ್ಲಿ ಅಂತಹವನನ್ನು ಆಯ್ದುಕೊಂಡು ಬಾಕಿ ಇರುವ ಹುದ್ದೆಗಳನ್ನು ಭರ್ತಿ ಮಾಡಬೇಕು.

ನನ್ನ ಭಾಷಣವನ್ನು ಮುಕ್ತಾಯ ಮಾಡುವ ಮುನ್ನ ಇನ್ನೊಂದು ವಿಷಯವನ್ನು ಪ್ರಸ್ತಾಪಿಸುತ್ತೇನೆ. ನನ್ನ ಮಿತ್ರರಾದ ಶ್ರೀ ಶೇವು ನರೇನ್ ಅವರು ನೀಡಿದ ಭಾಷಣದ ಕಡೆಗೆ ನಾನು ನಿಮ್ಮ ಮತ್ತು ಇಡೀ ಸದನದ ಗಮನವನ್ನು ಸೆಳೆಯಬಯಸುತ್ತೇನೆ. ಅದು ಅಷ್ಟೊಂದು ಸುಲಭವಲ್ಲ. ಗೋಡೆಯ ಮೇಲಿನ ಬರಹದಂತಿರುವ ಈ ಭಾಷಣದಲ್ಲಿನ ಎಚ್ಚರಿಕೆಯನ್ನು ನೀವು ಗಮನಿಸದೆ ಹೋದರೆ ಅದರ ಪರಿಣಾಮವು ಈಗ ಅಮೆರಿಕದಲ್ಲಿ ಸಂಭವಿಸುತ್ತಿರುವಂತೆಯೇ ಅತ್ಯಂತ ವಿನಾಶಕಾರಿಯಾಗಲಿದೆ. ಇಲ್ಲಿನ ಪರಿಶಿಷ್ಟ ಜಾತಿಗಳ ಜನರನ್ನು ನೀವು ಕರಿಯ ಜನಾಂಗದವರಂತೆ ನೋಡಿಕೊಂಡರೆ (ಉದಾ- ಅಮೆರಿಕದಲ್ಲಿ

ನೀಗ್ರೋ ಜನಾಂಗದವರನ್ನು ಕಾಣುವಂತೆ) ಈ ಜಾತಿಗಳಿಗೆ ಸೇರಿದ ಜನರು ಅಲ್ಲಿ ನೀಗ್ರೋಗಳು ಅಮೆರಿಕನ್ನರಿಗೆ ಏನನ್ನು ಮಾಡಿದರೋ ಅದನ್ನೇ ಇಲ್ಲಿಯೂ ಮಾಡಬಹುದು. ಅದೇ ರೀತಿಯ ಪರಿಸ್ಥಿತಿ ಇಲ್ಲಿಯೂ ನಿರ್ಮಾಣಗೊಂಡು ಇದಕ್ಕೆ ಸರ್ಕಾರ ಮತ್ತು ನಾವು ಸಮಾನ ಹೊಣೆಯನ್ನು ಹೊತ್ತುಕೊಳ್ಳಬೇಕಾಗುವುದು. ಕಾಂಗ್ರೆಸ್‌ವೊಂದೇ ಅವರಿಗಾಗಿ ಏನನ್ನು ಮಾಡಿಲ್ಲ ಎಂದು ನಾನು ಹೇಳಬಯಸುವುದಿಲ್ಲ. ಬಿಹಾರದಲ್ಲಿ ಕಾಂಗ್ರೆಸ್‌ಯೇತರ ಸರ್ಕಾರವಿದೆ. ಆ ಸರ್ಕಾರವು ಕೂಡಾ ಈ ವರ್ಗದ ಜನರಿಗೆ ಯಾವುದೇ ಒಳಿತನ್ನು ಮಾಡದೇ ಹೋದಲ್ಲಿ ಮತ್ತು ಈಗ ಅಲ್ಲಿ ಅಸ್ತಿತ್ವದಲ್ಲಿರುವ ಕಾಯ್ದೆಗಳನ್ನು ಅನುಷ್ಠಾನಕ್ಕೆ ತಂದಿದ್ದಲ್ಲಿ ಅಲ್ಲಿನ ಕಾಂಗ್ರೆಸ್‌ಯೇತರ ಸರ್ಕಾರಗಳು ಕೂಡಾ ಕಾಂಗ್ರೆಸ್ ಸರ್ಕಾರಕ್ಕೆ ಆದ ಗತಿಯನ್ನೇ ಎದುರಿಸಬೇಕಾಗುವುದು. ನಾವು ಈ ವಿಷಯದಲ್ಲಿ ಕಾನೂನು ಸಮ್ಮತವಾದ ಅಹಿಂಸಾತ್ಮಕವಾದ ಮತ್ತು ಶಾಂತಿಯುತವಾದ ವಿಧಾನವನ್ನು ಅನ್ವಯಿಸಹೋದರೆ ಅದರ ಪರಿಣಾಮವು ಅತ್ಯಂತ ವಿನಾಶಕಾರಿಯಾಗಲಿದೆ. ಅಶೋಕ್ ಬಾಯಿಯವರು ಪದೇ ಪದೇ ಪ್ರಸ್ತಾಪಿಸುತ್ತಿರುವ ರಾಷ್ಟ್ರೀಯ ಸಮಗ್ರತೆಯ ಪ್ರಶ್ನೆಯು ಆದೇ ಆಗಿದೆ. ಹಾಗಾಗಿ ನೀವು ಆ ದೃಷ್ಟಿಕೋನದಿಂದಲೂ ಯೋಚಿಸಬೇಕಾಗಿದೆ

## ಅಧ್ಯಾಯ - 12

## ವೇತನ ಸ್ತಂಭನ ಧೋರಣೆ ಮೇಲಣ ಗೊತ್ತುವಳಿ*

ವೇತನ ಸ್ತಂಭನ ಕುರಿತ ಧೋರಣೆಯ ಮೇಲಣ ಗೊತ್ತುವಳಿಯನ್ನು ಸದಸ್ಯರ ಮುಂದೆ ಮಂಡಿಸಿರುವುದಕ್ಕಾಗಿ ಮಾನ್ಯ ಶ್ರೀ ಸಿ. ಕೆ. ಚಕ್ರಪಾಣಿಜಿಯವರನ್ನು ನಾನು ಅಭಿನಂದಿಸುತ್ತೇನೆ. ತುಟ್ಟಿಭತ್ಯೆ ಕುರಿತ ವಿಷಯವನ್ನು ಇಂದು ಸದನದಲ್ಲಿ ಎತ್ತಿರುವುದು ಮತ್ತು ಈ ವಿಷಯದ ಮೇಲೆ ಸದನದಲ್ಲಿ ಚರ್ಚೆ ನಡೆಯುತ್ತಿರುವುದು ಸಕಾಲ.

*

ನಿಜ. ಇದು ಅತ್ಯಂತ ಗಂಭೀರ ಹಾಗೂ ಸಂಕೀರ್ಣ ವಿಷಯವೂ ಆಗಿದೆ. ಅದಲ್ಲದೆ ಈ ಮೊದಲು ಸದನದಲ್ಲಿ ಈ ವಿಷಯವನ್ನು ಎಂದೂ ಚರ್ಚಿಸಿದ್ದಿಲ್ಲ. ಈಗ ಈ ಕುರಿತ ಗೊತ್ತುವಳಿಯಿಂದಾಗಿ ನಮಗೆ ಈ ವಿಷಯದ ಮೇಲೆ ಚರ್ಚಿಸುವ ಅವಕಾಶ ದೊರೆತಿದೆ. ಎಲ್ಲಕ್ಕಿಂತ ಮೊದಲಲ್ಲಿ ನಾನು ನಿಮ್ಮ ಗಮನವನ್ನು ಮತ್ತು ನಿಮ್ಮ ಮೂಲಕ ಹಣಕಾಸು ಸಚಿವರ ಗಮನವನ್ನು ಇಂದು ಮುಖ್ಯ ವಿಷಯದತ್ತ ಸೆಳೆಯಲು ಬಯಸುತ್ತೇನೆ. ಇಂದು ದೇಶಾದ್ಯಂತ ವೇತನಗಳು ಮತ್ತು ಬೆಲೆಗಳನ್ನು ಸ್ತಂಭನಗೊಳಿಸಬೇಕೆಂಬ ವಿಚಾರ ಚರ್ಚಿಸಲ್ಪಡುತ್ತಿದೆ. ಆದರೆ ಈ ವೇತನ ಸ್ತಂಭನ ಎಂಬುದು ಒಂದು ಭ್ರಮೆ ಆಗಿದೆ. ವಾಸ್ತವವಾಗಿ ಇಂದು ನಮ್ಮ ಕಾರ್ಮಿಕರ ವೇತನಗಳು ಈಗಾಗಲೇ ಸ್ತಂಭನಕ್ಕೆ ಒಳಗಾಗಿದೆ ಎಂದೇ ನಮ್ಮ ಭಾವನೆಯಾಗಿದೆ. ಈಗಂತೂ ಯಾವ ವೇತನ ಹೆಚ್ಚಳಕ್ಕೂ ಅನುಮತಿ ನೀಡುತ್ತಿಲ್ಲ. ನಮ್ಮ ಇಂದಿನ ಹೋರಾಟ ಮುಂಬರುವ ದಿನಗಳಲ್ಲಿ ಕಾರ್ಮಿಕರು ತಾವು ಈಗ ಪಡೆಯುತ್ತಿರುವುದಕ್ಕಿಂತ ಕಡಿಮೆ ಸಂಬಳವನ್ನು ಪಡೆಯಬಾರದೆಂಬುದನ್ನು ಖಾತ್ರಿ ಪಡಿಸಿಕೊಳ್ಳುವುದೇ ಆಗಿದೆ. ಅಷ್ಟನ್ನು ಸಾಧಿಸಲು ನಮ್ಮ ಪ್ರಯತ್ನ ನಡೆದಿದೆ. ವಾಸ್ತವವಾಗಿ ನಾವು ಈಗ ಆಗಿರುವ ವೇತನ ಸ್ತಂಭನವನ್ನು ತಡೆಯಲು ಪ್ರಯತ್ನ ನಡೆಸಿದ್ದೇವೆ. ನೈಜ ವೇತನಗಳು ಇನ್ನಷ್ಟು ಕಡಿಮೆಯಾಗಬೇಡವೆಂಬುದೇ ನಮ್ಮೆಲ್ಲರ ಆಶಯವಾಗಿದೆ. ಇದು ಇಂದಿನ ಪರಿಸ್ಥಿತಿ. ನಾವಿಂದು ನಮ್ಮ ತುಟ್ಟಿಭತ್ಯೆಗಾಗಿ ಹೋರಾಟ ನಡೆಸಬೇಕಾದ ಪರಿಸ್ಥಿತಿ ಒದಗಿದೆ. ಹಣಕಾಸು ಸಚಿವ ಶ್ರೀ ಮುರಾರ್ಜಿದೇಸಾಯಿ ಅವರೊಂದಿಗೆ ನಾವು ನಡೆಸುತ್ತಿರುವ ಹೋರಾಟವು ಬೆಲೆಗಳಲ್ಲಿ ಆಗಿರುವ ಹೆಚ್ಚಳವನ್ನು ಸಂಪೂರ್ಣವಾಗಿ ತುಂಬಿಕೊಡಬೇಕೆಂಬುದಕ್ಕಾಗಿಯೇ ಆಗಿದೆ. ನಮ್ಮ ನೈಜ ವೇತನ ಈ ಮೊದಲು ನಾವು ಪಡೆಯುತ್ತಿದ್ದಕ್ಕಿಂತ ಕಡಿಮೆಯಾಗಬಾರದು ಎಂಬುದೇ ಅದರ ತಾತ್ಪರ್ಯ. ಆದರೆ ನಾವು ಹೆಚ್ಚು ವೇತನವನ್ನು ಕೇಳುತ್ತಿದ್ದೇವೆ ಎಂಬ ತಪ್ಪು ಗ್ರಹಿಕೆಯನ್ನು ಇಲ್ಲಿ ಸೃಷ್ಟಿಸಲಾಗಿದೆ.

---

* ಲೋಕ ಸಭಾ ಚರ್ಚೆ, 11 ಆಗಸ್ಟ್ 1966 ಸಿ.ಸಿ. 19019 - 19024

ಆದರೆ ಇದು ಸರಿಯಲ್ಲ. ನಿನ್ನೆ ಪ್ರತಿಪಕ್ಷದನಾಯಕರು ಶ್ರೀ ಮುರಾರ್ಜಿ ಬಾಯಿಯವರೊಂದಿಗೆ ಮಾತುಕತೆ ನಡೆಸಿದಾಗ ಅವರು ಒಂದು ವೇಳೆ ತುಟ್ಟಿಭತ್ಯೆಗೆ ಸಂಬಂಧಿಸಿದಂತೆ ಗಜೇಂದ್ರ ಗಡಕರ್ ಸಮಿತಿಯ ಶಿಫಾರಸುಗಳನ್ನು ನಾವು ಅನುಷ್ಠಾನಕ್ಕೆ ತಂದಲ್ಲಿ ಸರ್ಕಾರವು 175 ಕೋಟಿ ರೂಪಾಯಿಗಳನ್ನು ಹೆಚ್ಚುವರಿಯಾಗಿ ವ್ಯಯಿಸಬೇಕಾಗುತ್ತದೆ ಮತ್ತು ಈ 175 ಕೋಟಿ ರೂಪಾಯಿಗಳನ್ನು ಕಾರ್ಮಿಕರ ಕೈಗಳಿಗೆ ನೀಡಿದರೆ ಅದು ಮತ್ತಷ್ಟು ಬೆಲೆಏರಿಕೆಗೆ ಕಾರಣವಾಗುತ್ತದೆ ಎಂದು ಹೇಳಿದರು.

ಆ ಸಂದರ್ಭದಲ್ಲಿ ಅದು ಹಾಗಲ್ಲ ಎಂದು ಅವರಿಗೆ ತಿಳಿ ಹೇಳಲಾಯಿತು. ಕಾರ್ಮಿಕರ ವೇತನ ಬೆಲೆಏರಿಕೆಗೆ ಕಾರಣವಾಗುವುದಿಲ್ಲ. ಬದಲಾಗಿ ಬೆಲೆಗಳಲ್ಲಿ ಹೆಚ್ಚಳವಾದಗಲಷ್ಟೇ ಅಧಿಕ ವೇತನವನ್ನು ಕೇಳಲಾಗುತ್ತದೆ ಎಂಬುದು ರಿಸರ್ವ್ ಬ್ಯಾಂಕಿನ ಅಭಿಮತವಾಗಿದೆ ಎಂದು ನಾವು ಮೊರಾರ್ಜಿ ಅವರಿಗೆ ವಿವರಣೆ ನೀಡಿದೆವು. ಆದರೆ ಮುರಾರ್ಜಿ ದೇಸಾಯಿಯವರು ನಮ್ಮ ಮಾತಿಗೆ ಒಪ್ಪಲಿಲ್ಲ. ಆದರೆ ನಮ್ಮ ದೇಶದಲ್ಲೂ ಅದೇ ರೀತಿ ಪ್ರತಿಯೊಂದು ದೇಶದಲ್ಲೂ ಬೆಲೆಗಳಿಗೆ ಸಂಬಂಧಿಸಿದಂತೆ ವಸ್ತುನಿಷ್ಠವಾದ ಒಂದು ಅಂಶ ಇದ್ದೇ ಇರುತ್ತದೆ ಎಂಬುದನ್ನು ನಾವು ಅಂಗೀಕರಿಸಲೇ ಬೇಕು. ಆದರೆ ಶ್ರೀ ಮುರಾರ್ಜಿ ಅವರು ತುಟ್ಟಿಭತ್ಯೆ ರೂಪದಲ್ಲಿ 175 ಕೋಟಿ ರೂಪಾಯಿಗಳನ್ನು ಹೆಚ್ಚುವರಿಯಾಗಿ ನೀಡಿದರೆ ಅದು ಬೆಲೆ ಏರಿಕೆಗೆ ಕಾರಣವಾಗುತ್ತದೆ ಎಂದು ಪಟ್ಟು ಹಿಡಿದರು. ಈಗ ಮೊರಾರ್ಜಿಬಾಯಿಯವರೇ ಹೀಗೆ ಹೇಳುತ್ತಾರಾದರೆ ಅದರ ಫಲಿತಾಂಶ ಹೀಗಿದ್ಧಿತು - ಅದೇನಿದ್ದರೂ ಮುರಾರ್ಜಿ ದೇಸಾಯಿಯವರು ನಮ್ಮ ಹಕ್ಕಿನಿಂದಾಗಿ ನಾವು ಪಡೆಯಬೇಕಾದ್ದನ್ನು ಪಡೆದುಕೊಳ್ಳುವುದನ್ನು ಮುರಾರ್ಜಿ ಬಾಯಿ ತಡೆಹಿಡಿಯಲಾರರು. ಅದನ್ನು ಅವರು ಕೊಟ್ಟೇ ಕೊಡಬೇಕಾಗುವುದು. ಆತ್ಮಸಾಕ್ಷಿ ಇಲ್ಲದ ವರ್ತಕರು ಒಡನೆಯೇ ಬೆಲೆ ಹೆಚ್ಚಿಸಲು ಸಿದ್ಧರಾಗುವರು ಮತ್ತು ತುಟ್ಟಿಭತ್ಯೆಯನ್ನು ಹೆಚ್ಚಿಸಿದ ತಕ್ಷಣದಲ್ಲಿಯೇ ಮೊರಾರ್ಜಿ ದೇಸಾಯಿಯವರು ಹೇಳುವಂತೆ ಅವರು ಬೆಲೆಹೆಚ್ಚಳವನ್ನು ಅನ್ವಯಿಸುವರು. ಹೀಗೆ ಮುರಾರ್ಜಿ ಬಾಯಿಯವರೇ ಬೆಲೆಗಳನ್ನೂ ಹೆಚ್ಚಿಸಲು ಸ್ವತಃ ತಾವೇ ಉತ್ತೇಜನ ನೀಡುತ್ತಿದ್ದಾರೆ. ನಮ್ಮ ಬೇಡಿಕೆಯನ್ನು ಈ ರೀತಿ ವಿರೋಧಿಸದೇ ಹೋಗಿದ್ದರೆ, ಇಷ್ಟೊಂದು ಪ್ರಚಾರ ಅದಕ್ಕೆ ಸಿಗುತ್ತಿರಲಿಲ್ಲ. ಅಲ್ಲದೆ ಅಷ್ಟಾಗಿ ಇದು ಯಾರ ಗಮನಕ್ಕೂ ಬರುತ್ತಿರಲಿಲ್ಲ. ಆದರೆ ಸದನದಲ್ಲಿ ಚರ್ಚೆ ನಡೆಯುತ್ತಿರುವ ಸಂದರ್ಭದಲ್ಲೇ ಅವರು ಕಾರ್ಮಿಕರಿಗೆ ತುಟ್ಟಿಭತ್ಯೆ ಪಾವತಿ ಮಾಡಿದರೆ ಅದರಿಂದ ಬೆಲೆಗಳು ಇನ್ನಷ್ಟು ಏರುತ್ತವೆ ಎಂದು ಸಚಿವರು ತಾವೇ ಹೇಳಿದರೆ ಚಿಕ್ಕ ಚಿಕ್ಕ ಅಂಗಡಿಗಳವರು ಕೂಡ ತುಟ್ಟಿಭತ್ಯೆ ಪಾವತಿ ಮಾಡಿದ ದಿನದಿಂದಲೇ ಬೆಲೆಗಳನ್ನು ಏರಿಸುವುದು ನಿಶ್ಚಿತ. ಏಕೆಂದರೆ ಸರ್ಕಾರವೇ ಅಂತಹ ಒಂದು ಪರಿಸ್ಥಿತಿಯನ್ನು ನಿರ್ಮಿಸುತ್ತದೆ. ಇನ್ನೊಂದೆಡೆಯಿಂದ ನಾವು ಅಂದರೆ ಕಾರ್ಮಿಕರು ಬಲಿಪಶುಗಳಾಗುತ್ತಿದ್ದೇವೆ.

ನೀವು ಕೇಂದ್ರದಲ್ಲಿ ಅಧಿಕಾರದಲ್ಲಿ ಇರುವಾಗ ರಾಜ್ಯಗಳು ಬೆಲೆಏರಿಕೆಯನ್ನು ತಡೆಯುವಲ್ಲಿ ಯಶಸ್ವಿಯಾಗುವುದಾದರೂ ಹೇಗೆ? ಮುರಾರ್ಜಿ ಬಾಯಿಯವರೇ ಕೇಂದ್ರದಲ್ಲಿ ಇರುತ್ತಾ ನಾಲ್ಕು ತಿಂಗಳ ಅವಧಿಯಲ್ಲೇ ನಾವು ಅಂದಾಜು ನಾಲ್ಕು ಕೋಟಿ ರೂಪಾಯಿಗಳ ಕೊರತೆಯನ್ನು ಕಂಡಿದ್ದೇವೆ. ಮುಂಗಡ ಪತ್ರದಲ್ಲಿನ ಕೊರತೆ ಎಂಬತ್ತು ಕೋಟಿ ರೂಪಾಯಿಗಳಿಗೆ ಮುಟ್ಟಿದೆ ಎಂದು ಅವರೇ ಹೇಳಿದ್ದಾರೆ. ಅದಕ್ಕೆ ನಾವು ಕಾರಣರೇ? ಒಂದೆಡೆಯಲ್ಲಿ ಅವರು ಕೊರತೆ ಹಣಕಾಸಿನ ನೀತಿಯನ್ನು ಅನುಸರಿಸುತ್ತಿದ್ದಾರೆ. ಅದು ಬೆಲೆ ಏರಿಕೆಗೆ ಕಾರಣವಾಗಿದೆ. ಇನ್ನೊಂದೆಡೆಯಿಂದ ಕಾರ್ಮಿಕರಿಗೆ ತುಟ್ಟಿಭತ್ಯೆಯನ್ನು ನೀಡಿದರೆ ಬೆಲೆಗಳು ಹೆಚ್ಚುತ್ತವೆ ಎಂಬ ಭಾವನೆಯನ್ನು ಮೂಡಿಸಿದ್ದಾರೆ. ಹಾಗಾಗಿ ಬೆಲೆ ಏರಿಕೆಯನ್ನು ಉತ್ತೇಜಿಸುತ್ತಿರುವವರು ನೀವೇ ಆಗಿದ್ದೀರಿ. ಅದೇ ವೇಳೆಗೆ ವಂಚತಕರಾಗಿರುವ ವರ್ತಕರನ್ನೂ ಕೂಡ ಪ್ರೋತ್ಸಾಹಿಸುತ್ತಿದ್ದೀರಿ. ಈ ರೀತಿಯ ಮನೋವೃತ್ತಿಯನ್ನೂ ನಾವು ಬಲವಾಗಿ ಪ್ರತಿಭಟಿಸುತ್ತೇವೆ. ಮುರಾರ್ಜಿ ಬಾಯಿ ಮತ್ತು ಅವರ ಸರ್ಕಾರ ಎಲ್ಲಾ ಕಡೆ ಬೆಲೆಗಳನ್ನೂ ಸ್ತಂಭನಗೊಳಿಸುವುದಾಗಿ ಹೇಳುತ್ತಿದ್ದಾರೆ. ಅದು ಹೇಗೆ? ಬೆಲೆಗಳನ್ನು ಸ್ತಂಭನಗೊಳಿಸುವ ಹೆಸರಿನಲ್ಲಿ ನೀವು ಕಾರ್ಮಿಕರ ವೇತನಗಳನ್ನು ತಡೆ ಹಿಡಿದಿದ್ದೀರಿ. ಇದು ನ್ಯಾಯವಾದ ಮಾರ್ಗವೇ? ಸೂಕ್ತವಾದ ವಿಧಾನರೆಂದರೆ ಎಲ್ಲಕ್ಕಿಂತ ಮೊದಲು ನಿರೀಕ್ಷಿತ ಮಿತಿಗಿಂತ ಹೆಚ್ಚಿನ ಸಂಪತ್ತು ಮತ್ತು ಆಸ್ತಿಯನ್ನು ಹೊಂದಿರುವವರ ವರಮಾನವನ್ನೂ ನೀವು ಸ್ತಂಭನಗೊಳಿಸಬೇಕಾಗಿತ್ತು. ಮೊನ್ನೆ ನಮ್ಮ ಮಿತ್ರರಾದ ಡಾ. ಲೋಹಿಯಾ ಅವರು ಯಾರಿಗೂ ತಿಂಗಳೊಂದಕ್ಕೆ 1500 ರೂಪಾಯಿಗಳಿಗಿಂತ ಹೆಚ್ಚು ಖರ್ಚು ಮಾಡಲು ಅನುವು ನೀಡಬಾರದೆಂದು ಗೊತ್ತುವಳಿಯೊಂದನ್ನು ಮಂಡಿಸಿದಾಗ ಮುರರ್ಜಿ ಬಾಯಿಯವರು ಅದನ್ನು ಗೇಲಿ ಮಾಡಿದರು. ಹಾಗಿದ್ದಲ್ಲಿ ಮುರಾರ್ಜಿಯವರು ಕಾರ್ಮಿಕರು ತಮ್ಮ ಖರ್ಚುವೆಚ್ಚಗಳನ್ನು ಹೆಚ್ಚಿಸಬಾರದೆಂದು ಏಕೆ ಕೇಳಿದರು. ಅವರ ಅಭಿಪ್ರಾಯದಲ್ಲಿ ಅದು ದೇಶಕ್ಕೆ ಹಾನಿಯನ್ನು ಉಂಟುಮಾಡುತ್ತದೆ. ಹಾಗಿದ್ದರೆ, ಅಗಾಧ ಸಂಪತ್ತು ಹೊಂದಿದವರಿಗೆ ತಿಂಗಳಿಗೆ 1500 ರೂಪಾಯಿಗಳಿಗಿಂತ ಹೆಚ್ಚು ವರಮಾನ ಹೊಂದಿದವರಿಗೆ ಅವರಿಗೆ ಹೆಚ್ಚಿನ ವರಮಾನ ತೆರಿಗೆ ಹೊರಿಸಲಾಗುವುದೆಂದು ಏಕೆ ಹೇಳುವುದಿಲ್ಲ. ಆದರೆ ನೀವು ಅವರಿಗೆ ಹಾಗೆ ಹೇಳುವುದಿಲ್ಲ. ದೊಡ್ಡ ದೊಡ್ಡ ಕುಳಗಳು ಮತ್ತು ಬಂಡವಾಳಶಾಹಿಗಳಿಗೆ ಸಂಬಂಧಿಸಿದ ಪ್ರಶ್ನೆ ಬಂದಾಗ ಮೊರಾರ್ಜಿ ಬಾಯಿಯವರು ತೆಪ್ಪಗಿರುತ್ತಾರೆ. ಆದರೆ ಕಾರ್ಮಿಕರ ಹಿತಾಸಕ್ತಿಯ ಪ್ರಶ್ನೆ ಉದ್ಭವಿಸಿದಾಗ ಅವುಗಳನ್ನು ಎಲ್ಲ ವಿಧದಿಂದ ವಿರೋಧಿಸುತ್ತಾರೆ. ನನ್ನ ಮಿತ್ರರು ಹೇಳಿರುವ ಹಾಗೆ ಕಾರ್ಮಿಕರು ಮುಷ್ಕರ ಕೈಗೊಂಡಾಗ ಅವರು ಅದನ್ನು ದಮನಗೊಳಿಸುವುದು ಹೇಗೆಂದು ಯೋಚಿಸುತ್ತಾರೆ. ಆದರೆ ಈ ಸಲ ಮಾತ್ರ ಅದು ಅವರಿಂದ ಸಾಧ್ಯವಾಗುವುದಿಲ್ಲ ಎಂದು ನಾನು ಅವರಿಗೆ ಹೇಳಬಯಸುತ್ತೇನೆ. ಇಂಟಕ್

ಮತ್ತು ಇತರ ಎಲ್ಲ ಕಾರ್ಮಿಕ ಸಂಘಟನೆಗಳು ಈ ಸಲ ಹಾಗಾಗಲು ಬಿಡಬಾರದೆಂಬ ದೃಢ ನಿರ್ಧಾರ ತಳೆದಿವೆ. ಈ ಪ್ರಶ್ನೆಯು ಯಾವುದೇ ಒಂದು ನಿರ್ದಿಷ್ಟ ತತ್ವಕ್ಕೆ ಸಂಬಂಧಿಸಿದ್ದಲ್ಲ. ಇದು ಕಾರ್ಮಿಕ ಸಮುದಾಯದ ಸಮಷ್ಟಿ ಹಿತಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಅದು ಸಾಮಾಜಿಕ ನ್ಯಾಯದ ಪ್ರಶ್ನೆಯಾಗಿದೆ. ಇದರ ಆರಂಭವಾದರೂ ಎಲ್ಲಿಂದ? ಎಲ್ಲಕ್ಕಿಂತ ಮೊದಲಲ್ಲಿ ದೇಶವು ಹಣಕಾಸಿನ ಬಿಕ್ಕಟ್ಟಿಗೆ ಗುರಿಯಾದಾಗ ಮಿತಿಮೀರಿ ಸಂಪತ್ತು ಮತ್ತು ಆಸ್ತಿಪಾಸ್ತಿಗಳನ್ನು ಹೊಂದಿರುವವರು ದೇಶಕ್ಕೆ ಸಹಾಯ ಮಾಡಲು ಮುಂದೆ ಬರುವಂತೆ ಮಾಡಬೇಕು. ಆದರೆ ಅದು ಹಾಗಾಗುವುದಿಲ್ಲ. ಹಾಗಾಗಿ ಮುರಾರ್ಜಿ ಬಾಯಿಯವರು ಬೆಲೆ ಏರಿಕೆಯನ್ನು ತಡೆಹಿಡಿಯಬೇಕೆಂದು ಬಯಸುತ್ತಾರಾದರೆ ನಾನು ನೀಡುವ ಒಂದೇ ಒಂದು ಸಲಹೆ ಎಂದರೆ ಒಂದು ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಸಂಪತ್ತನ್ನು ಹೊಂದಿರುವ ಎಲ್ಲರ ಮೇಲೂ ವಿಶೇಷ ತೆರಿಗೆ ಅಥವಾ ಲೆವಿಯನ್ನು ವಿಧಿಸಬೇಕು. ಇದನ್ನು ಬಿಟ್ಟರೆ ಇದಕ್ಕೆ ಬೇರಾವ ಪರಿಹಾರ ಮಾರ್ಗವೂ ಇಲ್ಲ.

ಎರಡನೆಯದಾಗಿ, ನೀವು ರೂಪಾಯಿಯನ್ನು ಅಪಮೌಲ್ಯ ಮಾಡಿದ್ದೀರಿ. ಆದರೆ ನೀವು ಅದರ ಮೌಲ್ಯವರ್ಧನೆಗೆ ಸಹಕಾರಿಯಾಗುವ ಕ್ರಮಗಳನ್ನು ತೆಗೆದುಕೊಳ್ಳಬೇಕು. ಕೆಲವೊಂದು ಕರೆನ್ಸಿಯನ್ನೂ ಹಿಂತೆಗೆದುಕೊಳ್ಳುವ ದಿಸೆಯಲ್ಲಿ ಕ್ರಮ ತೆಗೆದುಕೊಳ್ಳಬೇಕು. ಹಾಗಿದ್ದಲ್ಲಿ ಮಾತ್ರ ಬೆಲೆಯನ್ನು ತಗ್ಗಿಸಬಹುದು. ಇಲ್ಲವಾದಲ್ಲಿ ಅಸಾಧ್ಯ. ಅದನ್ನು ಮಾಡುವುದೂ ಸಾಧ್ಯ. ಆದರೆ ಮುರಾರ್ಜಿ ಬಾಯಿಯವರು ಖಂಡಿತಾ ಮಾಡುವುದಿಲ್ಲ. ಕಾರ್ಮಿಕರ ತುಟ್ಟಿಭತ್ಯೆ ಹೆಚ್ಚಳವೊಂದೇ ಬೆಲೆ ಏರಿಕೆಗೆ ಕಾರಣವಲ್ಲ ಎಂಬುದನ್ನು ನಾನು ಈ ಸಂದರ್ಭದಲ್ಲಿ ಸ್ಪಷ್ಟಪಡಿಸುತ್ತೇನೆ. ವಾಸ್ತವವಾಗಿ ದೊಡ್ಡ ಬಂಡವಾಳ ಶಾಹಿಗಳೇ ಅದಕ್ಕೆ ಹೊಣೆಗಾರರಾಗಿದ್ದಾರೆ. ನಾವು ಮೂರು ಯೋಜನೆಗಳನ್ನು ಪ್ರಾರಂಭಿಸಿದ್ದೇವೆ. 25 ಸಾವಿರ ಕೋಟಿ ರೂಪಾಯಿಗಳಿಗೂ ಹೆಚ್ಚು ಹಣವನ್ನು ಅದಕ್ಕಾಗಿ ವಿನಿಯೋಗಿಸಿದ್ದೇವೆ. ಅದರಿಂದ ಶ್ರೀಮಂತರು ಮಾತ್ರವೇ ಇನ್ನಷ್ಟು ಶ್ರೀಮಂತರಾದರು. ಆದರೆ ಅವರ ಮೇಲೆ ಅಪೇಕ್ಷಿತ ಪ್ರಮಾಣದ ಶೇಕಡವಾರು ತೆರಿಗೆಯನ್ನು ವಿಧಿಸಲಿಲ್ಲ. ನೀವು ನಮ್ಮ ಈ ಯೋಜನೆಗಳತ್ತ ಒಮ್ಮೆ ಕಣ್ಣು ಹಾಯಿಸಿ. ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ನಮ್ಮ ಬಂಡವಾಳ ಕಡಿಮೆ ಇದ್ದಾಗ ಉತ್ಪಾದನೆಯ ದರ ಚೆನ್ನಾಗಿಯೇ ಇತ್ತು. ಆದರೆ ಬಂಡವಾಳ ಹೂಡಿಕೆ ಹೆಚ್ಚುತ್ತಾ ಹೋದಂತೆ ಉತ್ಪಾದನೆಯ ದರ ತಗ್ಗುತ್ತಲೇ ಇದೆ. ಎಲ್ಲವೂ ಅಡ್ಡಾದಿಡ್ಡಿಯಾಗಿ ನಡೆಯುತ್ತಿದೆ. ಇಷ್ಟನ್ನು ಹೇಳಿ ನಾನು ಈ ಗೊತ್ತುವಳಿಯನ್ನು ಬೆಂಬಲಿಸುತ್ತೇನೆ. ಆದರೆ ಈ ರೀತಿಯ ಕ್ರಮದಿಂದ ಕಾರ್ಮಿಕರನ್ನು ಅದುಮಿಡಲು ಅವರು ಯೋಚಿಸುತ್ತಾರಾದರೆ ಅದನ್ನು ಮಾತ್ರ ನಡೆಯಗೊಡುವುದಿಲ್ಲ ಎಂದು ಸರ್ಕಾರವನ್ನು ಎಚ್ಚರಿಸ ಬಯಸುತ್ತೇನೆ. ನಾವು ದೇಶವನ್ನು ರಕ್ಷಿಸಲು

ಬಯಸುತ್ತೇವೆಯಾದರೆ, ದೇಶದಲ್ಲಿ ಏಕತೆಯನ್ನು ಕಾಯ್ದುಕೊಳ್ಳಲು ಅಪೇಕ್ಷಿಸುತ್ತೇವೆಯಾದರೆ ನಾವು ಕಾರ್ಮಿಕರ ಬೇಡಿಕೆಗಳನ್ನು ಬೆಂಬಲಿಸಬಾರದು ಬದಲಾಗಿ ಟಾಟಾ ಮತ್ತು ಬಿರ್ಲಾಗಳ ಯೋಜನೆಗಳನ್ನು ಬೆಂಬಲಿಸಬೇಕು ಎಂದು ಮಾನ್ಯ ಹಣಕಾಸು ಸಚಿವರು ಬಹಿರಂಗವಾಗಿಯೇ ಹೇಳುತ್ತಿದ್ದಾರೆ. ಹಾಗಾದಲ್ಲಿ ಮಾತ್ರ ರಾಷ್ಟ್ರ ಉಳಿದೀತೆಂದು ಅವರು ಹೇಳುತ್ತಿದ್ದಾರೆ. ಅವರ ಯೋಚನೆ ಎಷ್ಟೊಂದು ಹಾಸ್ಯಸ್ಪದವಾಗಿದೆ.

## ಅಧ್ಯಾಯ 13

## ಪಕ್ಷಾಂತರ ಕುರಿತ ಗೊತ್ತುವಳಿ*

ಮಾನ್ಯ ಉಪಾಧ್ಯಕ್ಷರೇ, ಕಾಂಗ್ರೆಸ್ ಪಕ್ಷದಲ್ಲಿನ ನನ್ನ ಮಿತ್ರರು ಸದನದ ಮುಂದೆ ಮಂಡಿಸಿರುವ ಈ ಗೊತ್ತುವಳಿಯನ್ನು ತಾತ್ವಿಕವಾಗಿ ನಾನು ವಿರೋಧಿಸುವುದಿಲ್ಲ. ಆದರೆ ದೇಶದಲ್ಲಿನ ಇಂದಿನ ಪರಿಸ್ಥಿತಿಯನ್ನು ಇಂತಹ ಗೊತ್ತುವಳಿಯನ್ನು ಮಂಡಿಸುವ ಮೂಲಕ ಅಥವಾ ಅಂತಹ ಶಾಸನಗಳನ್ನು ತರುವ ಮೂಲಕ ಬದಲಾಯಿಸಲು ಸಾಧ್ಯವಿಲ್ಲ ನನಗನಿಸುತ್ತದೆ. ಇಲ್ಲಿ ಅಥವಾ ಇತರ ಶಾಸನ ಸಭೆಗಳಲ್ಲಿ ಏನು ಸಂಭವಿಸುತ್ತದೆಯೋ ಅದು ಈ ವಿಧಾನಸಭೆಗಳು ಅಥವಾ ಈ ಸದನಕ್ಕೆ ಮಾತ್ರವೇ ಸೀಮಿತವಾಗಿಲ್ಲ. ಇದು ಬರಿಯ ಒಂದು ಗುಣಲಕ್ಷಣ. ನಮ್ಮ ದೇಶದಲ್ಲಿನ ಸಾರ್ವಜನಿಕ ಜೀವನದ ಪತನದ ಒಂದು ಸಂಕೇತ ಅದಾಗಿದೆ. ಹಾಗಾಗಿ ಶಾಸನವೊಂದನ್ನು ತರುವ ಮೂಲಕ ಈ ಪರಿಸ್ಥಿತಿಯನ್ನು ಸುಧಾರಿಸುವುದಾಗಲಿ, ಬದಲಾಯಿಸುವುದಾಗಲೀ ಅಸಾಧ್ಯ. ಇಂತಹ ಕಾಯ್ದೆಯೊಂದನ್ನು ತರಲು ನೀವು ಬಯಸುತ್ತಿದ್ದೀರಾ ಎಂದು ಒಮ್ಮೆ ಗೃಹ ಸಚಿವರನ್ನು ಕೇಳಿದಾಗ ಅಂತಹ ಕಾನೂನು ಅದಕ್ಕೆ ಸಹಕಾರಿಯಾಗಲಾರದು ಎಂದು ಅವರು ಉತ್ತರಿಸಿದ್ದು ನನಗಿನ್ನೂ ಚೆನ್ನಾಗಿ ನೆನಪಿದೆ. ಆ ಸಂದರ್ಭದಲ್ಲಿ ಗೃಹ ಸಚಿವರು ಹೇಳಿದ್ದು ಸರಿ ಎಂದು ನಾನು ಹೇಳಿದ್ದೆ. ನಾವೊಂದು ಪರಂಪರೆಯನ್ನು ಸ್ಥಾಪಿಸಿದರೆ ನಮ್ಮ ಧ್ಯೇಯವನ್ನು ಸಾಧಿಸಲು ಅದೊಂದೇ ಸಹಾಯಕವಾಗಲಾರದು. ಇದು ನಮ್ಮ ಗೃಹಸಚಿವರ ಸ್ವತಃ ಅನುಭವ ಕೂಡ ಆಗಿದೆ. ಮಹಾರಾಷ್ಟ್ರದಲ್ಲಿ ನಮ್ಮೊಂದಿಗೆ ಇಂತಹ ಒಂದು ಒಡಂಬಡಿಕೆಯನ್ನು ಮಾಡಿಕೊಂಡಿದ್ದರು. ಆ ಕಾರಣಕ್ಕಾಗಿಯೇ ನಾನು ಈಗ ಮಧ್ಯ ಪ್ರವೇಶಿಸಿ ನನ್ನ ಅಭಿಪ್ರಾಯ ನೀಡಿದ್ದೆ. ನಾವು ಆ ಒಡಂಬಡಿಕೆಯಲ್ಲಿ ಏನನ್ನೂ ಸೂಚಿಸಿದ್ದೇವೋ ಅದನ್ನೇ ಕಾಂಗ್ರೆಸ್ ಪಕ್ಷದಲ್ಲಿನ ನಮ್ಮ ಮಿತ್ರರು ಇಂದು ಪುನರಾವರ್ತಿಸುತ್ತಿದ್ದಾರೆ. 1960 ರಲ್ಲಿ ಪಕ್ಷಾಂತರವನ್ನು ವಿರೋಧಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವಾಗ ಈ ಸಂಬಂಧದಲ್ಲಿ ಸರ್ವಪಕ್ಷಗಳ ಸಭೆಯೊಂದನ್ನು ಕರೆದು ಒಂದು ಕಟ್ಟುಪಾಡನ್ನು ವಿಧಿಸಲು ಉದ್ದೇಶಿಸಿದ್ದೆವು. ಯಾವನೇ ಸದಸ್ಯನಾದರೂ ಪಕ್ಷಾಂತರ ಮಾಡುವುದನ್ನು ತಡೆಗಟ್ಟಲು ನಮ್ಮಿಂದ ಸಾಧ್ಯವಿಲ್ಲವಾದಲ್ಲಿ ಅಂತಹ ಪಕ್ಷಾಂತರಿಯನ್ನು ನಾವು ಪಕ್ಷದೊಳಕ್ಕೆ ಸೇರಿಸಿಕೊಳ್ಳಬಾರದು ಎಂಬ ಸಣ್ಣ ಕಟ್ಟುಪಾಡು ಅದಾಗಿತ್ತು. ಪಕ್ಷಾಂತರ ಮಾಡಿದವನನ್ನು ನಾವು ನಮ್ಮ ಪಕ್ಷದೊಳಕ್ಕೆ ಸೇರಿಸಿಕೊಳ್ಳುವುದಾದರೂ ಏಕೆ? ಅದಕ್ಕೆ ಅನೇಕ ಉದಾಹರಣೆಗಳಿವೆ. ಈ ಎಲ್ಲ ದೃಷ್ಟಾಂತಗಳನ್ನು ನಾವು ಸಂಗ್ರಹಿಸಿದರೆ ಅದು ಮಹಾಭಾರತದಷ್ಟು ದೊಡ್ಡ ಸಂಪುಟವೇ ಆಗುತ್ತದೆ.

* ಲೋಕಸಭಾ ಚರ್ಚೆ, 24 ನವೆಂಬರ್, 1967, ಸಿ.ಸಿ. 2816-2822

ಚರ್ಚೆಯ ಮಧ್ಯೆ:

ಶ್ರೀ ಅಶೋಕ್ ಮೆಹ್ತಾ ಅವರನ್ನು ಕುರಿತು ನಾನು ಏನು ಹೇಳಲು ಹೋಗುತ್ತೇನೆ ಎಂಬುದನ್ನು ಆಲಿಸುವ ತಾಳ್ಮೆ ನಿಮಗಿದ್ದಿದ್ದಲ್ಲಿ ನೀವು ಈ ಎಲ್ಲ ಪ್ರಶ್ನೆಗಳನ್ನು ಎತ್ತಲು ಸಂದರ್ಭವೇ ಬರುತ್ತಿರಲಿಲ್ಲ. ಶ್ರೀ ಅಶೋಕ್ ಮೆಹ್ತಾ ಅವರ ಹೆಸರು ಆಗಾಗ ಪ್ರಸ್ತಾಪಗೊಂಡದ್ದನ್ನು ನಾನು ಹೇಳಬೇಕೆಂದಿದ್ದೆ. ಆದರೆ ಶ್ರೀ ಅಶೋಕ್ ಮೆಹ್ತಾ ಅವರು ನಮ್ಮ ಪಕ್ಷವನ್ನು ಬಿಟ್ಟಾಗ ಆಗ ಅವರು ನಮ್ಮ ಪಕ್ಷದ ಸದಸ್ಯರಾಗಿರಲಿಲ್ಲ ಎಂಬ ವಾಸ್ತವಾಂಶವನ್ನು ನೀವೆಲ್ಲರೂ ಮರೆತಿದ್ದೀರಿ.

*

ಚರ್ಚೆಯ ಮಧ್ಯೆ:

ನೀವು ಅದನ್ನು ಮರೆತಿಲ್ಲ. ಆದರೆ ಈ ಮಂದಿಗೆ ನಾನೇನು ಹೇಳುತ್ತಿದ್ದೇನೆ ಎಂಬುದು ಅರ್ಥವಾಗುವುದಿಲ್ಲ. ಶೋಕ್ ಮೆಹ್ತಾ ಅವರು ಎಸಗಿರುವ ಒಂದೇ ಒಂದು ತಪ್ಪೆಂದರೆ ಅವರು ಇತರ ಸದಸ್ಯರನ್ನು ಪಕ್ಷಾಂತರಕ್ಕೆ ಪ್ರಚೋದಿಸಿರುವುದು. ಅವರು ತಾವೇ ಪಕ್ಷಾಂತರ ಮಾಡಿಲ್ಲ. ನಾನೇನು ಹೇಳುತ್ತಿದ್ದೇನೆಂದರೆ ನಾವು ಪಕ್ಷಾಂತರ ಮಾಡುವುದನ್ನು ಕೂಡ ಅಷ್ಟಾಗಿ ವಿರೋಧಿಸಿಲ್ಲ ಎಂದು. ಆದರೆ ನೀವು ಕಾಂಗ್ರೆಸ್ ಪಕ್ಷದಲ್ಲಿ ಅವರನ್ನು ಏಕೆ ಸ್ವೀಕರಿಸುತ್ತೀರಿ. ಅಂತಹ ಪಕ್ಷಾಂತರಿಯ ಸ್ಥಾನಮಾನ ಏನೆಂದು ನಮ್ಮನ್ನು ಕೇಳಿದಿರಿ. ಅವರು ಸ್ವತಂತ್ರ ಸದಸ್ಯರಾಗಿ ಪರಿಗಣಿಸಲ್ಪಡಬೇಕೆಂದು ನಾವು ನಿಮಗೆ ಸಲಹೆ ಮಾಡಿದೆವು. ಇಂತಹ ಸ್ವತಂತ್ರ ಅಭ್ಯರ್ಥಿಗಳಿಗೆ ಸಿಗುವ ಸ್ಥಾನಮಾನದ ಬಗ್ಗೆ ಅನೇಕ ಸದಸ್ಯರು ಸಂದೇಹವನ್ನು ಎತ್ತಿದರು. ನಮ್ಮ ದೇಶದಲ್ಲಿ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ ಇದೆ ಎಂದು ನಾವು ಹೇಳುವಾಗ ನಾವೆಲ್ಲರೂ ರಾಜಕೀಯ ಪಕ್ಷಗಳ ಅಸ್ತಿತ್ವವನ್ನು ಅಂಗೀಕರಿಸಿರುತ್ತೇವೆ. ಹಾಗಿರುವಲ್ಲಿ ಸ್ವತಂತ್ರ ಸದಸ್ಯರು ಮಾತ್ರವೇ ಇದ್ದಲ್ಲಿ ಸರ್ಕಾರ ಕಾರ್ಯ ನಿರ್ವಹಿಸುವುದಾದರೂ ಹೇಗೆ? ಈ ಸದಸ್ಯರು ತಮಗೆ ಇತರ ಪಕ್ಷಗಳ ಸದಸ್ಯರಿಗೆ ಇರುವ ಹಕ್ಕುಗಳೇ ಬೇಕೆಂದು ಹಕ್ಕು ಸ್ಥಾಪಿಸಿದರೆ ಅದರ ಪರಿಣಾಮ ಏನಾದೀತು? ಯಾರಿಗೂ ಅವರ ಹಕ್ಕನ್ನು ಮಾನ್ಯ ಮಾಡುವುದು ಸಾಧ್ಯವಾಗದು. ಆದ್ದರಿಂದ ಯಾವನೇ ಸದಸ್ಯ ಪಕ್ಷಾಂತರ ಮಾಡಿದಾಗ ಆತನಿಗೆ

ಚರ್ಚೆಯ ಮಧ್ಯೆ ಸಂಘದ ಸದಸ್ಯರಾದ ಚೆಂಗಲರಾಯ ನಾಯ್ಡು:- ನಾನು ಒಂದು ಮಾತು ಹೇಳುತ್ತೇನೆ. ನಿನ್ನೆ ಶ್ರೀ ಅಶೋಕ್ ಮಹ್ತಾ ಅವರು ಶ್ರೀ ಮಧು ಲಿಮಯೆ ಅವರು ಬರೆದ ಪತ್ರವೊಂದನ್ನು ಸದನದಲ್ಲಿ ಓದಿ ಸಮಾನ ಮನಸ್ಕರು ನಿಮ್ಮೊಂದಿಗಿದ್ದಾರೆ ಎಂದು ಸೂಚಿಸಿದ್ದನ್ನು ಪ್ರಸ್ತಾಪಿಸಿದ್ದರು.

ಶ್ರೀ ಪಿ.ವಿ. ವೆಂಕಟಸುಬ್ಬಯ್ಯ : ಇಲ್ಲ ನಾನು ಅದನ್ನು ಮರೆತಿಲ್ಲ.

ಇನ್ನಾವುದೇ ಪಕ್ಷ ಸೇರಲು ಅವಕಾಶ ನೀಡಬಾರದು ಮತ್ತು ಈ ಕಟ್ಟಳೆ ಭವಿಷ್ಯದಲ್ಲೂ ಅನುಸರಿಸಲ್ಪಡಬೇಕೆಂದು ತೀರ್ಮಾನಿಸಲಾಯಿತು. ಆದರೆ ಆ ಸಂದರ್ಭದಲ್ಲಿ ನನ್ನ ಮಿತ್ರ ಮಧು ಲಿಮಯೆ ಅವರು ಗೃಹ ಸಚಿವರಿಗೆ ಈ ಕಟ್ಟುಪಾಡಿನ ಬಗ್ಗೆ ನೆನಪಿಸಿ ಕೊಟ್ಟರೆಂಬುದು ನನ್ನ ಸ್ಮರಣೆಯಲ್ಲಿದೆ. ಮಹಾರಾಷ್ಟ್ರವು ಒಂದು ಸಂಕ್ರಮಣ ಅವಧಿಯಲ್ಲಿ ಹಾದಗಿ ಹೋಗುತ್ತಿದೆ. ಅದೇ ರೀತಿ ಒಂದು ರೀತಿಯ ಸಂಕ್ಷೋಭೆಯ ವಾತಾವರಣದಲ್ಲಿದೆ. ರಾಜಕೀಯ ನಿಷ್ಠೆಗಳು ದಿನದಿಂದ ದಿನಕ್ಕೆ ಬದಲಾಗುತ್ತಾ ಇವೆ. ಇಂತಹ ಪರಿವರ್ತನೆಯ ಅವಧಿಯಲ್ಲಿ ಜನರಿಗೆ ಪಕ್ಷಾಂತರ ಅಥವಾ ನಿಷ್ಠಾಂತರದ ಹಕ್ಕು ಇರಲೇ ಬೇಕು ಎಂಬುದನ್ನು ಅವರು ನೆನಪಿಸಿಕೊಟ್ಟರು. ಇದು ಆಗಿನ ನಮ್ಮ ಗೃಹ ಸಚಿವರ ಅಭಿಪ್ರಾಯವೂ ಆಗಿತ್ತು. ಆದರೆ ನಮ್ಮ ಮಿತ್ರ ಶ್ರೀ ಮಧು ಲಿಮಯೆ ಅವರು ಈ ಅಭಿಪ್ರಾಯವನ್ನು ಒಪ್ಪಲಿಲ್ಲ. ಆದರೆ ನಾನು ಅದನ್ನು ಒಪ್ಪಿಕೊಂಡೆ. ಹಾಗಿದ್ದರೆ 1962 ರಲ್ಲಿ ಪಕ್ಷಾಂತರಿಗಳಿರುವುದಿಲ್ಲವೇ? ಎಂಬ ಪ್ರಶ್ನೆಯೊಂದು ಆಗ ಎದುರಾಯಿತು. 1960 ರಲ್ಲಿ ಪಕ್ಷಾಂತರಗಳು ನಡೆದರೆ ಮತ್ತೆ ನೀವು ಅದನ್ನು ಒಪ್ಪಿಕೊಂಡರೆ 1962ರ ವೇಳೆಗೆ ಪರಿಸ್ಥಿತಿ ಸ್ಥಿರವಾದರೆ ಆಗ 1962 ರ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರು ನಿಮ್ಮ ಪಕ್ಷಕ್ಕೆ ಪಕ್ಷಾಂತರ ಮಾಡಲು ಆಸ್ಪದ ನೀಡುವುದಿಲ್ಲ ಎಂದು ನೀವು ಭರವಸೆ ನೀಡುತ್ತಿರಾ? ಎಂದು ಕೇಳಿದೆ. ಅವರು ಈ ಪ್ರಸ್ತಾಪವನ್ನು ಒಪ್ಪಿಕೊಂಡರು.

*

ಚರ್ಚೆಯ ಮಧ್ಯೆ:

ಗೃಹಸಚಿವರು ಅದನ್ನು ಅಂಗೀಕರಿಸಿದ್ದಾರೆ. ಆದರೆ ಅಲ್ಲೇನಾಯಿತು? ತಾವು ಜಾರಿಗೆ ತಂದ ಕಟ್ಟುಪಾಡುಗಳನ್ನು ತಾವೇ ಉಲ್ಲಂಘಿಸಿರುವಾಗ ನಾವು ಹೊಸ ಕಟ್ಟುಪಾಡುಗಳನ್ನು ತರುವುದಾದರೂ ಹೇಗೆ? ಎಂದು ನಾವು ಅವರನ್ನು ಕೇಳಬೇಕು. ಈ ಸಂಬಂಧದಲ್ಲಿ ನಾವು ಕೆಲವು ವ್ಯಕ್ತಿಗಳ ಹೆಸರನ್ನು ಉದ್ಧರಿಸಿದೆವು. ಅಧಿಕಾರದ ಲಾಲಸೆಯಿಂದ ಪ್ರೇರಿತವಾಗಿ ಅಥವಾ ಸರ್ಕಾರ ರಚಿಸುವ ತುರ್ತಿನಿಂದಾಗಿ ನೀವು ಯಾರನ್ನಾದರೂ ಪಕ್ಷಕ್ಕೆ ಸೇರಿಸಿಕೊಂಡರೆ ಅದನ್ನು ಅರ್ಥ ಮಾಡಿಕೊಳ್ಳಬಹುದು. ಆದರೆ ಕಾಂಗ್ರೆಸ್ ಪಕ್ಷವು ಭಾರಿ ಬಹುಮತ ಪಡೆದಿರುವಾಗ ನೀವು ಇತರ ವ್ಯಕ್ತಿಗಳನ್ನು ನಿಮ್ಮ ಪಕ್ಷಕ್ಕೆ ಸೇರುವಂತೆ ಪ್ರಲೋಭನೆ ಒಡ್ಡುವುದು ಏಕೆ? ಅವರು ಮಹಾರಾಷ್ಟ್ರದ ಮುಖ್ಯಮಂತ್ರಿಯಾಗಿದ್ದಾಗ ಮತ್ತು ನಾನು ಅಲ್ಲಿ ಪ್ರತಿಪಕ್ಷದ ಮುಖಂಡನಾಗಿದ್ದಾಗ ನನ್ನ ಪಕ್ಷದ ಕೆಲ ಸದಸ್ಯರು ಅವರ ಪಕ್ಷಕ್ಕೆ ಪಕ್ಷಾಂತರ ಮಾಡುವರೆಂದು ಈ ವಿಷಯದಲ್ಲಿ ನನ್ನ ಅಭಿಪ್ರಾಯ ಏನೆಂದು ಕೇಳಿದರು. ನನ್ನ ಅಭಿಪ್ರಾಯದಲ್ಲಿ ಅವರು ಬಯಸುವುದಾದಲ್ಲಿ

ಪಕ್ಷಾಂತರ ಮಾಡುತ್ತಿರುವ ಸದಸ್ಯರನ್ನು ಅವರು ಸ್ವೀಕರಿಸಬಹುದು. ಏಕೆಂದರೆ ಯಾವ ಸದಸ್ಯರನ್ನಾದರೂ ಪಕ್ಷಾಂತರ ಮಾಡದಂತೆ ತಡೆಯುವುದು ಸಾಧ್ಯವಿಲ್ಲ. ಇಂತಹ ಸದಸ್ಯರು ಪಕ್ಷಾಂತರ ನಿರ್ಧಾರ ತೆಗೆದುಕೊಂಡಿದ್ದಾರೆಂದರೆ ಅದನ್ನು ನಾವು ತಡೆಯಲಾರೆವು. ಆದರೆ ಅಂತಹ ಸದಸ್ಯರನ್ನು ಐದು ವರ್ಷಗಳ ಅವಧಿಗೆ ಸೋಂಕುರೋಗಿಗಳನ್ನು ದೂರದಲ್ಲಿಡುವಂತೆ ನೀವು ಅವರನ್ನು ಪ್ರತ್ಯೇಕವಾಗಿರಿಸಬೇಕು. ಹಾಗಾದಲ್ಲಿ ಮಾತ್ರ ನಮ್ಮ ಪಕ್ಷದಿಂದ ನಿಮ್ಮ ಪಕ್ಷಕ್ಕೆ ಎಷ್ಟು ಮಂದಿ ಸದಸ್ಯರು ಪಕ್ಷಾಂತರ ಮಾಡುತ್ತಾರೆ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಅವರು ಹಾಗೆ ಮಾಡಲಿಲ್ಲ. ಅದಕ್ಕೆ ತದ್ವಿರುದ್ಧವಾಗಿ ಪಕ್ಷಾಂತರಿಗಳನ್ನು ಸಚಿವರನ್ನಾಗಿ ನೇಮಿಸಿದರು. ಹೀಗೆ ಇಲ್ಲಿಂದ ಪಕ್ಷಾಂತರದ ಆಟ ಆರಂಭವಾಯಿತು.

ನಾವೀಗ ಪಕ್ಷಾಂತರಗಳನ್ನು ತಡೆಹಿಡಿಯಲು ಕೆಲವೊಂದು ವಿಧಾನಗಳನ್ನು ರೂಪಿಸುವುದು ಅತ್ಯಗತ್ಯವಾಗಿದೆ ಪಕ್ಷಾಂತರ ಮಾಡಿದ ಸದಸ್ಯರನ್ನು ಸದನದ ಸದಸ್ಯತ್ವದಿಂದ ಅನರ್ಹಗೊಳಿಸಲು ಕಾಯ್ದೆಯೊಂದನ್ನು ನಾವು ಮಾಡಿದರೆ ಮತ್ತು ಅಂತಹ ಪಕ್ಷಾಂತರಿ ಪುನರಾಯ್ಕೆಗೊಂಡರೆ ನಾವೇ ನಗೆಪಾಟಲಿಗೆ ಗುರಿಯಾಗುವ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಮಹಾರಾಷ್ಟ್ರ ವಿಧಾನಸಭೆಯಲ್ಲಿ ಓರ್ವ ಸದಸ್ಯರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲಾಯಿತು ಮತ್ತು ಈ ಸದಸ್ಯರನ್ನು ಅವರು ಸದಸ್ಯರಾಗಿರಲು ಅನರ್ಹರು ಎಂದು ತೀರ್ಮಾನಿಸಲಾಯಿತು. ಆದರೆ ಅನಂತರದಲ್ಲಿ ಸದಸ್ಯರು ಪುನಃ ಚುನಾವಣೆಯಲ್ಲಿ ಸ್ಪರ್ಧಿಸಿ ಅತ್ಯಧಿಕ ಮತಗಳಿಂದ ಚುನಾಯಿತರಾದರು. ನಾವು ಈ ಬಗೆಯ ಅಣಕಕ್ಕೆ ನಮ್ಮನ್ನು ಒಡ್ಡಿಕೊಳ್ಳಬಾರದು. "ನೀವು ಈ ಸದಸ್ಯರನ್ನು ಸದನದಿಂದ ಹೊರ ಹಾಕಿದಿರಿ. ಆದರೆ ಈತ ಪುನಃ ಚುನಾವಣೆಗೆ ಸ್ಪರ್ಧಿಸದಂತೆ ಈತನನ್ನು ಅನರ್ಹಗೊಳಿಸಲಿಲ್ಲ. ಅಂತಹ ಸದಸ್ಯ ಮತ್ತೊಮ್ಮೆ ಚುನಾವಣೆಗೆ ಸ್ಪರ್ಧಿಸಲು ಮತ್ತು ಗೆದ್ದು ಬರಲು ಅವಕಾಶ ಇರುವಾಗ ನಾವು ನಗೆಪಾಟಲಿಗೆ ಈಡಾಗುತ್ತಿದ್ದೇವೆ" ಎಂದು ನಾನು ಹೇಳಿದ್ದೆ. ಆದ್ದರಿಂದ ನಾವು ಕಟ್ಟುಪಾಡನ್ನು ಜಾರಿಗೆ ತರಲೇಬೇಕಾಗಿದೆ. ಬರಿಯ ಶಾಸನವೊಂದನ್ನು ಅಥವಾ ಕಾಯ್ದೆಯನ್ನು ರೂಪಿಸುವುದರಿಂದ ನಾವು ನಮ್ಮ ಧ್ಯೇಯವನ್ನು ಸಾಧಿಸಿದಂತಾಗುವುದಿಲ್ಲ. ಹಾಗಾಗಿ ಒಂದು ಕಟ್ಟುಪಾಡೊಂದನ್ನು ನಾವು ಸ್ವೀಕರಿಸಲೇಬೇಕು. ಕಾಂಗ್ರೆಸ್ ಪಕ್ಷವು ಇತರ ಪಕ್ಷದಲ್ಲಿ ಒಡಕನ್ನು ಉಂಟು ಮಾಡಲು ಯತ್ನಿಸುತ್ತಿದೆ ಎಂದು ಪ್ರಕಾಶ್ ವೀರ ಶಾಸ್ತ್ರೀಜಿ ಅವರು ಆರೋಪಿಸಿದಾಗ ಪ್ರಧಾನ ಮಂತ್ರಿಯವರು ನಾವು (ಕಾಂಗ್ರೆಸಿಗರು) ಪ್ರತಿಪಕ್ಷವನ್ನು ರಚಿಸಲು ನಿಂತಿಲ್ಲ ಎಂದು ವ್ಯಂಗ್ಯೋಕ್ತಿಯ ಧಾಟಿಯಲ್ಲಿ ಮಾತನಾಡಿದ್ದರು. ಪಟ್ಟಂ ತಾನು ಪಿಳ್ಳೈ ಅವರು ನಮ್ಮ ಪಕ್ಷದಿಂದ ಪಕ್ಷಾಂತರ ಮಾಡಿದಾಗ ಕಾಂಗ್ರೆಸ್ ಪಕ್ಷದ ಸದಸ್ಯರು ಪದೇ ಪದೇ "ನಿಮ್ಮ ಹೆಂಡತಿ ನಿಮ್ಮೊಂದಿಗೆ ಇರಲು ಬಯಸುವುದಿಲ್ಲವಾದರೆ ನಾವೇನು ತಾನೇ ಮಾಡಲು ಸಾಧ್ಯ?" ಎಂದು ಪ್ರಶ್ನಿಸಿದರು. ಅದಕ್ಕೆ ನಾನು ಅದರರ್ಥ"

ನಿಮಗೆ ಈ ಮಹಿಳೆಯೊಂದಿಗೆ ಅಕ್ರಮ ಸಂಬಂಧ ಹೊಂದಿರಲು ಪರವಾನಗಿ ಎಂದರ್ಥವಲ್ಲ" ಎಂದು ಹೇಳಿದ್ದೆ. ನೀವು ಏಕೆ ಪಕ್ಷಾಂತರಿಗಳನ್ನು ಸ್ವೀಕರಿಸುತ್ತೀ ಇಂತಹ ಹೀನ ಪ್ರವೃತ್ತಿಯನ್ನು ನೀವು ಅನುಸರಿಸಬಾರದಿತ್ತು. ಆದರೆ ನೀವು ಹಾಗೆ ಮಾಡಿದಿರಿ. ಆದರೆ ಈಗ ಪಕ್ಷಾಂತರದ ವಿಷ ರಾಷ್ಟ್ರ ರಾಜಕಾರಣದ ದೇಹವನ್ನು ಸಂಪೂರ್ಣವಾಗಿ ವ್ಯಾಪಿಸಿಕೊಂಡಿದೆ. ಅದರ ಪರಿಣಾಮಗಳು ನಮ್ಮ ಮುಂದೆಯೇ ಕಾಣುತ್ತಿದೆ.

ಚುನಾವಣೆಗಳ ನಂತರದಲ್ಲಿ ಮೊದಲ ಬಾರಿಗೆ ನಾವಿಲ್ಲಿಗೆ ಬಂದಾಗ ರಾಷ್ಟ್ರಪತಿಗಳ ಭಾಷಣದಲ್ಲಿ ಜನತಂತ್ರದ ಸಾಮರ್ಥ್ಯ ಕುರಿತು ನಮಗೆ ತಿಳಿ ಹೇಳಲಾಗಿತ್ತು. ಈ ಜನತಂತ್ರದ ಸಾಮರ್ಥ್ಯವನ್ನು ನಾವು ನಿಜವಾದ ಅರ್ಥದಲ್ಲಿ ಗ್ರಹಿಸಿಕೊಂಡಿದ್ದರೆ, ನಾವು ಕೆಲವೊಂದು ಪ್ರಶ್ನೆಗಳ ಮೇಲೆ ಸಹಮತಕ್ಕೆ ಬರಬಹುದಾಗಿತ್ತು. ಆದರೆ ಅಂತಹ ಸಹಮತದ ಸ್ಫೂರ್ತಿಯೇ ತಪ್ಪಿಹೋಗಿದೆ ಎಂದು ನನಗನಿಸುತ್ತಿದೆ. ಉಪಸಭಾಪತಿಗಳ ಚುನಾವಣೆಯ ಕಾಲದಲ್ಲಿ ಕೂಡಾ ನಮಗೆ ಏಕಾಭಿಪ್ರಾಯಕ್ಕೆ ಬರಲು ಸಾಧ್ಯವಾಗಲಿಲ್ಲ. ಅನಂತರದಲ್ಲಿ ಬಂದಿತು ರಾಷ್ಟ್ರಪತಿಗಳ ಚುನಾವಣೆ. ಡಾ. ಜಕೀರ್ ಹುಸೇನ್ ಅವರ ಹೆಸರನ್ನು ನಾನೇ ಸೂಚಿಸಿದ್ದೆ. ಆದರೆ ಈ ವಿಷಯದಲ್ಲಿ ಒಮ್ಮತದ ಅಭಿಪ್ರಾಯ ರೂಪಿಸಲು ಕಾಂಗ್ರೆಸ್ ನಮ್ಮನ್ನು ಆಹ್ವಾನಿಸಲೇ ಇಲ್ಲ. ಪ್ರತಿಪಕ್ಷಗಳ ಸದಸ್ಯರನ್ನು ಆಹ್ವಾನಿಸಿದಾಗ ಒಂದು ರೀತಿಯ ಸವಾಲಿನ ಧಾಟಿಯಲ್ಲಿ ಒಮ್ಮತದ ಅಭ್ಯರ್ಥಿಯ ಹೆಸರನ್ನು ಸೂಚಿಸುವಂತೆ ಕೇಳಿಕೊಳ್ಳಲಾಯಿತು. ಹೀಗೆ ಸೇರಿದಾಗ ಪ್ರತಿಪಕ್ಷದವರು ರಾಷ್ಟ್ರಪತಿಯವರ ಸ್ಥಾನಕ್ಕೆ ಡಾ. ಜಕೀರ್ ಹುಸೇನ್ ಅವರ ಹೆಸರನ್ನು ಒಪ್ಪಿಕೊಳ್ಳಬೇಕು ಮತ್ತು ಉಪರಾಷ್ಟ್ರಪತಿಗಳ ಸ್ಥಾನಕ್ಕೆ ಪ್ರತಿಪಕ್ಷದವರರು ಸೂಚಿಸಿದ ಅಭ್ಯರ್ಥಿಯನ್ನು ಆಡಳಿತ ಪಕ್ಷ ಒಪ್ಪಿಕೊಳ್ಳಬೇಕು ಎಂಬ ಷರತ್ತಿನ ಮೇರೆಗೆ ಒಂದು ತಿಳುವಳಿಕೆಗೆ ಬರಲು ಯತ್ನಿಸಲಾಯಿತು. ಆದರೆ ಅದನ್ನು ಆಡಳಿತ ಪಕ್ಷ ಒಪ್ಪಿಕೊಳ್ಳಲಿಲ್ಲ. ಆದರೆ ಇಂತಹ ಮೇಲ್ನೋಟದ ತೇಪೆದಾರಿಕೆ ನಮ್ಮನ್ನು ಎಲ್ಲಿಗೂ ಒಯ್ಯಲಾರದು. ಇಂತಹ ವಿಷಯಗಳಲ್ಲಿ ಕೆಲವೊಂದು ಮೂಲಭೂತ ಅಂಶಗಳನ್ನು ನಾವು ಪರಿಗಣಿಸಬೇಕಾಗುತ್ತದೆ.

ದೇಶದ ಮುಂದಿರುವ ಪ್ರಶ್ನೆಗಳ ವಿಷಯದಲ್ಲಿ ನಮ್ಮ ಜನತೆಯೂ ಕಾಳಜಿ ಹೊಂದಿದವರಾಗಿದ್ದಾರೆ ಎಂಬುದನ್ನು ನಾನು ಒಪ್ಪುತ್ತೇನೆ. ಜನ ಹಿಂಸೆಯನ್ನು ಬಯಸುವುದಿಲ್ಲ ಎಂಬುದು ನನಗೆ ಗೊತ್ತಿದೆ. ಆದರೆ ಸರ್ಕಾರ ಅದೊಂದು ವೇಳೆ ನಮ್ಮ ಪಕ್ಷದ ಸರ್ಕಾರವೇ ಆಗಿದ್ದರೂ ಬಡವರ ಸ್ಥಿತಿಗತಿಗಳತ್ತ ಗಮನ ನೀಡುತ್ತಿಲ್ಲ ಎಂಬ ನೋವು ಅವರಿಗಿದ್ದೇ ಇದೆ. ಜನತೆಯಲ್ಲಿ ಮನೋಸ್ಥಿತಿ ಹೇಗಿದೆ ಎಂಬ ಕಡೆಗೆ ನಾನು ನಿಮ್ಮ ಗಮನ ಸೆಳೆಯಲು ಬಯಸುತ್ತೇನೆ. ನಮ್ಮ ಮನೆಯಲ್ಲಿ ಓರ್ವ ಕೆಲಸದಾಕೆ ಇದ್ದಾಳೆ. ಆಕೆಯ ಗಂಡ ಒಮ್ಮೆ ನೇಪಾಳಕ್ಕೆ ಹೋಗಿದ್ದ. ಅಲ್ಲಿ ನೆರೆ ಬಂದಿದ್ದರಿಂದ

ಆತ ಬರುವುದು ನಾಲ್ಕು ದಿನ ವಿಳಂಬವಾಯಿತು. ಆತ ಸಿ.ಪಿ.ಡಬ್ಲ್ಯೂ.ಡಿಯಲ್ಲಿ ದಿನಗೂಲಿ ಕಾರ್ಮಿಕನಾಗಿದ್ದ ಈ ನಾಲ್ಕು ದಿನ ಆತ ಗೈರು ಹಾಜರಾಗಿದ್ದುದ್ದಕ್ಕಾಗಿ ಅವನನ್ನು ಸೇವೆಯಿಂದ ವಜಾಗೊಳಿಸಲಾಯಿತು. ಈತನ ನಿಯಂತ್ರಣ ಮೀರಿದ ಸಾಂದರ್ಭಿಕ ಕಾರಣಗಳಿಂದಾಗಿ ಆತನಿಗೆ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು, ಹಾಗಾಗಿ ಆತನನ್ನು ಸೇವೆಯಿಂದ ವಜಾಗೊಳಿಸಬಾರದೆಂದು ಸಂಬಂಧಪಟ್ಟ ಕಾರ್ಯನಿರ್ವಾಹಕ ಎಂಜಿನಿಯರ್‌ಗೆ ಪತ್ರವೊಂದನ್ನು ಬರೆದೆ. ಆ ಎಂಜಿನಿಯರ್ ಈ ಪತ್ರಕ್ಕೆ ಉತ್ತರ ನೀಡಲಿಲ್ಲ. ಅನಂತರದಲ್ಲಿ ನಾನು ಈ ವಿಷಯವನ್ನು ಸಚಿವರ ಗಮನಕ್ಕೆ ತಂದೆ. ಅವರು ನನ್ನನ್ನು ಕರೆದು ಈ ವ್ಯಕ್ತಿಯನ್ನು ಮರಳಿ ಕೆಲಸಕ್ಕೆ ತೆಗೆದುಕೊಳ್ಳುವುದಾಗಿ ಆಶ್ವಾಸನೆ ನೀಡಿಧರು. ಆದರೆ ಆ ವ್ಯಕ್ತಿ ಸಂಬಂಧಪಟ್ಟ ಅಧಿಕಾರಿಯ ಬಳಿ ಹೋದಾಗಲೆಲ್ಲಾ ಅವನಿಗೆ ಕೆಲಸ ತೆಗೆಸಿಕೊಟ್ಟಿದ್ದ ಸಂಸತ್ ಸದಸ್ಯರ ಬಳಿಗೆ ಹೋಗುವಂತೆ ಬಾರಿ ಬಾರಿಗೆ ಹೇಳಲಾಗುತ್ತಿತ್ತು. ಸಚಿವರಂತೂ ಈ ವಿಷಯದಲ್ಲಿ ಸಂಪೂರ್ಣ ವಿಫಲರಾಗಿದ್ದಾರೆ. ಈ ತನಕ ಅವನನ್ನೇನು ಮಾಡಲು ಸಾಧ್ಯವಾಗಿಲ್ಲ. ಇದು ದೇಶದಲ್ಲಿನ ಬಡವನ ಪಾಡು. ಇಂತಹ ಒಂದು ಸನ್ನಿವೇಶದಲ್ಲಿ ಒಳ್ಳೆಯವರಾರು, ಕೆಟ್ಟವರಾರು ಎಂಬುದನ್ನು ಕೂಡಾ ಗುರುತಿಸಲು ಅಸಮರ್ಥರಾಗಿದ್ದಾರೆ. ಬಡವನಿಗೆ ಎರಡು ಹೊತ್ತಿನ ಊಟ ಕೂಡಾ ಸರಿಯಾಗಿ ಸಿಗುತ್ತಿಲ್ಲ. ಉದ್ಯೋಗವಂತೂ ದೂರವೇ ಉಳಿಯಿತು. ಇಂತಹ ಬಡ ಸಮುದಾಯದ ಪರಿಸ್ಥಿತಿಯನ್ನು ಸುಧಾರಿಸಲು ನಾವು ಏನು ಮಾಡಬೇಕು ಎಂಬುದರ ಬಗ್ಗೆ ಎಲ್ಲರೂ ಅತ್ಯಂತ ಗಂಭೀರವಾಗಿ ಯೋಚಿಸಬೇಕಾಗಿದೆ. ಈ ಗೊತ್ತುವಳಿ ಪ್ರಸ್ತಾಪಗಳು ತೋರಿಕೆಯವು ಮಾತ್ರ. ಇವು ಶಾಶ್ವತ ಪರಿಹಾರ ಕೊಡಲಾರದಂತವು. ಹಾಗಾಗಿ ನಮ್ಮ ಸಮಾಜವನ್ನು ಕಾಡುತ್ತಿರುವ ಈ ದಾರುಣ ವ್ಯಾಧಿಯಿಂದ ವಿಮೋಚನೆ ಹೊಂದಲು ಅತ್ಯವಶ್ಯವಾದ ಗುಣಕಾರಕ ಕ್ರಮಗಳ ಬಗ್ಗೆ ಯೋಚಿಸಬೇಕಾಗಿದೆ.

ನಾನು ತಾತ್ವಿಕವಾಗಿ ನಿಮ್ಮ ಅಭಿಪ್ರಾಯಗಳನ್ನು ಒಪ್ಪುತ್ತೇನೆ. ಆದೇನಿದ್ದರೂ ಈ ಉದ್ದೇಶಕ್ಕಾಗಿ ರಚಿಸಲು ಯೋಚಿಸಿರುವ ಸಮಿತಿಯು ಈ ಎಲ್ಲ ಅಂಶಗಳನ್ನು ಸಮಗ್ರವಾಗಿ ಪರ್ಯಾಲೋಚಿಸಬೇಕು. ಬರಿಯ ಕಾಯ್ದೆಯನ್ನು ತರುವುದರಿಂದ ಯಾವ ಉಪಯೋಗವೂ ಇಲ್ಲ. ಬದಲಾಗಿ ಅಂತಹ ಕ್ರಮದಿಂದ ನಾವು ಸಾರ್ವಜನಿಕರ ಗೇಲಿಯ ವಸ್ತುವಾಗುತ್ತೇವೆ.

# ಅಧ್ಯಾಯ - 14

## ದಿನಪತ್ರಿಕೆಗಳ ನೌಕರರ ಮುಷ್ಕರ*

ಮಾನ್ಯ ಉಪಸಭಾಧ್ಯಕ್ಷರೇ, ನಾನು ಇಂದು ಈ ಸದನದಲ್ಲಿ ಒಂದು ಪ್ರಮುಖ ಪ್ರಶ್ನೆಯನ್ನು ಎತ್ತುತ್ತಿದ್ದೇನೆ. ಆದರೆ ಈ ವಿಷಯದ ಪ್ರಾಮುಖ್ಯವನ್ನು ಅನೇಕ ಮಂದಿ ಇನ್ನು ಅರ್ಥ ಮಾಡಿಕೊಂಡಿಲ್ಲ. ವೃತ್ತಪತ್ರಿಕಾ ಉದ್ಯಮ ರಂಗದಲ್ಲಿನ ಪತ್ರಕರ್ತರು ಮತ್ತು ಇತರರು ಈಗ ಹೂಡಿರುವ ಮುಷ್ಕರವು ವಾರ್ತಾಪತ್ರಿಕೆಗಳ ಓದುಗರಿಗೆ ಮತ್ತು ಭಾರತೀಯ ಕಾರ್ಮಿಕ ಚಳವಳಿಗೆ ಒಂದು ವಿಶಿಷ್ಟ ಸಮಸ್ಯೆಯನ್ನು ತಂದೊಡ್ಡಿದೆ. ನಾನು ಮುಷ್ಕರಗಳ ಪ್ರತಿಪಾದಕ ಎಂಬ ಹಣೆಪಟ್ಟಿಯನ್ನು ತಗುಲಿಸಿಕೊಂಡಿದ್ದರೂ ಸಾಧ್ಯವಾದಷ್ಟು ಮಟ್ಟಿಗೆ ನಾವು ಮುಷ್ಕರಗಳನ್ನು ತಪ್ಪಿಸಬೇಕೆಂಬುದೇ ನನ್ನ ದೃಢವಾದ ಅಭಿಪ್ರಾಯವಾಗಿದೆ. ಬೇರೆ ಮಾರ್ಗ ಇಲ್ಲವೆಂದಾದಾಗ ಮಾತ್ರ ನಾವು ಮುಷ್ಕರಗಳಿಗೆ ಮುಂದಾಗಬೇಕು. ಔದ್ಯಮಿಕವಾಗಿ ನಮ್ಮ ದೇಶವು ಇನ್ನೂ ಸಾಕಷ್ಟು ಪ್ರಗತಿಯನ್ನು ಸಾಧಿಸಿಲ್ಲ. ಹಾಗಾಗಿ ಸಾಧ್ಯವಾದಷ್ಟು ಮಟ್ಟಿಗೆ ಮುಷ್ಕರಗಳಿಗೆ ನಾವು ಎಡೆ ಮಾಡಿಕೊಡಬಾರದು. ದೇಶದ ಉತ್ಪಾದನೆ ಹೆಚ್ಚಾಗುತ್ತಾ ಹೋಗಬೇಕು ಮತ್ತು ಕೈಗಾರಿಕಾ ಶಾಂತಿಯನ್ನು ನಾವು ಕಾಯ್ದುಕೊಳ್ಳಬೇಕಾಗಿದೆ. ಈ ದಿಸೆಯಲ್ಲಿ ನಾವು ಈಗಾಗಲೇ ದೇಶದಲ್ಲಿನ ಕಾರ್ಮಿಕ ಚಳವಳಿಯ ಮೂಲಕ ಅನೇಕ ವಿಧಾನಗಳನ್ನು ಅನುಷ್ಠಾನಕ್ಕೆ ತಂದಿದ್ದೇವೆ. ಅನೇಕ ಪ್ರಯೋಗಗಳನ್ನು ಮಾಡಿದ್ದೇವೆ. ಕಾರ್ಮಿಕ ಚಳವಳಿಯ ಓರ್ವ ಕಾರ್ಯಕರ್ತನಾಗಿ ನನ್ನ ಅಭಿಪ್ರಾಯವೇನೆಂದರೆ ನಾವು ಸಮಷ್ಟಿಯಿಂದ ನಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕು ಎಂಬುದೇ ಆಗಿದೆ. ಆದರಿಂದ ಕೈಗಾರಿಕಾ ಶಾಂತಿ ಮತ್ತು ಸಾಮರಸ್ಯ ಸಾಧ್ಯ. ಆದರೆ ನಮ್ಮ ದೇಶ ಇನ್ನು ಆ ಮಟ್ಟಿಗೆ ಪ್ರಗತಿ ಸಾಧಿಸಿಲ್ಲ. ಎಲ್ಲ ಜನರು ಈ ವಿಧಾನಗಳನ್ನು ಅನುಸರಿಸುವುದು ಸಾಧ್ಯವಿಲ್ಲ. ಆದಕ್ಕಾಗಿಯೇ ನಾವು ಇತರ ಮಾರ್ಗಗಳನ್ನು ಬಳಸಿಕೊಳ್ಳುತ್ತಿದ್ದೇವೆ. ಈ ವಿಧಾನಗಳು ಸಾಕಷ್ಟು ಸಮಯವನ್ನು ತೆಗೆದುಕೊಳ್ಳುತ್ತಿದೆ. ಅದಕ್ಕೊಂದು ಉದಾಹರಣೆ ಎಂದರೆ ವೇತನ ಮಂಡಳಿಗಳು. ಈ ಮಂಡಳಿಗಳು, ವಿವಾದದ ಇತ್ಯರ್ಥಕ್ಕೆ ಎಷ್ಟೊಂದು ಸಮಯ ತೆಗೆದುಕೊಳ್ಳುತ್ತವೆ ಎಂಬುದನ್ನು ನಾವು ನೋಡಿದ್ದೇವೆ. ಪತ್ರಿಕಾ ಕ್ಷೇತ್ರದ ಮಂದಿ ಸುಮಾರು ಎರಡು ವರ್ಷಗಳ ಕಾಲ ಹೋರಾಟ ನಡೆಸಿದ್ದಾರೆ. ಇಷ್ಟಾದ ಮೇಲಷ್ಟೇ ವೇತನ ಮಂಡಳಿ ಅಸ್ತಿತ್ವಕ್ಕೆ ಬಂದಿತು. ಅದು ರಚಿತವಾದ ಮೇಲೆ ಕೂಡಾ ಅದರ ನಿರ್ಧಾರಗಳು ಅಂತಿಮ ರೂಪ ಪಡೆಯಲು ಮತ್ತೆ ಎರಡು ವರ್ಷಗಳು ಬೇಕಾದವು. ಈಗಿನ ವಿವಾದವು ನವೆಂಬರ್‌ನಿಂದಲೇ ಇದ್ದು ಅದು ಇನ್ನೂ

---

* ಲೋಕಸಭಾ ಚರ್ಚೆ; 30 ಜುಲೈ 1968, ಸಿಸಿ 2902-2908

ಬಗೆಹರಿದಿಲ್ಲ. ಇದರಿಂದ ಈ ಬಗ್ಗೆ ನಾವು ಎಷ್ಟೊಂದು ಸಮಯವನ್ನು ಹಾಳು ಮಾಡಿದ್ದೇವೆ ಎಂದು ಗೊತ್ತಾಗುತ್ತದೆ. ಕಾರ್ಮಿಕನು ತನಗಾದ ಅನ್ಯಾಯಗಳ ವಿರುದ್ಧ ಹೋರಾಟ ನಡೆಸುತ್ತಿದ್ದಾನೆ. ಇಂತಹ ಸಂದರ್ಭಗಳಲ್ಲಿ ನಾವು ನ್ಯಾಯಾಧೀಕರಣಕ್ಕೆ ದೂರು ಸಲ್ಲಿಸುವುದೇ ಮೊದಲಾದ ವಿಧಾನಗಳನ್ನು ಅನುಸರಿಸುತ್ತೇವೆ. ಇದಕ್ಕೂ ತುಂಬಾ ಸಮಯ ಬೇಕಾಗುತ್ತದೆ. ದೊಡ್ಡ ಉದ್ಯಮಿಗಳು ಸರ್ವೋಚ್ಚ ನ್ಯಾಯಾಲಯಕ್ಕೂ ಹೋಗುತ್ತಾರೆ. ಹೀಗಾಗಿ ಕಾರ್ಮಿಕರಿಗೆ ಯಾವುದೇ ಪರಿಹಾರ ದೊರೆಯುವುದಿಲ್ಲ. ಈ ಎಲ್ಲ ವಿಷಯಗಳನ್ನು ಪರಿಗಣಿಸಿದಾಗ ಸಮಷ್ಟಿ ನೆಲೆಯಲ್ಲಿ ತೀರ್ಮಾನಗಳು ಅತ್ಯುತ್ತಮ ವಿಧಾನವಾಗಿದೆ. ಆದರೆ ಅದು ಸಾಧ್ಯವಿಲ್ಲದಿರುವುದರಿಂದ ವೇತನ ಮಂಡಳಿಗಳಿಗೆ ನಾವು ಆದ್ಯತೆ ನೀಡಬೇಕಾಗಿದೆ. ವೇತನ ಮಂಡಳಿಗಳು ಆಡಳಿತ ಮಂಡಳಿ, ಸರ್ಕಾರ ಹಾಗೂ ಕಾರ್ಮಿಕ ವರ್ಗದ ಪ್ರತಿನಿಧಿಗಳನ್ನು ಒಳಗೊಂಡಿರುತ್ತದೆ. ಹಾಗಾಗಿ ಅವು ಯಾವ ನಿರ್ಧಾರಗಳನ್ನು ತೆಗೆದುಕೊಂಡರೂ ಅದರಲ್ಲಿ ಭಾಗಿಯಾದವರೆಲ್ಲರೂ ಸರ್ವಾನುಮತದಿಂದ ಅದಕ್ಕೆ ಬದ್ಧರಾಗಿರಬೇಕಾಗುತ್ತದೆ.

ಮಾನ್ಯ ಉಪಾಧ್ಯಕ್ಷರೇ, ವೇತನ ಮಂಡಳಿಯು ಪತ್ರಕರ್ತರಲ್ಲದ ನೌಕರರ ಸಂಬಂಧದಲ್ಲಿ ತೆಗೆದುಕೊಂಡ ನಿರ್ಧಾರ ಬಗ್ಗೆ ಈಗಾಗಲೇ ನಿಮಗೆ ತಿಳಿದಿರಬಹುದು. ಅದು ಸರ್ವಾನುಮತದ ನಿರ್ಧಾರವಾಗಿತ್ತು. ಆದರೆ ಅದು ಸರ್ವಾನುಮತದ ನಿರ್ಧಾರವಾಗಲು ಕಾರ್ಮಿಕರು ಬಹಳಷ್ಟು ತ್ಯಾಗ ಮಾಡಬೇಕಾಯಿತು. ಅನಂತರದಲ್ಲಿ ಸರ್ಕಾರ ಹೊರಡಿಸಿದ ಆದೇಶಗಳು ಈ ಸರ್ವಾನುಮತದ ವೇತನ ಮಂಡಳಿಯ ನಿರ್ಧಾರದ ಪರಿಣಾಮಗಳನ್ನು ದುರ್ಬಲಗೊಳಿಸಿತು. ಇಷ್ಟಾಗಿಯೂ ಕೂಡಾ ಈ ಶಿಫಾರಸ್ಸುಗಳು ಜಾರಿಗೆ ಬರಲಿಲ್ಲ. ಇದು ಕಾರ್ಮಿಕರ ಚಳವಳಿಗೆ ಭಾರಿ ದೊಡ್ಡ ಆಪತ್ತನ್ನು ಒಡ್ಡಿದೆ. ಈವರೆಗೆ ರಚಿತವಾದ ವೇತನ ಮಂಡಳಿಯಲ್ಲಿ ಯಾವುದೊಂದು ಇಂತಹ ಪರಿಸ್ಥಿತಿಯನ್ನು ಎದುರಿಸಿದ್ದಿಲ್ಲ. ಈ ರೀತಿ ಮಂಡಳಿಯ ತೀರ್ಪನ್ನು ಅಗೌರವಿಸಿದ ಇನ್ನೊಂದು ನಿದರ್ಶನವೂ ಇಲ್ಲ. ನ್ಯಾಯಾಬದ್ಧ ವಿಧಾನಗಳ ಮೂಲಕ ವೇತನ ಮಂಡಳಿಯ ಶಿಫಾರಸ್ಸನ್ನು ಜಾರಿಗೆ ತರಲು ವಿಫಲವೆಂದಾದಲ್ಲಿ ಕಾರ್ಮಿಕರು ವೇತನ ಮಂಡಳಿಗಳಲ್ಲಿ ವಿಶ್ವಾಸವನ್ನೇ ಕಳೆದುಕೊಳ್ಳುವುದು ನಿಶ್ಚಿತ.

ಪತ್ರಿಕೋದ್ಯಮದಲ್ಲಿನ ಪತ್ರಕರ್ತೇತರ ಸಿಬ್ಬಂದಿಗಾಗಿನ ವೇತನ ಮಂಡಳಿಯ ಶಿಫಾರಸುಗಳ ಅನುಷ್ಠಾನ ಸ್ವಲ್ಪ ಮಟ್ಟಿಗೆ ಕಠಿಣವಾದುದೆಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ನಾವು ಈ ಸಂಬಂಧದಲ್ಲಿ ಪಿಟಿಐ ವಾರ್ತಾ ಸಂಸ್ಥೆಯೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದೇವೆ. ವೇತನ ಮಂಡಳಿ ಶಿಫಾರಸ್ಸು ಮಾಡಿದ ಎಲ್ಲ ಸೌಲಭ್ಯಗಳನ್ನು ನಾವು ಪಡೆದಿಲ್ಲವಾದರೂ ನಾವು ಅದರೊಂದಿಗೆ ಒಂದು ಒಪ್ಪಂದ ಮಾಡಿಕೊಂಡಿದ್ದೇವೆ.

ನಾವು ಯುಎನ್‌ಐ ಸಂಸ್ಥೆಯೊಂದಿಗೆ ಒಪ್ಪಂದ ಮಾಡಿಕೊಂಡಿದ್ದೇವೆ. ಆದರೆ ದೊಡ್ಡ ಪತ್ರಿಕೆಗಳ ಮಾಲೀಕರು ಭಾರಿ ಗದ್ದಲವನ್ನೇ ಎಬ್ಬಿಸಿದರು. ನಮ್ಮ ಕಾರ್ಮಿಕರಂತೂ ನ್ಯಾಯಬದ್ಧ ರೀತಿಯಲ್ಲೇ ಕಾರ್ಯ ನಿರ್ವಹಿಸಿದರು. ಅವರು ನಾಲ್ಕು - ಐದು ಮತ್ತು ಆರನೇ ದರ್ಜೆ ನೌಕರರನ್ನು ಬಿಟ್ಟು ಒಂದು, ಎರಡು ಮತ್ತು ಮೂರನೇ ದರ್ಜೆ ನೌಕರರನ್ನು ಒಪ್ಪಂದಕ್ಕೆ ಬರುವಂತೆ ಕೇಳಿಕೊಂಡರು. ಈ ಒಡಂಬಡಿಕೆಯ ಬಗ್ಗೆಯೂ ಈಗ ಅವರು ಅದೊಂದು ಶಿಫಾರಸ್ಸು ಮಾತ್ರವೇ ಆಗಿದೆ ಎಂದು ಮತ್ತು ಸಂಸ್ಥೆ ಅದಕ್ಕೆ ಬಾಧ್ಯವಲ್ಲವೆಂದು ಹೇಳುತ್ತಿದ್ದಾರೆ. ಮುಂದಿನ ಸಲ ಮತ್ತೆ ಮಾತುಕತೆಗಳು ಆರಂಭವಾದಾಗ ಆಡಳಿತವು ಈ ಒಡಂಬಡಿಕೆಯು ಶಿಫಾರಸ್ಸಾಗಿದೆಯೇ ಹೊರತು ಯಾವುದೇ ರೀತಿಯಿಂದ ಇದನ್ನು ಜಾರಿಗೊಳಿಸಲೇಬೇಕೆಂಬ ಆದೇಶವಾಗುವುದಿಲ್ಲ ಎಂದು ಹೇಳಿತು. ಇವೆಲ್ಲದರ ಪ್ರಯೋಜನವಾದರೂ ಏನು? ಇದು ಕೇವಲ ಕಾಲಹರಣ ಮಾಡುವ ತಂತ್ರವಾಗಿದೆ. ಹಾಗಾಗಿಯೇ ವಾರ್ತಾ ಪತ್ರಿಕೆಗಳ ನೌಕರರು ಮುಷ್ಕರಕ್ಕೆ ಇಳಿದಿದ್ದಾರೆ. ಕಳೆದ ಏಳು ದಿನಗಳಿಂದ ಈ ಮುಷ್ಕರ ನಡೆಯುತ್ತಿದೆ. ನಮ್ಮ ಸರಕಾರ ಈ ವಿಷಯದಲ್ಲಿ ಏನು ಮಾಡುತ್ತಿದೆ ಎಂದು ನಾನು ತಿಳಿಯಬಯಸುತ್ತೇನೆ.

ಮಾನ್ಯ ಉಪಾಧ್ಯಕ್ಷರೇ, ಇದು ಅಸಮಾನರ ನಡುವಣ ಹೋರಾಟವಾಗಿದೆ. ನಾವು ವೇತನ ನಿಗದಿಗಾಗಿ ವೇತನ ಮಂಡಳಿಯನ್ನು ಸ್ಥಾಪಿಸಿದ್ದೇವೆ. ದೊಡ್ಡ ವಾರ್ತಾ ಪತ್ರಿಕೆಗಳ ಮಾಲೀಕರು ವೇತನ ಮಂಡಳಿಯ ಶಿಫಾರಸನ್ನು ಸುಲಭವಾಗಿ ಅನುಷ್ಠಾನಕ್ಕೆ ತರುವುದಿಲ್ಲ ಎಂಬುದು ನಮಗೆ ಗೊತ್ತಿದೆ. ಅವುಗಳಿಗೆ ಇದು ಕಷ್ಟವಲ್ಲ. ಅವರೆಲ್ಲರೂ ಭಾರಿ ಲಾಭವನ್ನು ಸಂಪಾದಿಸುತ್ತಿದ್ದಾರೆ. ಇಂಡಿಯನ್ ಎಕ್ಸ್‌ಪ್ರೆಸ್, ಟೈಮ್ಸ್ ಆಫ್ ಇಂಡಿಯಾ ಮತ್ತಿತರ ದೊಡ್ಡ ವಾರ್ತಾ ಪತ್ರಿಕೆಗಳು ಭಾರಿ ಲಾಭ ಗಳಿಸುತ್ತಿವೆ. ಇಷ್ಟಾಗಿಯೂ ಅವು ವೇತನ ಮಂಡಳಿಯ ತೀರ್ಪನ್ನು ಅನುಷ್ಠಾನಕ್ಕೆ ತಾರದಿದ್ದರೆ ಅದರ ಪರಿಣಾಮ ಏನಾದೀತು? ಈ ದಿನ ಪತ್ರಿಕೆಗಳು 1963-1964 ಹಾಗೂ 1965 ರಲ್ಲಿ ಗಳಿಸಿದ ಲಾಭವನ್ನು ತೋರಿಸುವ ಅಂಕಿ-ಅಂಶಗಳು ನನ್ನ ಬಳಿ ಇವೆ. ದಿ ಟೈಮ್ಸ್ ಆಫ್ ಇಂಡಿಯಾ 52 ಲಕ್ಷ ರೂಪಾಯಿ ಲಾಭ ಗಳಿಸಿತು. ದಿ ಸ್ಟೇಟ್ಸ್‌ಮನ್ 30 ಲಕ್ಷ ರೂಪಾಯಿ, ಹಿಂದೂಸ್ತಾನ್ ಟೈಮ್ಸ್ 31 ಲಕ್ಷ ರೂಪಾಯಿ, ದಿ ಹಿಂದೂ 19 ಲಕ್ಷ ರೂಪಾಯಿ, ಇಂಡಿಯನ್ ಎಕ್ಸ್‌ಪ್ರೆಸ್ 29 ಲಕ್ಷ ರೂಪಾಯಿ ಲಾಭ ಗಳಿಸಿತು. ಒಂದು ವೇಳೆ ವೇತನ ಮಂಡಳಿ ತೀರ್ಪನ್ನು ಜಾರಿಗೊಳಿಸಿದರೆ ಅವು ಎಷ್ಟು ಹಣ ಕೊಡಬೇಕಾಗುತ್ತದೆ ಎಂಬ ಮಾಹಿತಿಯೂ ನನ್ನ ಬಳಿ ಇದೆ. ಟೈಮ್ಸ್ ಆಫ್ ಇಂಡಿಯಾ 14 ಲಕ್ಷ ರೂಪಾಯಿಗಳನ್ನು ವ್ಯಯ ಮಾಡಬೇಕಾಗುತ್ತದೆ. ದಿ ಸ್ಟೇಟ್ಸ್‌ಮನ್ 15 ಲಕ್ಷ ರೂಪಾಯಿ, ದಿ ಹಿಂದೂಸ್ತಾನ್ ಟೈಮ್ಸ್, ದಿ ಹಿಂದೂ, ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಗಳು 9 ಲಕ್ಷ, 6 ಲಕಟ್ಟಾ ಹಾಗು 12 ಲಕ್ಷ ರೂಪಾಯಿಗಳನ್ನು ಕಾರ್ಮಿಕರಿಗೆ ಪಾವತಿ ಮಾಡಬೇಕಾಗುತ್ತದೆ. ಇಷ್ಟೊಂದು

ದೊಡ್ಡ ಪ್ರಮಾಣದಲ್ಲಿ ಲಾಭ ಸಂಪಾದಿಸುತ್ತಿರುವ ಪತ್ರಿಕೆಗಳ ಮಾಲೀಕರು ವೇತನ ಮಂಡಳಿಯ ತೀರ್ಪನ್ನು ಜಾರಿಗೆ ತಾರದಿದ್ದರೆ ದೇಶದಲ್ಲಿ ಕಾರ್ಮಿಕ ಚಳವಳಿ ಮುಂದುವರಿದೀತಾದರೂ ಹೇಗೆ ಎನ್ನುವುದು ನನಗೆ ಅರ್ಥವಾಗುತ್ತಿಲ್ಲ

ವಾರ್ತಾ ಪತ್ರಿಕೆಗಳ ಆಡಳಿತ ಮತ್ತು ಕಾರ್ಮಿಕರ ನಡುವೆ ಘರ್ಷಣೆ ಪ್ರಾರಂಭವಾದ ದಿನದಿಂದಲೇ ಈ ರಂಗದ ಕಾರ್ಮಿಕರು ಭಾರಿ ಯಾತನೆ ಅನುಭವಿಸುತ್ತಿದ್ದಾರೆ. ಇದರಿಂದಾಗಿ ಅನೇಕ ತೊಡಕುಗಳು ಉದ್ಭವಿಸಿದೆ. ಒಬ್ಬರಿಗೆ ಶಾಸನಾತ್ಮಕ ಸ್ಥಾನಮಾನ ನೀಡಿ, ಇನ್ನೊಬ್ಬರಿಗೆ ಅದನ್ನು ನಿರಾಕರಿಸಿದರೆ ಅವರು ಸರ್ವೋಚ್ಚ ನ್ಯಾಯಾಯಲಯದ ತನಕವೂ ಹೋದಾರು. ವಾರ್ತಾ ಪತ್ರಿಕಾರಂಗದ ಉದ್ಯಮಿಗಳ ಬಳಿ ಹಣ ಇದೆ. ಆದರೆ ಕಾರ್ಮಿಕರ ಹತ್ತಿರ ಹಣವಿಲ್ಲ. ಅದೂ ಅಲ್ಲದೆ ಈ ವಿವಾದ ಇತ್ಯರ್ಥಕ್ಕೆ ಬಹಳಷ್ಟು ಸಮಯ ಬೇಕಾಗುತ್ತದೆ. ಅದರಿಂದ ಏನೂ ಪ್ರಯೋಜನವಾಗುವುದಿಲ್ಲ. ಆದ್ದರಿಂದ ಸರ್ಕಾರ ಈ ವಿಷಯದಲ್ಲಿ ತನ್ನ ನಿಲುವನ್ನು ಸ್ಪಷ್ಟೀಕರಿಸಬೇಕೆಂದು ನಾನು ಬಯಸುತ್ತೇನೆ. ಈ ರಂಗದ ಮಂದಿ ಬಹಳಷ್ಟು ಸಮಸ್ಯೆಯನ್ನು ಎದುರಿಸುತ್ತಿದ್ದಾರೆ ಎಂಬುದನ್ನು ಈ ಮೂಲಕ ಸದನದ ಗಮನಕ್ಕೆ ತರಲು ಬಯಸುತ್ತೇನೆ. ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಯ ಕಾರ್ಮಿಕರಿಂದ ನನಗೊಂದು ಪತ್ರ ಬಂದಿದೆ. ಅದರಲ್ಲಿ ಈ ರೀತಿ ಇದೆ.

ಸಂಸತ್ ಸದಸ್ಯರಾದ ನೀವು ವೇತನ ಮಂಡಳಿಯ (ಪತ್ರಕರ್ತರು ಮತ್ತು ಪತ್ರಕರ್ತರೇತರ ಸಿಬ್ಬಂದಿಗಾಗಿ ನೇಮಿಸಿರುವ) ವಿಷಯವನ್ನು ಅತ್ಯಂತ ತ್ವರಿತವಾಗಿ ಕೈಗೆತ್ತಿಕೊಳ್ಳುತ್ತಿದ್ದೀರಿ ಎಂಬುದನ್ನು ಟೆಲಿಪ್ರಿಂಟರ್ ಮೂಲಕ ತಿಳಿದು ಬಹಳ ಸಂತುಷ್ಟರಾಗಿದ್ದೇವೆ. ಸಾಸೂನ್ ಡಾಕ್ಸ್‌ನಲ್ಲಿನ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ನಿನ್ನೆ ದಿನ ಒಂದು ವಿಲಕ್ಷಣವಾದ ಮತ್ತು ಅವಮಾನಕಾರಿಯಾದ ಸಂಗತಿ ನಡೆಯಿತು. ನೆಲ ಅಂತಸ್ತಿನ ನೀರು ಸರಬರಾಜು ಸ್ಥಗಿತಗೊಂಡಿತು. ಇದರಿಂದ ಅಲ್ಲಿನ ಶೌಚಾಲಯಗಳ ಪರಿಸ್ಥಿತಿ ಏನಾಗಿರಬಹುದೆಂದು ನೀವೇ ಊಹಿಸಿಕೊಳ್ಳಬಹುದು. ಅಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರನ್ನು ಹೊರ ಹೋಗಲು ಕೂಡ ಬಿಡಲಿಲ್ಲ. ಕಾರ್ಮಿಕರನ್ನು ಪ್ರಚೋದಿಸಲು ಇಷ್ಟು ಕಾರಣ ಸಾಕಾದೀತು. ಆದರೆ ಆಡಳಿತ ಲಾಕೌಟ್ ಮಾಡುವ ಹಂಚಿಕೆ ಹೊಂದಿದೆ ಎಂಬುದನ್ನು ಅರಿತು ಮತ್ತು ಈ ಕಾರ್ಮಿಕರ ವಿರುದ್ಧ ಆರೋಪಗಳನ್ನು ಹೊರಿಸಲು ಆಡಳಿತ ಮಂಡಳಿ ನೆಪಗಳನ್ನು ಎದುರು ನೋಡುತ್ತಿದೆ ಎಂಬುದನ್ನು ತಿಳಿದಿದ್ದರಿಂದ ಅಲ್ಲಿನ ಹುಡುಗರನ್ನು ಯಾವ ವಿವಾದಕ್ಕೂ ಎಳೆಯಲಿಲ್ಲ. ಕಾರ್ಮಿಕರಿಗೆ ನೀರನ್ನೇ ನೀಡಲಿಲ್ಲ. ಎಂದರೆ ಅದರ ಪರಿಣಾಮ ಏನಾಗಬಹುದಿತ್ತು ಎಂಬುದನ್ನು ನೀವೇ ಊಹಿಸಿ.

ಇದರಿಂದ ಎಷ್ಟರಮಟ್ಟಿನ ಕಹಿ ವಾತಾವರಣ ನಿರ್ಮಾಣವಾದೀತು ಎಂಬುದನ್ನು ನೀವು ಸುಲಭವಾಗಿ ಊಹಿಸಬಹುದು. ಹಾಗಾಗಿ ಈ ವಿಷಯದಲ್ಲಿ ಸರ್ಕಾರವೇ ಏನಾದರೂ ಉಪಕ್ರಮ ತೆಗೆದುಕೊಳ್ಳಬೇಕು ಎಂದು ನಾನು ಹೇಳುತ್ತಿದ್ದೇನೆ. ಅದೇ ವೇಳೆಗೆ ಈ ಕಾರ್ಮಿಕರ ಅಭಿಪ್ರಾಯವನ್ನು ತಿಳಿಯಲು ಅಪೇಕ್ಷಿಸುತ್ತೇವೆ. ಪತ್ರಿಕಾರಂಗದ ಉದ್ಯಮಿಗಳು ಮಾಡುತ್ತಿರುವುದು ಸರಿಯಾಗಿದೆ ಎಂದು ಸರ್ಕಾರ ಭಾವಿಸಿದೆಯೇ? ಅದಲ್ಲವಾದರೆ ಈ ದಿನಾಂಕದವರೆಗೆ ಕಾರ್ಮಿಕರ ಬೇಡಿಕೆಗಳನ್ನು ಈಡೇರಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು ಎಂದು ನಾನು ತಿಳಿಯಬಯಸುತ್ತೇನೆ. ಇದೊಂದು ಗಂಭೀರ ವಿಷಯವಾಗಿದ್ದು ಇದು ಇಡೀ ದೇಶಕ್ಕೆ ಸಂಬಂಧಿಸಿದ ವಿಷಯವಾಗಿದೆ. ವೃತ್ತ ಪತ್ರಿಕಾ ನೌಕರರಿಗೆ ಸಹಾನುಭೂತಿ ಸೂಚಿಸುವ ಸಲುವಾಗಿ ನಿನ್ನೆ ನಡೆದ ಮುಷ್ಕರವು ದೇಶಾದ್ಯಂತ ಯಶಸ್ವಿಯಾಗಿದೆ. ಆದರೆ ಪಿಟಿಐ ವಾರ್ತಾ ಸಂಸ್ಥೆ ಮತ್ತು ಸರ್ಕಾರಗಳು ಅದು ವಿಫಲವಾಗಿದೆ ಎಂದು ಪ್ರಚಾರ ಮಾಡುತ್ತಿವೆ. ಈ ರೀತಿಯ ತಂತ್ರದಿಂದ ಮುಷ್ಕರವನ್ನು ಕೊನೆಗಾಣಿಸುವುದು ಅಸಾಧ್ಯ. ಮುಷ್ಕರ ಹೇಗಿದ್ದರೂ ಮುಂದುವರಿಯಲಿದೆ. ಒಂದು ವೇಳೆ ಕಾರ್ಮಿಕರ ಎಲ್ಲ ಒಕ್ಕೂಟಗಳು ಬಯಸಿದರೆ ಅವರೊಂದಿಗೆ ಮಾತುಕತೆ ನಡೆಸಲು ನೀವು ಸಿದ್ಧರಾಗಿರಬೇಕು. ಆದರೆ ಸರ್ಕಾರ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ವಿಷಯದಲ್ಲಿ ಯಾವ ಹೆಜ್ಜೆ ಇರಿಸಿದೆ ಎಂಬುದನ್ನು ತಿಳಿಯ ಬಯಸುತ್ತೇನೆ. ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯ ಆಡಳಿತ ಮಂಡಳಿಯು ಇಬ್ಬರು ಸರಕಾರಿ ಪ್ರತಿನಿಧಿಗಳನ್ನು ಡಾ. ಹಜಾರೆ ಮತ್ತು ಶ್ರೀ ಭಟ್ಟಾಚಾರ್ಯ ಅವರನ್ನು ಒಳಗೊಂಡಿದೆ. ಮೂರನೇ ವ್ಯಕ್ತಿ ನ್ಯಾಯಾಧೀಶ ಶ್ರೀ ನಾನಾಸಾಹೇಬ್‌ಕುಂಟೆ ಅಧ್ಯಕ್ಷರಾಗಿ ನೇಮಕಗೊಂಡಿದ್ದಾರೆ. ಕಾರ್ಮಿಕರಿಗೆ ನ್ಯಾಯ ಒದಗಿಸಲು ನೀವು ಈವರೆಗೆ ಇಟ್ಟಿರುವ ಹೆಜ್ಜೆಗಳು ಯಾವುವು ಎಂಬುದನ್ನು ನಾನು ಈ ಸಂದರ್ಭದಲ್ಲಿ ತಿಳಿಯ ಬಯಸುತ್ತೇನೆ. ನಾವಿಂದು ಸಮಾಜವಾದದ ಕುರಿತು ಬಹಳಷ್ಟು ಮಾತನಾಡುತ್ತಿದ್ದೇವೆ. ಆದರೆ ಸಮಾಜವಾದ ಅಂದರೆ ಇಷ್ಟೆಯೇ? ಎಂಬುದು ನನಗೆ ಗೊತ್ತಿಲ್ಲ. ಮಾನ್ಯ ಸಚಿವರ ಬಗ್ಗೆ ನನಗೆ ಸಂಪೂರ್ಣ ಗೌರವವಿದೆ. ಅವರು ಈ ದಿಸೆಯಲ್ಲಿ ಸಂಪೂರ್ಣ ಪ್ರಯತ್ನ ಮಾಡಿದ್ದಾರೆ. ಆದರೆ ಪ್ರಧಾನಮಂತ್ರಿ, ಗೃಹ ಸಚಿವರು ಮತ್ತು ಉಪ ಪ್ರಧಾನ ಮಂತ್ರಿಗಳಂತಹ ದೊಡ್ಡ ನಾಯಕರು ಈ ದಿನಪತ್ರಿಕೆಯ ಮಾಲಿಕರಿಗೆ ಏನಾದರೂ ಕ್ರಮ ಕೈಗೊಳ್ಳುವಂತೆ ಕೇಳಿದ್ದೀದ್ದೇಯೇ? ಎಂಬುದು ನನಗೆ ತಿಳಿಯಬೇಕಾಗಿದೆ. ಇಲ್ಲವೆಂದರಾದರೆ ಕಾರ್ಮಿಕರಿಗೆ ಉಳಿದಿರುವ ಮಾರ್ಗ ಏನು? ಸರ್ಕಾರವು ಅವರಿಗೆ ಸಹಾಯ ಮಾಡಲಿದೆಯೇ ಇಲ್ಲವೇ? ಅವರಿಗೆ ಕೆಲವು ಸಮಸ್ಯೆಗಳಿರಬಹುದು ಎಂದು ನಾನು ಭಾವಿಸಿದ್ದೇನೆ. ಮೊಟ್ಟಮೊದಲು ಸರ್ಕಾರವು ವೇತನ ಮಂಡಳಿಯು ಶಿಫಾರಸ್ಸುಗಳನ್ನು ನೂರಕ್ಕೆ ನೂರರಷ್ಟು ಅನುಷ್ಠಾನಗೊಳಿಸುವಂತೆ ಕೇಳಿಕೊಳ್ಳಬೇಕು. ಆದರಲ್ಲಿ ಸಮಸ್ಯೆಗಳೇನಾದರೂ ಇದ್ದರೆ

ಪ್ರತ್ಯೇಕ ನ್ಯಾಯ ತೀರ್ಮಾನಕ್ಕೆ ನಾವು ಸಿದ್ಧರಾಗಿದ್ದೇವೆ. ಅವರು ಅದನ್ನು ಅಂಗೀಕರಿಸದೆ ಇದ್ದರೆ ಆಕಾಶವಾಣಿಯಲ್ಲಿ ಕಾರ್ಮಿಕರ ವಿರುದ್ಧ ಅಪಪ್ರಚಾರ ಮಾಡುವುದರ ಬದಲಾಗಿ ಈಗಿರುವ ಕಾಯ್ದೆಯನ್ನು ಜಾರಿಗೊಳಿಸಬೇಕು. ಆಕಾಶವಾಣಿ ಮೂಲಕ ನೀವು ದೊಡ್ಡ ಬಂಡವಾಳಷಾಹಿಗಳ ಪರವಾಗಿ ವಕಾಲತು ವಹಿಸುವ ಬದಲಾಗಿ ಔದ್ಯಮಿಕ ಶಾಂತಿಯನ್ನು ಕಾಯ್ದುಕೊಳ್ಳುವಂತೆ ಮನವಿ ಮಾಡಿಕೊಳ್ಳುವುದು ಲೇಸು ಎಂಬುದು ನಮ್ಮ ಅಭಿಪ್ರಾಯವಾಗಿದೆ.

ಎರಡನೆಯದಾಗಿ ನೀವು ಪತ್ರಿಕೆಗಳಿಗೆ ಜಾಹೀರಾತುಗಳನ್ನು ನೀಡಿ ಇದೊಂದು ಧೋರಣೆಗೆ ಸಂಬಂಧಿಸಿದ ನಿರ್ಧಾರವಾಗಿದೆ. ಅವರು ಅದನ್ನು ಅನುಷ್ಠಾನಗೊಳಿಸದಿದ್ದರೆ ಅವರಿಗೆ ಯಾವುದೇ ಜಾಹೀರಾತು ನೀಡುವುದಿಲ್ಲ ಎಂದು ಸರ್ಕಾರ ಏಕೆ ಹೇಳುವುದಿಲ್ಲ. 'ಓರ್ವ ದರ್ಜಿಯಿಂದ ಸಭ್ಯ ಗೃಹಸ್ಥ ನಿರ್ಮಾಣವಾಗುತ್ತಾನೆ' ಎಂಬ ಮಾತೊಂದು ವಾಡಿಕೆಯಲ್ಲಿದೆ. ಅದೇ ರೀತಿ ನಮ್ಮಲ್ಲೀಗ ಸಾರ್ವಜನಿಕರಿಂದ ನಿರ್ಮಾಣಗೊಂಡ ನಾಯಕರಿದ್ದಾರೆ. ಅವರ ಪ್ರತಿರೋಧಕ್ಕೆ ನೀವು ಏಕೆ ಹೆದರುತ್ತೀರಿ ಜನ ನಿಮ್ಮೊಂದಿಗೆ ಇದ್ದಾರೆ. ನೀವು ಅವರಿಗಾಗಿ ಹೋರಾಡಬೇಕು. ಆದರೆ ನನ್ನ ಮಾತನ್ನು ನೀವು ಖಂಡಿತಾ ಒಪ್ಪುವುದಿಲ್ಲ.

ಕೊನೆಯಲ್ಲಿ ಮಾನ್ಯ ಸಚಿವರ ಮುಂದೆ ಎರಡು ಮೂರು ಪ್ರಶ್ನೆಗಳನ್ನಿಡಲು ನಾನು ಬಯಸುತ್ತೇನೆ. ಈ ಅಂಶಗಳ ಬಗ್ಗೆ ದಯವಿಟ್ಟು ಸರ್ಕಾರದ ನಿಲುವೇನು ಎಂಬುದನ್ನು ಸ್ಪಷ್ಟಪಡಿಸಿ. ಪತ್ರಿಕಾ ರಂಗದ ಕಾರ್ಮಿಕರ ಬೇಡಿಕೆಗಳು ಮತ್ತು ಹೋರಾಟ ನ್ಯಾಯಬದ್ಧವಾದುದೇ ಅಲ್ಲವೇ? ನ್ಯಾಯ ಸಮ್ಮತವಾದುದಾರೆ ಸರ್ಕಾರ ಈ ಸಂಬಂಧದಲ್ಲಿ ಯಾವ ಯಾವ ಹೆಜ್ಜೆಗಳನ್ನು ಇಟ್ಟಿದೆ. ಮಾಲೀಕರು ನಿಮ್ಮ ಸಲಹೆಗಳನ್ನು ಒಪ್ಪುವುದಿಲ್ಲವಾದರೆ ಸರ್ಕಾರದ ಮುಂದಿನ ಕಾರ್ಯಾಚರಣೆ ಏನು? ನೀವು ಬಂಡವಾಳಶಾಹಿಗಳಿಗೆ ಅನುಕೂಲ ಮಾಡಿಕೊಡುವವರೋ? ಅಥವಾ ಬಡ ಕಾರ್ಮಿಕರ ಹಿತಾಸಕ್ತಿ ರಕ್ಷಿಸುವವರೋ? ನಾವು ನಮ್ಮನ್ನು ಸಮಾಜವಾದಿಗಳೆಂದು ಕರೆದುಕೊಳ್ಳುತ್ತಿದ್ದೇವೆ. ವೇತನ ಮಂಡಳಿಯ ಸರ್ವಾನುಮತದ ನಿರ್ಧಾರ ನಮ್ಮ ಮುಂದಿದೆ. ಆದರೂ ನಾವು ಅದನ್ನು ಗೌರವಿಸಲು ಸಿದ್ಧರಿಲ್ಲ. ಸರ್ಕಾರ ಯಾವುದೇ ಕ್ರಮ ಕೈಗೊಳ್ಳದಿದ್ದಲ್ಲಿ ಈ ಏಕಸ್ವಾಮ್ಯವಾದಿಗಳು ನಿಮಗೆ ಹೀಗಿಗೆ ಮಾಡಬೇಕೆಂದು ತಾಕೀತು ಮಾಡಲು ಆದೇಶಿಸುತ್ತಾರೆ. ಆಗ ನಮಗೆ ಯಾವ ಬದಲಿ ಮಾರ್ಗವೂ ಇರುವುದಿಲ್ಲ.

## ಅಧ್ಯಾಯ - 15

## ಗ್ರಾಮೀಣ ವಸತಿ ಅಭಿವೃದ್ಧಿ (ಮೇಲಣ ಗೊತ್ತುವಳಿ)

ಮಾನ್ಯ ಸಭಾಧ್ಯಕ್ಷರೇ, ಈಗ ಸದನದ ಮುಂದಿರುವ ಗೊತ್ತುವಳಿಯನ್ನು ಬೆಂಬಲಿಸಲು ನನಗೆ ಅತೀವ ಸಂತಸವಾಗುತ್ತಿದೆ. ಈ ಸಮಸ್ಯೆಯ ಕಡೆಗೆ ನಮ್ಮ ಸರ್ಕಾರವಾಗಲಿ, ಜನರಾಗಲಿ ಗಮನಹರಿಸಿಲ್ಲ ಎಂದೇ ನನಗನಿಸುತ್ತಿದೆ. ಇದೊಂದು ದೊಡ್ಡ ಸಮಸ್ಯೆಯಾಗಿದ್ದು ಈ ಕಾರ್ಯಾಭಾರವನ್ನು ಕೈಗೆತ್ತಿಕೊಂಡಾಗ ಅದರ ಪರಿಣಾಮವಾಗಿ ಅನೇಕ ತೊಡಕುಗಳು ನಮಗೆ ಎದುರಾಗಬಹುದು.

ಮೊದಲನೆಯದಾಗಿ ದೇಶದಲ್ಲಿ ನಾವು ಸಾಮಾಜಿಕ ಬದಲಾವಣೆಗಳನ್ನು ತರಲು ಬಯಸುತ್ತಿದ್ದೇವೆಯಾದರೂ ಈ ನಿಟ್ಟಿನಲ್ಲಿ ನಮ್ಮ ಗುರಿಯನ್ನು ಸಾಧಿಸಲು ಅಗತ್ಯವಿರುವ ಸಾಧನ - ಸಂಪತ್ತುಗಳನ್ನು ಕಂಡುಕೊಳ್ಳುವಲ್ಲಿ ನಾವು ಅದೇಕೋ ಹಿಂದುಳಿದ್ದಿದ್ದೇವೆ. ಗ್ರಾಮಾಂತರ ಪ್ರದೇಶಗಳಲ್ಲಿ ಇನ್ನೂ ಕೂಡಾ ಮನೆಗಳನ್ನು ಮತ್ತು ವಸತಿ ಸಮುಚ್ಚಯಗಳನ್ನು ಜಾತಿಯ ಆಧಾರದಲ್ಲೇ ನಿರ್ಮಿಸಿರುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಕನಿಷ್ಠ ಮಹಾರಾಷ್ಟ್ರದಲ್ಲಿ ಪರಿಶಿಷ್ಟ ಜಾತಿಗಳಿಗೆ ಸೇರಿದ ಜನರು ಪ್ರತ್ಯೇಕ ವಸತಿ ಸಮುಚ್ಚಯಗಳಲ್ಲಿ ಮತ್ತು ಪರಿಶಿಷ್ಟ ಜಾತಿಗಳಿಗೆ ಹೊರತಾದ ಜನರು ಇತರ ಪ್ರದೇಶಗಳಲ್ಲಿ ನೆಲೆಸಿರುವುದನ್ನು ನಾನು ಕಂಡಿದ್ದೇನೆ. ಇದು ನಮ್ಮ ಸಮಾಜವು ಇನ್ನೂ ಜಾತಿಯ ತಳಹದಿಯಲ್ಲೇ ವಿಭಜಿತವಾಗಿ ನಿಂತಿದೆ ಎಂಬುದನ್ನು ತೋರಿಸಿ ಕೊಡುತ್ತದೆ. ಜಾತಿಯ ಪರಿಗಣನೆಗಳಿಲ್ಲದೆ ಗ್ರಾಮೀಣ ವಸತಿ ಅಭಿವೃದ್ಧಿ ಕಾರ್ಯಕ್ರಮವನ್ನು ನಾವು ಕೈಗೆತ್ತಿಕೊಳ್ಳುವುದಾದರೆ ಬಹುದೊಡ್ಡ ಕಾರ್ಯಭಾರವೊಂದನ್ನು ಪರಿಪೂರ್ಣಗೊಳಿಸಿದಂತಾಗುತ್ತದೆ. ಅಷ್ಟೇ ಅಲ್ಲ, ಅದರಿಂದ ಒಂದು ಸಾಮಾಜಿಕ ಕ್ರಾಂತಿಯನ್ನೇ ಹುಟ್ಟು ಹಾಕಿದಂತಾಗುತ್ತದೆ. ಈ ಮೂಲಕ ನಾವು ನಮ್ಮ ಗ್ರಾಮೀಣ ಜನರ ಜೀವನವನ್ನು ಕೂಡಾ ಬದಲಿಸಬಹುದಾಗಿದೆ. ಒಂದು ಗ್ರಾಮದಲ್ಲಿ ಮನೆಗಳ ನಿರ್ಮಾಣಕ್ಕಾಗಿ ಹಣ ವ್ಯಯಿಸಲು ನಾವು ನಿರ್ಧರಿಸುವಾಗ ಈ ಯೋಜನೆಯಲ್ಲಿ ಜಾತಿಯ ತಾರತಮ್ಯವಿಲ್ಲದೆ ಒಂದೇ ಸ್ತರದಲ್ಲಿ ಒಂದು ಸಮುದಾಯದಂತೆ ಜೊತೆಯಾಗಿಯೇ ವಾಸವಾಗಿರಲು ಅಪೇಕ್ಷಿಸುವ ಮಂದಿಗಷ್ಟೇ ನಾವು ಮನೆಗಳನ್ನು ನಿರ್ಮಿಸಿಕೊಡುತ್ತೇವೆ ಎಂಬ ವಿಧಿಯನ್ನು ಸೇರ್ಪಡೆ ಮಾಡಬಹುದಾಗಿದೆ. ಈಚೆಗೆ ಮಹಾರಾಷ್ಟ್ರದ ಕೋಯ್ನಾ ಭೂಕಂಪ ಸಂಭವಿಸಿದಾಗ ಸದನದಲ್ಲಿ ಈ ಅಂಶವನ್ನು ಎತ್ತಿದ್ದೆ ಮತ್ತು ಜಾತಿ ಆಧಾರದಲ್ಲಿ ಗ್ರಾಮಗಳಲ್ಲಿ ಹೊಸ ಮನೆಗಳನ್ನು ನಿರ್ಮಿಸುವುದನ್ನು ನಿಲ್ಲಿಸಲು ಮತ್ತು ಎಲ್ಲರೂ ಒಂದು ಕಡೆ ವಾಸವಾಗಿರುವಂತೆ ಮಾಡಲು ಇದೊಂದು ಸೂಕ್ತ

---

*ಲೋಕಸಭಾ ಚರ್ಚೆ, ಆಗಸ್ಟ್ 14,1968, ಸಿಸಿ 2345–47

ಸಂದರ್ಭವಾಗಿದೆ ಎಂದು ಹೇಳಿದ್ದೆ. ಈ ರೀತಿಯಿಂದ ನಾವು ವಸತಿ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದರೆ ಸಾಮಾಜಿಕ ಬದಲಾವಣೆ ಮತ್ತು ಸಾಮಾಜಿಕ ಕ್ರಾಂತಿ ತರಲು ಅದನ್ನು ಒಂದು ಸಾಧನ ಎಂದು ಭಾವಿಸಿದ್ದೇನೆ.

ಎರಡನೆಯದಾಗಿ ಅನೇಕ ವಿದ್ಯಾವಂತರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸಲು ಇಚ್ಛಿಸುವುದಿಲ್ಲ. ನಾವು ಶಿಕ್ಷಣವನ್ನು ಇಡೀ ದೇಶಕ್ಕೆ ವ್ಯಾಪಿಸುವಂತೆ ಮಾಡಲು ಪರಿಶ್ರಮ ವಹಿಸುತ್ತಿರುವಾಗ ನಾವು ಗ್ರಾಮಾಂತರ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಎಲ್ಲ ರೀತಿಯಿಂದ ಪ್ರಯತ್ನಿಸಬೇಕು. ಗ್ರಾಮಾಂತರ ಪ್ರದೇಶಗಳಲ್ಲಿ ಯಾವ ಮೂಲಭೂತ ಸೌಲಭ್ಯಗಳು ದೊರೆಯದಿರುವುದರಿಂದ ವಿದ್ಯಾವಂತ ಯುವಕರು ಗ್ರಾಮಾಂತರ ಪ್ರದೇಶಗಳಲ್ಲಿ ವಾಸವಾಗಿರಲು ಇಚ್ಛಿಸುವ ರೀತಿಯಲ್ಲಿ ನಾವು ಗ್ರಾಮಾಂತರ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸಬೇಕಾಗಿದೆ. ಎಂದರೆ ಒಳ್ಳೆಯ ಮನೆಗಳನ್ನು ಅಲ್ಲಿ ನಿರ್ಮಿಸಿಕೊಡುವವರೆಗೆ ಯಾವ ವಿದ್ಯಾವಂತನು ಅಲ್ಲಿಗೆ ಹೋಗಲು ಇಷ್ಟಪಡುವುದಿಲ್ಲ.

ನಮ್ಮ ದೇಶದ ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ನಿರುದ್ಯೋಗ ಸಾಕಷ್ಟಿದೆ. ಅದರಲ್ಲೂ ಗ್ರಾಮಾಂತರ ಪ್ರದೇಶದ ಪರಿಸ್ಥಿತಿ ಹೇಳತೀರದು. ನಿರುದ್ಯೋಗಿಗಳಿಗೆ ನಾವು ಉದ್ಯೋಗವನ್ನು ಒದಗಿಸಿಕೊಡಬೇಕು. ಅವರು ನಮ್ಮ ದೇಶದ ಆಸ್ತಿಯಾಗಿ ಪರಿವರ್ತಿತವಾಗುವಂತೆ ನಾವು ಅವರ ಪ್ರತಿಭೆ ಬಳಸಿಕೊಳ್ಳಬೇಕು ಮತ್ತು ಆ ಮೂಲಕ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಿಕೊಳ್ಳಬೇಕು. ಈ ರೀತಿಯ ಕಾರ್ಯಕ್ರಮಗಳ ಮೇಲೆ ವ್ಯಯಿಸಿದ ಹಣವನ್ನು ಆರ್ಥಿಕತೆಯ ಮೇಲೆ ಹಣದುಬ್ಬರದ ಒತ್ತಡಕ್ಕೆ ದಾರಿ ಮಾಡಿ ಕೊಡಬಹುದೆಂದು ಕೆಲವರು ವಾದಿಸಬಹುದು. ಆದರೆ ದೀರ್ಘಾವಧಿಯಲ್ಲಿ ಅದು ಅತ್ಯಂತ ಲಾಭದಾಯಕವಾಗಿ ಪರಿಣಮಿಸುವುದು ಹಾಗಾಗಿ ಈಗ ಸದನದ ಮುಂದಿರುವ ಗೊತ್ತುವಳಿ ಅತ್ಯಂತ ಪ್ರಮುಖವಾಗಿದ್ದು ಸರ್ಕಾರ ಅದನ್ನು ಅಂಗೀಕರಿಸಲೇಬೇಕಾಗಿದೆ. ಅದಲ್ಲದೆ ಇದೊಂದು ವಿವಾದಾದೀತ ಪ್ರಶ್ನೆಯಾಗಿದ್ದು ಸದಸ್ಯರಲ್ಲಿ ಈ ವಿಷಯದಲ್ಲಿ ಯಾವುದೇ ರೀತಿಯ ಭಿನ್ನಾಭಿಪ್ರಾಯ ಇರುವುದು ಸಾಧ್ಯವಿಲ್ಲ. ಯಾವನೇ ಕಾಂಗ್ರೆಸ್ ಸದಸ್ಯನಾದರೂ ಗ್ರಾಮೀಣ ಪ್ರದೇಶಗಳಲ್ಲಿ ಒಳ್ಳೆಯ ಮನೆಗಳನ್ನು ಕಟ್ಟಬಾರದೆಂದು ಹೇಳುವನೇ? ಈ ಗೊತ್ತುವಳಿಗೆ ಎಲ್ಲ ಕಡೆಗಳಿಂದ ಭಾರಿ ಬೆಂಬಲ ದೊರೆಯುವುದೆಂದು ನಾನು ನಿರೀಕ್ಷಿಸಿದ್ದೇನೆ. ಹಾಗಾಗಿ ಈ ವಿಷಯವನ್ನು ಮತ್ತೆ ಸದನದಲ್ಲಿ ಆಮೂಲಾಗ್ರವಾಗಿ ಎಳೆ-ಎಳೆಯಾಗಿ ಚರ್ಚಿಸಲಾಗುವುದು ಎಂಬ ನೆಪ ಬಡ್ಡಿ ಗೊತ್ತುವಳಿಯನ್ನು ಹಿಂತೆಗೆದುಕೊಳ್ಳುವಂತೆ ಅದನ್ನು ಮಂಡಿಸಿದವರನ್ನು ಕೇಳಿಕೊಳ್ಳದೆ ಗೊತ್ತುವಳಿಯನ್ನು ಮಾನ್ಯ ಸಚಿವರು ಅಂಗೀಕರಿಸುವರೆಂದು ಭರವಸೆ ಇಟ್ಟಿದ್ದೇನೆ. ಮಾನ್ಯ

ಸಚಿವರು ಈ ಗೊತ್ತುವಳಿಯನ್ನು ಅಂಗೀಕರಿಸಲೇ ಬೇಕು. ಏಕೆಂದರೆ ನಾನು ಮೊದಲೇ ಹೇಳಿದಂತೆ ನಿಸ್ಸಂಶಯವಾಗಿಯೂ ಇದೊಂದು ಅತ್ಯುತ್ತಮ ಹೆಜ್ಜೆಯಾಗಿದೆ. ಮತ್ತು ಇದು ನಿಜವಾದ ಅರ್ಥದಲ್ಲಿ ಸಾಮಾಜಿಕ ಕ್ರಾಂತಿಯನ್ನು ತರಲಿದೆ. ಹಾಗಾಗಿ ನಾನು ಈ ಗೊತ್ತುವಳಿಯನ್ನು ಅತ್ಯಂತ ಬಲವಾಗಿ ಬೆಂಬಲಿಸುತ್ತೇನೆ.

## ಅಧ್ಯಾಯ - 16

## ಕೇಂದ್ರ ಸರ್ಕಾರಿ ನೌಕರರ ಬೇಡಿಕೆಗಳ ಮೇಲಿನ ನಿಲುವಳಿ*

ಮಾನ್ಯ ಸಭಾಧ್ಯಕ್ಷರೇ, ಅತ್ಯಂತ ಗಂಭೀರವಾದ ಪ್ರಶ್ನೆಯೊಂದು ಸದನದ ಮುಂದಿದೆ. ಕೂದಲನ್ನು ಸೀಳುವಂತಹ ರೀತಿಯ ವಾದ ವೈಖರಿಯ ಅತ್ಯುತ್ತಮ ವಕೀಲರು ಎನಿಸಿರುವ ಶ್ರೀಮತಿ ತಾರಕೇಶ್ವರಿ ಸಿನ್ಹಾ ಅವರು ಕಾರ್ಮಿಕ ನ್ಯಾಯಾಧೀಕರಣದ ಮುಂದೆ ಹೋಗಿ ನ್ಯಾಯ ಪಡೆಯುವ ಹಕ್ಕು ಕಾರ್ಮಿಕರಿಗೆ ಇಲ್ಲವೆಂದು ರುಜುವಾತು ಪಡಿಸಲು ಹೆಣಗುತ್ತಿದ್ದಾರೆ.

ಇದೀಗ ಸದನದಲ್ಲಿ ಓದಿ ಹೇಳಲಾದ ಜೆ.ಸಿ.ಎಂ. ನಿಯಮಗಳು ಯಾವ ರೀತಿ ಅಸ್ತಿತ್ವಕ್ಕೆ ಬಂದಿದೆ? ಈ ಪ್ರಶ್ನೆಯನ್ನು ಆಳವಾಗಿ ವಿಶ್ಲೇಷಿಸಿ ನೋಡಿದರೆ ನಾವು ಬಹಳ ಸಮಯದಿಂದ ಕೇಳುತ್ತಿದ್ದ ನಮ್ಮ ಬೇಡಿಕೆಯ ತಳಹದಿಯಲ್ಲಿ ಸ್ಥಾಪಿತವಾಯಿತು ಎಂಬುದು ನಮಗೆ ತಿಳಿಯುತ್ತದೆ. 1960ರ ಕೇಂದ್ರ ಕಾರ್ಮಿಕರ (ಕೇಂದ್ರ ಸರ್ಕಾರಿ ನೌಕರರ) ಮುಷ್ಕರಕ್ಕೆ ನಾನೇ ಹೊಣೆಗಾರನಾಗಿದ್ದೆ. ನಾವು ನಮ್ಮ ನಾಯಕತ್ವವನ್ನು ಕಾಯ್ದುಕೊಳ್ಳುವ ಮತ್ತು ನಮ್ಮ ಸ್ವಂತದ ಹಿತಾಸಕ್ತಿಗಳನ್ನು ಸಾಧಿಸುವುದರಲ್ಲಿ ಮಾತ್ರವೇ ಆಸಕ್ತರಾಗಿದ್ದೇವೆ ಎಂದು ಕೆಲವರು ಆರೋಪಿಸಿದ್ದಾರೆ ಮತ್ತು ಇದೇ ಉದ್ದೇಶಕ್ಕಾಗಿ ನಾವು ಕಾರ್ಮಿಕರನ್ನು ಮುಷ್ಕರಕ್ಕೆ ಪ್ರೇರೇಪಿಸುತ್ತೇವೆ ಎಂದು ಹೇಳುವವರು ಇದ್ದಾರೆ. ಆದರೆ ವಾಸ್ತವವಾಗಿ ಪ್ರತಿ ಸಂದರ್ಭದಲ್ಲೂ ಕಾರ್ಮಿಕರನ್ನು ರಾಜಿಗೆ ಒಡಂಬಡುವಂತೆ ಮಾಡುವುದರಲ್ಲಿ ನಾನು ಒಬ್ಬನಾಗಿದ್ದೇನೆ. ಆದರೆ ಅಂತಹ ರಾಜಿಗೂ ಒಂದು ಪರಿಮಿತಿ ಇರುತ್ತದೆ. ಈ ಪರಿಮಿತಿಯನ್ನು ಬಿಟ್ಟು ಹೋಗುವುದೆಂದರೆ ಮತ್ತೆ ಉಳಿಯುವುದು ಶರಣಾಗತಿ ಮಾತ್ರ. 1960ರಲ್ಲಿ ನಡೆದ ಮುಷ್ಕರಕ್ಕೆ ಇದ್ದ ಕಾರಣವೇನು? ಅದು ಮುಂದಿಟ್ಟ ಬೇಡಿಕೆಗಳೇನು? ಮತ್ತು ಯಾವ ಕಾರಣಕ್ಕಾಗಿ ಅದನ್ನು ವಿರೋಧಿಸಲಾಯಿತು? ಆಗ ಇದ್ದ ಬೇಡಿಕೆ ಏನೆಂದರೆ ಕಾರ್ಮಿಕರಿಗೆ ತುಟ್ಟಿಭತ್ಯೆ ಸಿಗಬೇಕು. ಅವರ ಈ ಬೇಡಿಕೆಯನ್ನು ತಳ್ಳಿ ಹಾಕಿದಾಗ ಅವರಿಗೆ ಮುಷ್ಕರ ನಡೆಸುವುದನ್ನು ಬಿಟ್ಟರೆ ಬೇರೆ ಯಾವ ಮಾರ್ಗವೂ ಉಳಿದಿರಲಿಲ್ಲ.

ನಮ್ಮ ಸಂಗಾತಿಯಾದ ಶ್ರೀ ಡಾಂಗೆ ಅವರು ಯಾವ ಸಂದರ್ಭದಲ್ಲಿ ಮತ್ತು ಯಾವ ಕಾರಣಕ್ಕಾಗಿ ಹೋರಾಟಕ್ಕೆ ಇಳಿಯಬೇಕಾದಿತೆಂದು ಈಗ ತಾನೇ ಹೇಳಿದ್ದಾರೆ ಮತ್ತು ಅಂತಿಮವಾಗಿ ಜೆ.ಸಿ.ಎಂ. ನ್ನು ರಚಿಸಲಾಯಿತು. ಒಪ್ಪಂದ ಎಂಬ ಶಬ್ದವನ್ನು

*ಲೋಕಸಭಾ ಚರ್ಚೆ, ಆಗಸ್ಟ್ 30, 1968, ಸಿಸಿ 3383-90

ವಿವರಿಸುವಾಗ ಕಾರ್ಮಿಕರ ಒಂದು ವರ್ಗಕ್ಕೆ ಸಂಬಂಧಿಸಿದ್ದಾಗಿದ್ದರೆ ನಮಗೆ ಅವರ ವಿಷಯದಲ್ಲಿ ಮಧ್ಯಸ್ಥಿಕೆಯ ತೀರ್ಮಾನವನ್ನು ಕೇಳುವ ಹಕ್ಕಿರುತ್ತಿತ್ತು ಎಂದು ಈಗಷ್ಟೇ ಹೇಳಿದ್ದೀರಿ. ಆದರೆ ನಮಗೆ ಮಧ್ಯಸ್ಥಿಕೆ ಬೇಕಾಗಿಲ್ಲ. ಆದರೆ ಕಾರ್ಮಿಕರಿಂದ ಬೇಡಿಕೆ ಬಂದಾಗ ಮಾತುಕತೆಗಳು ನಡೆಯಲೇ ಬೇಕು. ಮಾತುಕತೆಗಳು ವಿಫಲವಾದರೆ ನಮ್ಮ ಬಳಿಯಲ್ಲಿರುವ ಎಲ್ಲ ಶಕ್ತಿ ಸಾಮರ್ಥ್ಯಗಳನ್ನು ಬಳಸಿಕೊಂಡು ಸಮಗ್ರವಾಗಿ ಆಡಳಿತ ಮಂಡಳಿಯೊಂದಿಗೆ ನಮ್ಮ ಬೇಡಿಕೆಗಳ ಬಗ್ಗೆ ಚೌಕಾಶಿ ಮಾಡಿ ಒಂದು ತೀರ್ಮಾನಕ್ಕೆ ಬರಬಹುದು. ಇದಾಗಿಯೂ ವಿವಾದ ಇತ್ಯರ್ಥವಾಗದೆ ಹೋದರೆ ಮುಷ್ಕರವೇ ಕೊನೆಯ ಅಸ್ತ್ರ. ಈಗ ಸರ್ಕಾರಿ ನೌಕರರು ಮುಷ್ಕರಕ್ಕೆ ಮುಂದಾಗಬಹುದೇ ಎಂಬ ಪ್ರಶ್ನೆ ಏಳುತ್ತದೆ. ಏಕೆಂದರೆ ಇಂತಹ ಮುಷ್ಕರದಿಂದ ಸರ್ಕಾರದ ಇಡೀ ಯಂತ್ರವೇ ಸ್ಥಗಿತಗೊಳ್ಳುತ್ತದೆ. ಹಾಗಾಗಿ ದೇಶದ ಒಟ್ಟು ಹಿತದೃಷ್ಟಿಯಿಂದ ನಾವು ಮುಷ್ಕರಕ್ಕೆ ಮುಂದಾಗಬಾರದು. ಆದರೆ ನಾವು ಮುಷ್ಕರ ಮಾಡುವುದನ್ನೇ ಬಿಟ್ಟು ಬಿಟ್ಟರೆ ನಮ್ಮ ಬೇಡಿಕೆಗಳು ಈಡೇರುವುದಾದರೂ ಹೇಗೆ? ಕಾರ್ಮಿಕರಿಗೆ ಸಂಬಂಧಿಸಿದ ವಿವಾದಗಳು ಮಧ್ಯಸ್ಥಿಕೆದಾರರಿಗೆ ಪರಿಶೀಲನೆಗೆ ಒಪ್ಪಿಸಲು ಅವಕಾಶ ಕಲ್ಪಿಸುವ ಸಲುವಾಗಿ ಜೆ.ಸಿ.ಎಂ. ರಚಿತವಾಯಿತು ಎಂದು ಶ್ರೀ ಡಾಂಗೆಯವರು ಹೇಳಿದ್ದು ಉಚಿತವೇ ಆಗಿದೆ. ಇವೆರಡು ಅಂಶಗಳು ವೇತನಕ್ಕೆ ಸಂಬಂಧಿಸಿದವುಗಳಾಗಿವೆ.

ವೇತನಗಳಿಗೆ ಸಂಬಂಧಿಸಿದ ಪ್ರಶ್ನೆಯನ್ನು ಎತ್ತಿಕೊಂಡಾಗ ಅದರಲ್ಲಿ ನಾಲ್ಕನೇ ದರ್ಜೆ ನೌಕರರು ಎಂದು ಕರೆಯಿಸಿಕೊಳ್ಳುವ ಉದ್ಯೋಗಿಗಳು ಸೇರುತ್ತಾರೆ. ಒಂದು ಸಲ ಮುಷ್ಕರವೊಂದು ನಡೆದಾಗ ತುಟ್ಟಿಭತ್ಯೆ ಬೇಡಿಕೆ ಅದರಲ್ಲಿ ಪ್ರಮುಖವಾಗಿತ್ತು. ಆಗ ಸರಕಾರ ಏನು ಮಾಡುತ್ತಿತ್ತು ಎಂಬುದೇ ಇಲ್ಲಿಯ ಪ್ರಶ್ನೆ. ಒಂದೆಡೆ ಖಾಸಗಿ ಕ್ಷೇತ್ರದ ನಿದರ್ಶನ, ಇನ್ನೊಂದೆಡೆಯಲ್ಲಿ ಈ ಕಾರ್ಮಿಕರ ಬಗ್ಗೆ ಆಡಳಿತ ಮಂಡಳಿ ತಳೆದಿರುವ ನಿರ್ಲಕ್ಷ್ಯ ಧೋರಣೆ ಹಾಗಾಗಿ ಇದು ಅತ್ಯಂತ ಗಂಭೀರ ವಿಷಯವಾಗಿದೆ. ನಿಮಗೆ ಮಧ್ಯಸ್ಥಿಕೆ ತೀರ್ಮಾನ ಬೇಡವೆಂದಾದರೆ ಅದಕ್ಕೆ ಬೇರೆ ಏನಾದರೂ ಪರ್ಯಾಯ ಮಾರ್ಗವನ್ನು ಕಂಡುಕೊಳ್ಳಿ. ಆದರೆ ಏನನ್ನೂ ಮಾಡದಿರುವುದು ಹೇಗೆ ಸಾಧ್ಯ? ಆದ್ದರಿಂದ ಏನನ್ನಾದರೂ ಮಾಡಿಯೇ ತೀರಬೇಕು. ನಾವಿಲ್ಲಿ ಕಾರ್ಮಿಕರ ಪ್ರತಿನಿಧಿಗಳಾಗಿ ಕುಳಿತುಕೊಂಡಿದ್ದೇವೆ. ಇದು ಸಚಿವಾಲಯದ ನೌಕರರಿಗೆ ಮಾತ್ರ ಸಂಬಂಧಿಸಿದ ವಿಷಯವಲ್ಲ. ಅದು ರೈಲ್ವೆ ಇಲಾಖೆಯ ಕಾರ್ಮಿಕರು, ರಕ್ಷಣಾ ಇಲಾಖೆಯ ಉದ್ಯೋಗಿಗಳು, ಸಾರ್ವಜನಿಕ ಕಾಮಗಾರಿ ಇಲಾಖೆ, ಅಂಚೆ ತಂತಿ ಕಚೇರಿ ಮತ್ತು ಇತರ ಅನೇಕ ವರಮಾನ ತರುವ ಮತ್ತು ಉತ್ಪಾದಿತ ಚಟುವಟಿಕೆಗಳಲ್ಲಿ ನಿರತರಾಗಿರುವ ಅದೆಷ್ಟೋ ನೌಕರರಿಗೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಇಂತಹ ಸಂಸ್ಥೆಗಳು ಸರ್ಕಾರದ

ಕೈಯಲ್ಲಿವೆ ಎಂಬ ಕಾರಣಕ್ಕಾಗಿ ಈ ಇಲಾಖೆಗಳಲ್ಲಿ ಕೆಲಸ ಮಾಡುವ ವ್ಯಕ್ತಿಗಳ ಹಕ್ಕುಗಳನ್ನು ಮೊಟಕುಗೊಳಿಸಲು ಬರುವುದಿಲ್ಲ ಅಥವಾ ಈ ಕಾರ್ಮಿಕರಿಗೆ ಪ್ರತಿಭಟನೆಯ ಹಕ್ಕು ಇಲ್ಲ ಎನ್ನುವುದು ಸರಿಯಾಗುವುದಿಲ್ಲ. ಟಾಟಾ ಉದ್ಯಮಿ ಸಂಸ್ಥೆಯ ನೌಕರರಿಗೆ ಮುಷ್ಕರ ನಡೆಸುವ ಹಕ್ಕು ಇದೆ ಎಂದಾದರೆ ರಕ್ಷಣಾ ಇಲಾಖೆ ಯಂತ್ರೋಪಕರಣಗಳ ಕಾರ್ಖಾನೆಗಳ ನೌಕರರು ಈ ಹಕ್ಕನ್ನು ಹೊಂದಿರಲೇಬೇಕು.

ಇಂತಹ ಪ್ರಶ್ನೆಗಳನ್ನು ಬಗೆಹರಿಸುವ ಸಲುವಾಗಿಯೇ ಜೆಸಿಎಂನ ಸ್ಥಾಪನೆಯಾಗಿದೆ. ಆದರೆ ಇಂದು ಚವಾಣ್ ಅವರು ನಾವು ಇದರಲ್ಲಿ ರಾಜಕೀಯವನ್ನು ತರುತ್ತಿದ್ದೇವೆ ಎಂದು ಹೇಳುತ್ತಿದ್ದಾರೆ. ಆದರೆ ಅದರಲ್ಲಿ ಏಕೆ ರಾಜಕೀಯ ಪ್ರವೇಶವಾಗಿದೆ? ಮತ್ತು ಹೇಗೆ ಪ್ರವೇಶವಾಗಿದೆ ಎಂಬುದನ್ನು ನಾನು ಚವಾಣ್ ಅವರನ್ನು ಪ್ರಶ್ನಿಸಬಯಸುತ್ತೇನೆ. ಜೆಸಿಎಂನಲ್ಲಿ ಭಿನ್ನಾಭಿಪ್ರಾಯ ಇದೆ ಎಂದಾದರೆ ಅದನ್ನು ಯಾರೊಬ್ಬರ ತಲೆಗೂ ಕಟ್ಟಲು ಬರುವುದಿಲ್ಲ. ಏಕೆಂದರೆ ಜೆ.ಸಿ.ಎಂ.ನಲ್ಲಿ ಇಂಟಕ್‌ನವರಿದ್ದಾರೆ. ನಮ್ಮ ಜನರಿದ್ದಾರೆ ಮತ್ತು ಇತರರು ಇದ್ದಾರೆ. ಹಾಗಾಗಿ ಯಾವುದೇ ವಿಷಯದಲ್ಲಿ ಭಿನ್ನಾಭಿಪ್ರಾಯ ಬಂದರೆ ಅದನ್ನು ರಾಜಕೀಯ ಎಂದು ಹೇಳಲು ಬರುವುದಿಲ್ಲ. ನಾವು ಬ್ರಿಟಿಷರ ವಿರುದ್ಧ ಹೋರಾಡುತ್ತಿದ್ದಾಗ ಕೆಲವರು ನಾವು ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿಲ್ಲ. ನಮ್ಮ ಛಾಯಾಚಿತ್ರಗಳು ವಾರ್ತಾ ಪತ್ರಿಕೆಗಳು - ದಿನಪತ್ರಿಕೆಗಳು ಬರಬೇಕು ಎಂಬ ಕಾರಣಕ್ಕೆ ನಾವು ಹೆಣಗುತ್ತಿದ್ದೇವೆ ಎಂದು ಹೇಳಿದ್ದುಂಟು. ಆದರೆ ರಾಜಕೀಯ ನಮಗೆ ಎಂದೂ ಒಂದು ವೃತ್ತಿಯಾಗಿರಲಿಲ್ಲ. ಅದು ನಮಗೆ ಜೀವನದ ಒಂದು ಧ್ಯೇಯವಾಗಿತ್ತು. ಮತ್ತು ಅದಕ್ಕಾಗಿಯೇ ನಮ್ಮ ಶ್ರಮವನ್ನು ನಾವು ಮೀಸಲಿಟ್ಟಿದ್ದೆವು ಎಂಬ ಅಂಶವನ್ನು ಈ ಸಂದರ್ಭದಲ್ಲಿ ನೆನಪಿಸಬಯಸುತ್ತೇನೆ.

ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವುದು ಹೇಗೆಂಬುದೇ ಈಗ ನಮ್ಮ ಮುಂದಿರುವ ಪ್ರಮುಖ ಪ್ರಶ್ನೆಯಾಗಿದೆ. ಮಾನ್ಯ ಸಚಿವರಲ್ಲಿ ನಾನು ವಿನಂತಿಸುವುದಿಷ್ಟೆ. ಈಗ ಅವರು ಇಲ್ಲಿಲ್ಲ, ಪ್ರಾಯಶಃ ಈ ವಿಷಯವನ್ನು ಚರ್ಚಿಸಲು ಅವರು ಹೋಗಿರಬೇಕು - ಈ ಸಮಸ್ಯೆಗೆ ಚರ್ಚೆಯ ಮೂಲಕ ಮಾತುಕತೆಗಳ ಮೂಲಕ ಒಂದು ಪರಿಹಾರ ಕಂಡುಕೊಳ್ಳುವುದು ಸಾಧ್ಯವಿದ್ದರೆ ಅದನ್ನು ಅವರು ಮಾಡಬೇಕು. ಮಾನ್ಯ ಚವಾಣ್ ಅವರು ನಮ್ಮನ್ನು ಮಾತುಕತೆಗಳಿಗಾಗಿ ಆಹ್ವಾನಿಸಿದ್ದಾರೆ. ಅವರು ಏತಕ್ಕಾಗಿ ನಮ್ಮನ್ನು ಕರೆದಿದ್ದಾರೆ. ಈ ವಿಷಯ ಮಧ್ಯಸ್ಥಿಕೆಗೆ ಒಪ್ಪಿಸಬಹುದೇ, ಬೇಡವೇ ಎಂಬುದನ್ನು ನಮ್ಮೊಂದಿಗೆ ಚರ್ಚಿಸಲು ಬಯಸಿದ್ದಾರೆ. ಇದು ವ್ಯರ್ಥ ಕಸರತ್ತು. ನಾವು ಅದಕ್ಕೆ ತಯಾರಿಲ್ಲ. ನೀವು ಈ ವಿವಾದವನ್ನು ಬಗೆಹರಿಸಲು ಬಯಸುತ್ತೀರಾದರೆ ಮತ್ತು ಅಗತ್ಯ ಆಧಾರಿತ ವೇತನದ ಪ್ರಶ್ನೆಯನ್ನು ಚರ್ಚಿಸಲು ಬಯಸುತ್ತೀರಾದರೆ ನಾವು ಅಂತಹ

ಚರ್ಚೆಗೆ ಸಿದ್ಧರಿದ್ದೇವೆ. ಮಧ್ಯಸ್ಥಿಕೆಯ ನ್ಯಾಯಾಧೀಕರಣ ವ್ಯವಸ್ಥೆಯ ಸ್ಥಾಪನೆಯ ಉದ್ದೇಶವು ಮುಷ್ಕರಗಳಿಗೆ ಅವಕಾಶ ಕೊಡದೆ ಕಾರ್ಮಿಕರ ಬೇಡಿಕೆಗಳನ್ನು ಈಡೇರಿಸುವ ಸಲುವಾಗಿಯೇ ಇತ್ತು. ಆದರೆ ಸರ್ಕಾರವೇ ಈ ವಿಷಯದಲ್ಲಿ ಆಸಕ್ತಿ ಹೊಂದಿಲ್ಲ.

ಈಗ ಏನು ಮಾಡಬೇಕು ಎಂಬುದನ್ನು ನಿರ್ಧರಿಸಲು ನಾನು ಆಸಕ್ತನಾಗಿದ್ದೇನೆ. ನಾನು ಈ ಉದ್ದೇಶಕ್ಕಾಗಿ ಸಂಘಟಿಸಿರುವ ಕ್ರಿಯಾ ಸಮಿತಿಯ ಅಧ್ಯಕ್ಷನಾಗಿದ್ದೇನೆ. ಮತ್ತು ನನ್ನ ಸಂಪೂರ್ಣ ಹೊಣೆಗಾರಿಕೆಯಿಂದ ಇದನ್ನು ಹೇಳುತ್ತಿದ್ದೇನೆ - ಅವರು ನಮ್ಮನ್ನು ಗುಂಡಿಟ್ಟು ಕೊಲ್ಲಲು ಬಯಸುತ್ತಾರಾದರೆ ನಾವು ಅದಕ್ಕೂ ಸಿದ್ಧರಾಗಿಯೇ ಇದ್ದೇವೆ. ಹೊಟ್ಟೆಗೆ ಆಹಾರವೇ ಸಿಗುತ್ತಿಲ್ಲ. ಹಾಗಾಗಿ ನಾವು ಗುಂಡುಗಳಿಗೆ ಎದೆಯೊಡ್ಡಲು ಸಿದ್ಧರಾಗಿದ್ದೇವೆ. ನೀವು ಏನೇ ಹೇಳಿ ಇಂದು ಕಾರ್ಮಿಕರಿಗೆ ಬೇರೆ ದಾರಿಯೇ ಉಳಿದಿಲ್ಲ ಎಂಬುದು ವಾಸ್ತವಾಂಶ. ಅನ್ಯಾಯದ ವಿರುದ್ಧ ಪ್ರತಿಭಟಿಸುವುದೇ ನಮ್ಮ ಮುಂದಿರುವ ಏಕೈಕ ಮಾರ್ಗ. ನಾವು ಗಾಂಧೀಜಿಯವರ ಅನುಯಾಯಿಗಳಾಗಿದ್ದೇವೆ. ಅವರ ಬೋಧನೆಗಳಲ್ಲಿ ಕೆಲವನ್ನು ಅರಗಿಸಿಕೊಂಡಿದ್ದೇವೆ. ದೇಶದ ಕಾರ್ಮಿಕರಿಗೆ ನ್ಯಾಯ ಸಿಗದೆ ಇದ್ದರೆ ಅವರು ಸಮರ್ಪಣಾ ಭಾವದಿಂದ ಕೆಲಸ ಮಾಡಲಾರರು. ಅವರ ದಕ್ಷತೆ ಹೆಚ್ಚಲಾರದು. ಅಂತಹ ಸಂದರ್ಭದಲ್ಲಿ ಇವೆಲ್ಲದಕ್ಕೂ ಸರ್ಕಾರವೇ ನೈತಿಕ ಜವಾಬ್ದಾರಿ ಹೊತ್ತುಕೊಳ್ಳಬೇಕಾಗಿದೆ ಎಂಬುದನ್ನು ನಾನು ಈ ಸಂದರ್ಭದಲ್ಲಿ ಸ್ಪಷ್ಟಪಡಿಸ ಬಯಸುತ್ತೇನೆ.

ಇದು ಬರಿಯ ಹಣದ ವಿಷಯ ಮಾತ್ರವಲ್ಲ. ಅದಕ್ಕಿಂತ ಹೆಚ್ಚಿನದಾಗಿದೆ ಎಂಬುದನ್ನು ಸರ್ಕಾರಕ್ಕೆ ಮನಗಾಣಿಸಲು ಬಯಸುತ್ತಿದ್ದೇನೆ. ನೀವು ಒಡಂಬಡಿಕೆಯ ಬಗ್ಗೆ ಮಾತನಾಡುತ್ತಿದ್ದೀರಿ. ನಾವು ಅದನ್ನು ಅಂಗೀಕರಿಸಿದ್ದೇವೆ. ಬಹಳಷ್ಟು ಸಮಯದಿಂದ ಅದನ್ನು ಪಾಲಿಸಿಕೊಂಡು ಬಂದಿದ್ದೇವೆ. ಆದರೆ ಒಡಂಬಡಿಕೆಯ ಅನುಷ್ಠಾನದ ಪ್ರಶ್ನೆ ಬಂದಾಗಲೆಲ್ಲ ಅದು ಒಡಂಬಡಿಕೆಯ ವಿರುದ್ಧವಾಗಿದೆಯೇ ಹೇಗೆಂಬುದರ ಬಗ್ಗೆ ವಿಚಾರ ಮಾಡಲು ನಮ್ಮನ್ನು ಕೇಳುತ್ತೀರಿ. ಇದರಿಂದ ಏನೂ ಪ್ರಯೋಜನವಿಲ್ಲ. ಕೆಲವು ಸಮಯದ ಹಿಂದೆ ಪಂಜಾಬಿನಲ್ಲಿ ಸಾರಿಗೆ ಸಂಸ್ಥೆಗಳ ಸಂಬಂಧದಲ್ಲಿ ಇಂತಹ ಒಂದು ಒಪ್ಪಂದಕ್ಕೆ ಬರಲಾಯಿತು. ಸರ್ಕಾರವೇ ಅದನ್ನು ಉಲ್ಲಂಘಿಸಿತು. ಕಾರ್ಮಿಕರು ಅದನ್ನು ಪ್ರತಿಭಟಿಸಿ ಮುಷ್ಕರ ಹೂಡಿದರು. ಅವರನ್ನು ಸೇವೆಯಿಂದ ತೆಗೆದು ಹಾಕಲಾಯಿತು. ಅದೇ ರೀತಿ ನಮ್ಮನ್ನು ಕೂಡಾ ಬಲಿಪಶುಗಳಾಗಿ ಮಾಡುತ್ತೀರಿ ಎಂದು ನಮಗೆ ಗೊತ್ತಿದೆ. ನಾವು ಮುಷ್ಕರ ಹೂಡಿದಾಗ ಸರ್ಕಾರದ ಬಳಿ ಇರುವ ಇಡೀ ಕಾರ್ಯಯಂತ್ರವನ್ನು ಅದನ್ನು ದಮನಗೊಳಿಸಲು ಬಳಸಲಾಗುತ್ತದೆ ಎಂಬ ಅಂಶವು ನಮಗೆ ಗೊತ್ತಿದೆ. ಬ್ರಿಟಿಷರ ಆಳ್ವಿಕೆಯಲ್ಲಿ ಕೂಡಾ ಆಡಳಿತ ಯಂತ್ರ ಇದೇ ರೀತಿ ಕಾರ್ಯ ನಿರ್ವಹಿಸುತ್ತಿತ್ತು. ಹಾಗಾಗಿ ನಾವು ಕಾರ್ಮಿಕರನ್ನು ಅಪಾಯಕ್ಕೊಡ್ಡಲು ಇಚ್ಛಿಸುವುದಿಲ್ಲ. ಆದರೆ ನಾವು ಮುಷ್ಕರ

ನಡೆಸಲು ತೀರ್ಮಾನಿಸಿದಾಗ ಎಲ್ಲ ಅಂಶಗಳನ್ನು ಪರಿಶೀಲಿಸಿಯೇ ಕ್ರಮ ಕೈಗೊಳ್ಳುತ್ತೇನೆ ಮತ್ತು ಅದರ ಸಂಪೂರ್ಣ ಹೊಣೆಗಾರಿಕೆಯನ್ನು ಹೊತ್ತುಕೊಳ್ಳುತ್ತೇವೆ. ಇದು ವಸ್ತುತಃ ನಮ್ಮೆಲ್ಲರ ನೈತಿಕತೆಯ ಪ್ರಶ್ನೆಯೂ ಆಗಿದೆ. ನಾವು ಒಡಂಬಡಿಕೆಯೊಂದನ್ನು ಮಾಡಿಕೊಂಡು ಅದನ್ನು ಗೌರವಿಸದೆ ಇದ್ದರೆ ಅಲ್ಲಿ ನೈತಿಕತೆ ಎಲ್ಲಿ ಉಳಿಯುತ್ತದೆ? ನಾವು ವಿದೇಶಗಳೊಂದಿಗೆ ಮಾಡಿಕೊಳ್ಳುವ ಒಪ್ಪಂದಗಳನ್ನು ಗೌರವಿಸುತ್ತೇವೆ. ಆದರೆ ನಾವು ನಾವೇ ಮಾಡಿಕೊಂಡ ಒಪ್ಪಂದಗಳನ್ನು ಉಲ್ಲಂಘಿಸುತ್ತೇವೆ. ಇದು ನಿಜಕ್ಕೂ ಆಶ್ಚರ್ಯದ ಸಂಗತಿಯಾಗಿದೆ. ಉದಾ: ಸರ್ಕಾರವು ಕಚ್ ಒಪ್ಪಂದವನ್ನು ಗೌರವಿಸಿತು. ಆದರೆ ಅದೇ ಸರ್ಕಾರ ಕಾರ್ಮಿಕರೊಂದಿಗೆ ಮಾಡಿಕೊಂಡು ಒಪ್ಪಂದವನ್ನು ಉಲ್ಲಂಘಿಸುತ್ತದೆ. ಪ್ರಸಕ್ತ ವಿವಾದದಲ್ಲಿ ಕೂಡಾ ಸರ್ಕಾರವು ಈಗ ಊರ್ಜಿತದಲ್ಲಿರುವ ಒಡಂಬಡಿಕೆಯನ್ನು ಗೌರವಿಸಲೇಬೇಕಾಗಿತ್ತು.

ನಮ್ಮ ನಾಯಕತ್ವದಲ್ಲಿ ಮುಷ್ಕರಕ್ಕೆ ಮುಂದಾಗುವ ಕಾರ್ಮಿಕರು ಮುಂದಿನ ದಿನಗಳಲ್ಲಿ ಎಂತಹ ಸಂಕಷ್ಟಗಳಿಗೆ ಗುರಿಯಾಗಬೇಕಾದೀತು. ಮತ್ತು ಎಂತಹ ದುರಂತಗಳನ್ನು ಎದುರಿಸಬೇಕಾದೀತು ಎಂಬುದನ್ನು ನನಗೆ ಊಹಿಸಲು ಸಾಧ್ಯವಿಲ್ಲ. ಆದರೆ ಅದೇ ವೇಳೆಗೆ ನಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯಗಳು ಮತ್ತು ಅನ್ಯಾಯಗಳಿಗೆ ಹೇಡಿಗಳಂತೆ ಸಂಪೂರ್ಣವಾಗಿ ಶರಣಾಗಬೇಕೇ? ಎಂಬುದನ್ನು ಯೋಚಿಸಬೇಕಾಗಿದೆ. ಅಂತಹ ಶರಣಾಗತಿಗೆ ನಾವು ಸಿದ್ಧರಿಲ್ಲ. ನಮ್ಮ ನಾಯಸಮ್ಮತ ಬೇಡಿಕೆಗಳನ್ನು ಸರ್ಕಾರ ಸ್ವೀಕರಿಸುವಂತೆ ಮಾಡಲು ಮತ್ತು ನ್ಯಾಯವನ್ನು ಪಡೆಯುವಲ್ಲಿ ಸವಾಲು ಎದುರಿಸಬೇಕಾದ ಪ್ರಸಂಗ ಬಂದಲ್ಲಿ ನಾವು ಅದಕ್ಕೆ ಸಿದ್ಧರಾಗಲೇಬೇಕು. ಅದು ನಮ್ಮ ಕರ್ತವ್ಯ ಮತ್ತು ನಾವು ಅದನ್ನು ಪರಿಪೂರ್ಣಗೊಳಿಸಬೇಕಾಗಿದೆ. ಕಾರ್ಮಿಕರ ಹಕ್ಕಿಗಾಗಿ ನಮ್ಮ ಹೋರಾಟ ನಡೆಸುವಾಗ ಮತ್ತು ಅವರ ಹಕ್ಕುಗಳಿಗಾಗಿ ಹೋರಾಡುವಂತೆ ಅವರನ್ನು ಹುರಿದುಂಬಿಸುವಾಗ ತಾವು ವೇತನ ರೂಪದಲ್ಲಿ ಪಡೆಯುವ ಹಣವು ತೆರಿಗೆದಾರರಿಂದ ಬರುವ ಹಣವಾಗಿದ್ದು ಕಠಿಣ ಪರಿಶ್ರಮದಿಂದ ಅದಕ್ಕೆ ನ್ಯಾಯ ಒದಗಿಸಬೇಕೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ತಮ್ಮ ಕರ್ತವ್ಯಗಳನ್ನು ನಿರ್ವಹಿಸಬೇಕೆಂದು ಅದಕ್ಕೆ ಸರಿಯಾಗಿ ನಡೆದುಕೊಳ್ಳಬೇಕೆಂಬ ಅಂಶಗಳನ್ನು ನಾನು ಅವರಿಗೆ ಮನಗಾಣಿಸುತ್ತೇನೆ. ಕಾರ್ಮಿಕರು ಮುಷ್ಕರ ನಡೆಸಬೇಕಾದ ಅನಿವಾರ್ಯತೆಗೆ ಒಳಗಾಗುವ ಸಂದರ್ಭದಲ್ಲಿ ಅವರು ವಾಸ್ತವವಾಗಿ ರಾಷ್ಟ್ರದ ಧ್ಯೇಯವನ್ನೇ ಪಾಲಿಸುತ್ತಾರೆ. ಸೆಪ್ಟಂಬರ್ 19 ರಂದು ಕಾರ್ಮಿಕರು ಒಂದು ದಿನದ ಮುಷ್ಕರವನ್ನು ಈಡೇರಿಸಿಕೊಳ್ಳಲು ಬೇರಾವ ಮಾರ್ಗವೂ ಇಲ್ಲದೆ ಇರುವುದರಿಂದ ಅವರು ಈ ವಿಧಾನ ಹೂಡುತ್ತಾರಾದರಾದರೆ ಅದಕ್ಕೆ ಸರ್ಕಾರವೇ ಹೊಣೆಯಾಗಿದೆ. ತಮ್ಮ ನ್ಯಾಯಸಮ್ಮತ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಬೇರಾವ ಮಾರ್ಗವೂ ಇಲ್ಲದೆ ಇರುವುದರಿಂದ ಅವರು ಈ ನಿರ್ಧಾರಕ್ಕೆ ಬಂದಿದ್ದಾರೆ. ಈ ಮುಷ್ಕರಕ್ಕೆ ಕಾರ್ಮಿಕರು ಎಷ್ಟು ಮಾತ್ರಕ್ಕೂ ಹೊಣೆಗಾರರಾಗಿ ಇರುವುದಿಲ್ಲ. ಸರ್ಕಾರವು ಒಡಂಬಡಿಕೆಯನ್ನು ಉಲ್ಲಂಘಿಸುವುದರಿಂದ ಈ ಪರಿಸ್ಥಿತಿ ಉದ್ಭವಿಸಿದೆ.

## ಅಧ್ಯಾಯ - 17

## ಜಮ್ಮು ಮತ್ತು ಕಾಶ್ಮೀರ ಸ್ಥಾನಮಾನ ಕುರಿತ ಗೊತ್ತುವಳಿ*

ಸನ್ಮಾನ್ಯ ಅಧ್ಯಕ್ಷರೇ, ನಮ್ಮ ಮಿತ್ರರಾದ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಸದನದಲ್ಲಿ ಮಂಡಿಸಿರುವ ಜಮ್ಮು ಮತ್ತು ಕಾಶ್ಮೀರ ಸ್ವಾಯತ್ತತೆ ಕುರಿತ ಗೊತ್ತುವಳಿ ಅತ್ಯಂತ ಪ್ರಮುಖವಾದ ಗೊತ್ತುವಳಿಯಾಗಿದೆ. ಈ ಗೊತ್ತುವಳಿಯು ನಮ್ಮ ಸಂವಿಧಾನದಿಂದ 370ನೇ ವಿಧಿಯನ್ನು ಕಿತ್ತು ಹಾಕಬೇಕೆಂದು ಬಯಸುತ್ತದೆ. ದೇಶದಲ್ಲಿನ ಪ್ರಸಕ್ತ ಸನ್ನಿವೇಶದ ಹಿನ್ನೆಲೆಯಿಂದ ಇದು ಇನ್ನೂ ಹೆಚ್ಚು ಮಹತ್ವ ಪಡೆದಿದೆ. ಶ್ರೀ ವಾಜಪೇಯಿ ಅವರ ಉದ್ದೇಶ ದೇಶದ ಸಮಗ್ರತೆಯನ್ನು ಸಾಧಿಸುವುದಾಗಿದೆ. ಆದರೆ ಇಂತಹ ಬಿಡಿ ಬಿಡಿಯಾದ ಕ್ರಮಗಳನ್ನು ತೆಗೆದುಕೊಳ್ಳುವುದರಿಂದ ದೇಶದ ಸಮಗ್ರತೆಯನ್ನು ರಕ್ಷಿಸುವುದು ಅಸಾಧ್ಯ. ನಾವು ದೇಶದ ಏಕತೆ ಮತ್ತು ಸಮಗ್ರತೆಗೆ ದಾರಿ ಮಾಡಿಕೊಡುವ ವಾತಾವರಣವನ್ನು ಸೃಷ್ಟಿಸುವ ನಿಟ್ಟಿನಲ್ಲಿ ಯೋಚಿಸಬೇಕಾಗಿದೆ. ಈ ವಿಷಯದಲ್ಲಿ ನಾವು ದ್ವಂದ್ವ ನೀತಿಯನ್ನು ಅನುಸರಿಸುತ್ತಿದ್ದೇವೆ. ನಾವು ಒಂದೇ ದೇಶದ ಪ್ರಜೆಗಳಾಗಿರುವಾಗ ಈ ದ್ವಂದ್ವ ನೀತಿ ಮುಂದುವರೆಯುವುದನ್ನು ಒಪ್ಪಿಕೊಳ್ಳುವುದು ಹೇಗೆ ಸಾಧ್ಯ ಎಂದು ವಾಜಪೇಯಿಯವರು ತಮ್ಮ ಭಾಷಣದಲ್ಲಿ ಹೇಳಿದ್ದು ನನಗೆ ನೆನಪಿದೆ. ನಮ್ಮ ಸಂವಿಧಾನದ ಗುಣಲಕ್ಷಣಗಳಲ್ಲಿ ವಿವಿಧತೆಯಲ್ಲಿ ಏಕತೆ ಒಂದು ಪ್ರಮುಖ ಆಶಯವಾಗಿದೆ. ನಾವು ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಅಂಗೀಕರಿಸಿದ್ದೇವೆಯಾದರೆ ಪ್ರತಿಯೊಬ್ಬ ವ್ಯಕ್ತಿಯ ಪ್ರತ್ಯೇಕತೆಯನ್ನು ನಾವು ಸಂರಕ್ಷಿಸಬೇಕು ಎಂದೇ ಅದರ ಅರ್ಥ. ಜೊತೆಯಲ್ಲೇ ಪ್ರತಿಯೊಬ್ಬ ವ್ಯಕ್ತಿಯು ರಾಷ್ಟ್ರದ ಆತ್ಮದೊಂದಿಗೆ ತನ್ನನ್ನು ಏಕೀಭವಿಸಿಕೊಳ್ಳಬೇಕು.

ರಾಷ್ಟ್ರೀಯ ಏಕತೆ ಮತ್ತು ಸಮಗ್ರತೆಯ ಪ್ರಶ್ನೆ ಇಂದು ಅದೆಷ್ಟು ಪ್ರಾಮುಖ್ಯತೆ ಪಡೆದಿದೆ ಎಂದರೆ ನಾವು ಅದನ್ನು ದೇಶದ ವಿಶಾಲ ನೆಲೆಯಿಂದ ಪರಿಗಣಿಸಬೇಕಾಗಿದೆ. ನಮ್ಮ ದೇಶದ ಏಕತೆಯನ್ನು ಕಾಯ್ದುಕೊಳ್ಳಬೇಕಾದರೆ ದೇಶದ ಪ್ರಜಾಸತ್ತಾತ್ಮಕ ತಳಹದಿಯನ್ನು ಬಲಪಡಿಸಿಕೊಳ್ಳುವುದರಿಂದ ಮಾತ್ರ ಅದು ಸಾಧ್ಯ ಎಂಬುದನ್ನು ಖಂಡಿತಾ ವಾಜಪೇಯಿಯವರು ಒಪ್ಪುತ್ತಾರೆ ಎಂದು ನಾನು ಭಾವಿಸಿದ್ದೇನೆ. ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಸಂವಿಧಾನವನ್ನು ರಚಿಸುವಾಗ ದೇಶದ ಕೆಲವೊಂದು ವಿಶಿಷ್ಟತೆಗಳ ಕಡೆಗೆ ನಮ್ಮ ಗಮನವನ್ನು ಸೆಳೆದಿದ್ದರು. ದೇಶದ ಪ್ರಗತಿ ಸಾಧನೆಯಲ್ಲಿನ ಲೋಪದೋಷಗಳು, ಭಾಷೆಗಳ ಬಾಹುಳ್ಯ ಮತ್ತು ಜನರು ಅನುಸರಿಸುತ್ತಿದ್ದ ಮತ ಪಂಥಗಳ ವೈವಿಧ್ಯ ಈ ಅಂಶಗಳು ಅವುಗಳಲ್ಲಿ ಮುಖ್ಯವಾಗಿದ್ದವು. ಹಾಗಾಗಿ ಈ ಎಲ್ಲ

*ಲೋಕಸಭಾ ಚರ್ಚೆ; 6 ಡಿಸೆಂಬರ್, 1968, ಸಿಸಿ 259-266

ಸಂಗತಿಗಳೊಂದಿಗೆ ನಾವು ಹೆಜ್ಜೆ ಹಾಕಬೇಕಾಗಿದೆ. ಹಾಗಾಗಿ ಯಾವುದೇ ಕಾಯಿದೆ ಮೂಲಕ ರಾತ್ರಿ ಬೆಳಗಾಗುವುದರೊಳಗಾಗಿ ರಾಷ್ಟದ ಸಮಗ್ರತೆ ಸಾಧಿಸುವುದು ಸಾಧ್ಯವಿಲ್ಲ. ಅದು ನಮ್ಮ ದೈನಂದಿನ ಜೀವನದಲ್ಲಿ ತಾನಾಗಿ ಸೇರಿಕೊಳ್ಳಬೇಕು.

ಮೊನ್ನೆ ಸದನದಲ್ಲಿ ಕೇಂದ್ರ ಮತ್ತು ರಾಜ್ಯಗಳ ನಡುವಿನ ಸಂಬಂಧಗಳ ಮೇಲೆ ಚರ್ಚೆಯಾಯಿತು. ಆ ಸಂದರ್ಭದಲ್ಲಿ ನನಗೆ ಮಾತನಾಡಲು ಅವಕಾಶ ಸಿಕ್ಕಿರಲಿಲ್ಲ. ಬಹುಶಃ ಮುಂದಿನ ಸಲ ನನಗೆ ಅಂತಹ ಅವಕಾಶ ಸಿಗಬಹುದು ಎಂದು ಭಾವಿಸಿದ್ದೇನೆ. ಆದರೆ ಇದು ಯಾವುದೇ ಒಂದು ನಿರ್ದಿಷ್ಟ ಪಕ್ಷಕ್ಕೆ ಸಂಬಂಧಿಸಿದ ವಿಷಯವಾಗಿಲ್ಲ ಎಂಬುದನ್ನು ನಾನು ಸ್ಪಷ್ಟಪಡಿಸಬಯಸುತ್ತೇನೆ. ಈ ಕುರಿತು ನಾವೆಲ್ಲರೂ ಒಟ್ಟಿಗೆ ಕುಳಿತು ಯೋಚಿಸಬೇಕು ಹಾಗೂ ಚರ್ಚಿಸಬೇಕು. ನಮ್ಮ ಸ್ವಾತಂತ್ರ್ಯ ಹೋರಾಟದ ಅವಧಿಯಲ್ಲಿ ಮುಸ್ಲಿಂ ಸಮುದಾಯದಲ್ಲೇ ಒಂದು ಬಾಗ ನಮಗೆ ಸಂಪೂರ್ಣ ಬೆಂಬಲವನ್ನು ನೀಡಿದ್ದರು. ಅದೇ ರೀತಿ ಇನ್ನೊಂದು ವರ್ಗ ನಮಗೆ ಸಹಾಯ ನೀಡುವ ಬದಲಾಗಿ ಬಲವಾದ ಪ್ರತಿರೋಧವನ್ನೇ ಒಡ್ಡಿತು ಎಂಬ ಅಂಶವನ್ನು ನಾವು ಮರೆಯಬಾರದು. ಕಾಶ್ಮೀರದ ಮುಸ್ಲೀಮರು ಏಕರಾಷ್ಟ ಸಿದ್ಧಾಂತವನ್ನು ಬೆಂಬಲಿಸಿದ ವರ್ಗಕ್ಕೆ ಸೇರಿದವರು. ಆ ಕಾಲದಲ್ಲಿ ಬಾದಶಖಾನ್ ನಮ್ಮ ನಾಯಕರಾಗಿದ್ದರು. ಇಂದಿಗೂ ಅವರೇ ನಮ್ಮ ನಾಯಕರಾಗಿ ಮುಂದುವರಿದಿದ್ದಾರೆ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅವರು ನಮಗೆ ನಾಯಕತ್ವ ನೀಡಿದ್ದರು. ಇಂದಿಗೂ ಅವರ ಹೋರಾಟದ ಬಗ್ಗೆ ನಮಗೆ ಸಹಾನುಭೂತಿ ಇದೆ. ಅವರ ಧ್ಯೇಯವನ್ನು ನಾವು ಬೆಂಬಲಿಸುತ್ತೇವೆ. ಫಕ್ತೂನ್‌ರಿಗೆ ಪಾಕಿಸ್ತಾನದಲ್ಲಿ ಸ್ವಾಯತ್ತತೆ ಸಿಗಲೇಬೇಕು ಎಂದು ನಾವು ಭಾವಿಸಿದ್ದೇವೆ. ನಮ್ಮ ಪಕ್ಷದ ಅಭಿಪ್ರಾಯ ಕೂಡಾ ಅದೇ ಆಗಿದೆ. ಫಕ್ತೂನಿಗಳ ಕೆಲವೊಂದು ಪ್ರಶ್ನೆಗಳನ್ನು ವಿಭಿನ್ನ ನೆಲಗಟ್ಟಿನಲ್ಲಿ ವ್ಯವಹರಿಸಬೇಕಾಗಿದೆ. ಡಿ.ಎಂ.ಕೆ.ಯ ನಮ್ಮ ಸಂಗಾತಿಗಳೊಂದಿಗೆ ನಾವು ಸಹಾನುಭೂತಿಯಿಂದ ವ್ಯವಹರಿಸಬೇಕೇ ಹೊರತು ಅಸಹನೆಯಿಂದ ವರ್ತಿಸಬಾರದು. ಇಂತಹ ಬೇಡಿಕೆಗಳಿಗೆ ಕಾರಣ ಏನೆಂಬುದರ ಬಗ್ಗೆ ನಾವು ಗಾಢವಾಗಿ ಯೋಚಿಸಬೇಕಾಗುತ್ತದೆ. ನಮ್ಮ ದೇಶದಲ್ಲಿ ವಿಭಿನ್ನ ವಲಯಗಳು, ವಿಭಿನ್ನ ಪ್ರಾಂತ್ಯಗಳು ಮತ್ತು ವಿಭಿನ್ನ ಜನವರ್ಗಗಳಿರುವುದರಿಂದ ಇಂತಹ ಬೇಡಿಕಗಳು ಉದ್ಭವಿಸುತ್ತವೆ. ಅವರ ಸಮಸ್ಯೆಗಳು ಕೂಡಾ ಅದೇ ರೀತಿ ಭಿನ್ನ ಭಿನ್ನವಾಗಿರುತ್ತವೆ. ಅವುಗಳನ್ನು ಬಗೆಹರಿಸದ ಹೊರತು ಕಾಯಿದೆಗಳ ಬದಲಿಯಿಂದ ನಾವು ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಕಾಯ್ದೆಗಳ ಕೋಟೆ ನಮ್ಮನ್ನು ಒಂದುಗೂಡಿಸಲಾರದು. ಒಂದು ವೇಳೆ ನಾವು ಹಾಗೆ ಮಾಡಲು ಯತ್ನಿಸಿದ್ದಲ್ಲಿ ದೇಶವು ಒಡೆದು ಹೋಗುವುದು. ಹಾಗಾಗಿ ಬಲವಂತದಿಂದ ಸಮಗ್ರತೆಯನ್ನು ತರುವುದು ಅಸಾಧ್ಯ ಎಂಬುದು ನನ್ನ ನಂಬಿಕೆಯಾಗಿದೆ.

ನಾನು ವಾಜಪೇಯಿ ಸಾಹೇಬರು ಹೊಂದಿರುವ ಉದ್ದೇಶದ ಬಗ್ಗೆ ಒಪ್ಪುತ್ತೇನೆ.

ಅವರ ಮನೋಗತ ಒಳ್ಳೆಯದೆ. ಆದರೆ ಬರಿ ಕಾಯ್ದೆ ತರುವುದರಿಂದ ಈ ಸಮಗ್ರತೆಯನ್ನು ನಾವು ಸಾಧಿಸಲಾರೆವು. ಹಾಗಿದ್ದರೆ ಸಂವಿಧಾನವನ್ನು ರಚಿಸಿರುವುದಾದರೂ ಯಾವ ಉದ್ದೇಶಕ್ಕಾಗಿ? ಅದನ್ನು ಬರಿಯ ಕಲ್ಪನೆಯಿಂದಷ್ಟೇ ರೂಪಿಸಿಲ್ಲ. ಪರಿಕಲ್ಪನೆ ಎಷ್ಟೇ ಉತ್ತಮವಾಗಿರಬಹುದು. ಆದರೆ ದೇಶದಲ್ಲಿನ ಸಾಮಾಜಿಕ ಶಕ್ತಿಗಳ ನಡುವೆ ಒಂದು ಸಮತೋಲನವನ್ನು ಕಾಯ್ದುಕೊಳ್ಳುವುದು ಅತ್ಯಗತ್ಯವಾಗಿದೆ. ಸಂವಿಧಾನದಲ್ಲಿರುವುದು ಈ ಸಮತೋಲನ. ಈ ಸಮತೋಲನಕ್ಕೆ ಭಂಗ ಬಂದಾಗಲೆಲ್ಲ ಈ ಸಮತೋಲನವನ್ನು ಮತ್ತೆ ಸಮಪ್ರಮಾಣದಲ್ಲಿ ಕಾಯ್ದುಕೊಳ್ಳುವ ಅಗತ್ಯ ಉಂಟಾಗುತ್ತದೆ. ಇದು ನಮ್ಮ ಸಂವಿಧಾನದ ವಿಶೇಷತೆಯಾಗಿದೆ. ಜನತಾಂತ್ರಿಕ ವಿಧಾನದಿಂದಲೇ ಈ ಸಮತೋಲನವನ್ನು ಸಾಮರಸ್ಯವನ್ನು ಕಾಯ್ದುಕೊಳ್ಳಬೇಕಾಗಿದೆ. ಸಂವಿಧಾನದ ನಿರ್ದೇಶಕ ತತ್ವಗಳು ಈ ದಿಸೆಯಲ್ಲಿ ಕೆಲವೊಂದು ಮಾರ್ಗದರ್ಶಿ ಸೂತ್ರಗಳನ್ನು ಒದಗಿಸಿದೆ.

ಕಾಶ್ಮೀರದಲ್ಲಿನ ಈಗಿನ ಪರಿಸ್ಥಿತಿಯ ಬಗ್ಗೆ ನಾವೇನೂ ಸಂತುಷ್ಟರಾಗಿಲ್ಲ. ಕಾಶ್ಮೀರದ ಮುಸ್ಲಿಮ ಸ್ವಾತಂತ್ರ್ಯ ಹೋರಾಟದಲ್ಲಿ ನಮಗೆ ಪೂರ್ಣ ಬೆಂಬಲ ನೀಡಿದರೆಂಬುದನ್ನು ನಾವು ಮರೆಯಬಾರದು. ಹಾಗಾಗಿ ಅವರೀಗ ನಮ್ಮ ಮೇಲೆ ಏಕೆ ಇಷ್ಟೊಂದು ಕೋಪದಿಂದ ಇದ್ದಾರೆ ಎಂಬುದನ್ನು ನಾವೀಗ ಕಂಡುಕೊಳ್ಳಬೇಕಾಗಿದೆ. ಅದೇ ರೀತಿ ಕೇರಳದ ಜನತೆ ಕಮ್ಯುನಿಸ್ಟ ಪಾರ್ಟಿಯನ್ನು ಏಕೆ ಚುನಾಯಿಸಿದರು ಎಂಬುದನ್ನು ನಾವೀಗ ಯೋಚಿಸಬೇಕಾಗಿದೆ. ಆ ರಾಜ್ಯದ ಜನತೆ ಚೀನಾದಿಂದ ಬಂದವರೇನೂ ಅಲ್ಲ. ಹಾಗಿದ್ದರೆ ಅವರು ಏಕೆ ಕಮ್ಯುನಿಸ್ಟರಾಗಿ ಪರಿವರ್ತಿತರಾಗಿದ್ದಾರೆ ಹಾಗಾಗಿ ಈ ಎಲ್ಲರ ಕಾರಣಗಳನ್ನು ನಾವು ಕಂಡುಕೊಳ್ಳಲು ಪ್ರಯತ್ನಿಸಬೇಕು. ಇಲ್ಲವಾದರೆ ನಾವು ಯಾವ ಪರಿಹಾರವನ್ನು ಕಂಡುಕೊಳ್ಳಲಾರೆವು. ಅದಕ್ಕೆ ರಾಜಕೀಯ ಮತ್ತು ಆರ್ಥಿಕ ಕಾರಣಗಳೆರಡು ಇವೆ. ನೀವು ಬಲವಂತದಿಂದ ಏಕತೆಯನ್ನು ತರಲಾರಿರಿ ಕಮ್ಯುನಿಸ್ಟ್ ಪಾರ್ಟಿಯನ್ನು ಕಾನೂನುಬಾಹಿರ ಪಕ್ಷವೆಂದು ಘೋಷಿಸಬೇಕೆಂದು ಬಹಳ ಸಲ ಕೇಳಲಾಗಿದೆ. ಆದರೆ ಅದರ ಪರಿಣಾಮ ಏನಾದೀತು? ಅದೇ ರೀತಿ ಕಾಶ್ಮೀರದಲ್ಲಿನ ಈಗಿನ ಪರಿಸ್ಥಿತಿ ಮತ್ತು ದೇಶದಲ್ಲಿನ ಸಂಕ್ಷೋಭೆಯ ಬಗೆಗೆ ನಾವು ಮತ್ತೊಮ್ಮೆ ಯೋಚಿಸಬೇಕಾಗಿದೆ. ಅದೇ ರೀತಿ ಇಡೀ ಸಂವಿಧಾನನ್ನೇ ನಾವೀಗ ಅಮೂಲಾಗ್ರ ಪರಾಮರ್ಶೆಗೆ ಒಳಪಡಿಸಬೇಕು. ಜನಸಮುದಾಯದಲ್ಲಿನ ಎಲ್ಲ ವರ್ಗಗಳನ್ನು ನಾವು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಕಾಶ್ಮೀರಿಗಳು ತಾವು ಭಾರತದ ಅವಿಭಾಜ್ಯ ಅಂಗ ಎಂದು ಹೇಳಿಕೊಳ್ಳುತ್ತಿರುವಾಗ ನಾವು ಯಾವುದೇ ಅವಸರದ ಹೆಜ್ಜೆಯನ್ನು ಇಡಬಾರದು. ನಾಗಾಲ್ಯಾಂಡ್‌ಗೂ ಈ ಮಾತು ಅನ್ವಯವಾಗುತ್ತದೆ. ಈ ಮೊದಲು ಈ ನಿಟ್ಟಿನಲ್ಲಿ ನಾವು ಸರಿಯಾದ ಪ್ರಯತ್ನಗಳನ್ನು ನಡೆಸಿದ್ದರೆ ಪರಿಸ್ಥಿತಿ ಈ ಮಟ್ಟಕ್ಕೆ ಮುಟ್ಟುತ್ತಿರಲಿಲ್ಲ.

ಗಡಿ ಪ್ರದೇಶದ ರಾಜ್ಯಗಳಲ್ಲಿ ನಾವು ಅಂಗೀಕರಿಸಿರುವ ಧೋರಣೆಯು ಅಲ್ಲಿನ ಜನತೆಯ ಹೃದಯಗಳನ್ನು ಗೆಲ್ಲುವಲ್ಲಿ ಸಹಕಾರಿಯಾಗಿಲ್ಲ. ಕಾಶ್ಮೀರ ಮತ್ತು ನಾಗಲ್ಯಾಂಡ್‌ಗಳಲ್ಲಿ ನಾವು ಸಾಕಷ್ಟು ಹಣವನ್ನು ಖರ್ಚು ಮಾಡಿದ್ದೇವೆ. ಆದರೆ ಅಲ್ಲಿನ ಜನರನ್ನು ರಾಷ್ಟ್ರೀಯ ಮುಖ್ಯವಾಹಿನಿಯಲ್ಲಿ ಒಗ್ಗೂಡಿಸುವ ನಿಟ್ಟಿನಲ್ಲಿ ಗಂಭೀರ ಪ್ರಯತ್ನಗಳು ನಡೆದಿಲ್ಲ. ಈ ಕಾರಣದಿಂದಾಗಿ ಅಲ್ಲಿನ ಜನರು ಪರಕೀಯರೆಂಬ ಭಾವನೆಯನ್ನು ಬೆಳೆಸಿಕೊಂಡಿದ್ದಾರೆ. ಮತ್ತು ಅದೇ ಕಾರಣದಿಂದ ಪ್ರತ್ಯೇಕ ರಾಜ್ಯದ ಮಾತುಗಳನ್ನು ಆಡುತ್ತಿದ್ದಾರೆ. ನಾಗಾಲ್ಯಾಂಡ್ ಮತ್ತು ಮಿಜೋರಾಂಗಳಲ್ಲಿ ಕೂಡಾ ಇದೇ ಪರಿಸ್ಥಿತಿ ನಿರ್ಮಾಣಗೊಂಡಿದೆ ಮಣಿಪುರದಲ್ಲಿ ಕೂಡಾ ಕ್ಷೋಭೆಯ ವಾತಾವರಣವಿದೆ. ಮಣಿಪುರದಲ್ಲಿ ಸತ್ಯಾಗ್ರಹವೊಂದು ನಡೆಯುತ್ತಿದ್ದು ನಮ್ಮ ಬಗ್ಗೆ ತಾರತಮ್ಯದ ಧೋರಣೆಯನ್ನು ಅನುಸರಿಸುತ್ತಿದ್ದಾರೆಂದು ಅವರು ನಮ್ಮನ್ನು ಪ್ರಶ್ನಿಸುತ್ತಿದ್ದಾರೆ. ಸರಕಾರವು ಐದು ಲಕ್ಷ ಜನಸಂಖ್ಯೆ ಹೊಂದಿರುವ ನಾಗಾಲ್ಯಾಂಡ್‌ಗೆ ರಾಜ್ಯದ ಸ್ಥಾನಮಾನ ನೀಡಿದೆ. ಆದರೆ ಹತ್ತು ಲಕ್ಷಕ್ಕೂ ಹೆಚ್ಚು ಜನಸಂಖ್ಯೆ ಇರುವ ಮಣಿಪುರವನ್ನು ರಾಜ್ಯದ ಸ್ಥಾನಮಾನ ಮತ್ತು ಸ್ವಾಯತ್ತತೆಯಿಂದ ಏಕೆ ವಂಚಿಸಿದೆ?

ದೇಶದಲ್ಲಿ ನಾವು ಏಕತೆಯನ್ನು ಕಾಯ್ದುಕೊಳ್ಳಲು ಬಯಸುತ್ತೇವೆಯಾದರೆ ನಾವು ಗಡಿರಾಜ್ಯಗಳ ವಿಷಯದಲ್ಲಿ ಸುಸ್ಪಷ್ಟವಾದ ಮತ್ತು ಏಕರೂಪದ ನೀತಿಯನ್ನು ಅಂಗೀಕರಿಸಬೇಕಾಗಿದೆ. ಇಂದು ನೀವು ಮಹಾರಾಷ್ಟ್ರದಲ್ಲಿ ಏನನ್ನು ಮಾಡುತ್ತೀರೋ ಅದನ್ನು ಕಾಶ್ಮೀರದಲ್ಲಿ ಅಷ್ಟು ಸುಲಭವಾಗಿ ಕಾರ್ಯರೂಪಕ್ಕೆ ತರಲು ಸಾಧ್ಯವಿಲ್ಲ. ಬಹುಶಃ ಮುಂಬರುವ ದಿನಗಳಲ್ಲಿ ಅದು ಸಾಧ್ಯವಾದೀತು. ಆದರೆ ದೇಶದಲ್ಲಿ ಸಂಪೂರ್ಣ ಸಮಗ್ರತೆಯನ್ನು ಸಾಧಿಸುವಲ್ಲಿ ನಾವು ಯಶಸ್ವಿಗಳಾಗಬೇಕು. ಇಂದು ಪರಿಸ್ಥಿತಿ ತೀರಾ ಭಿನ್ನವಾಗಿರುವಾಗ ನಾವು ವಾಸ್ತವಾಂಶಗಳನ್ನು ಗ್ರಹಿಸಬೇಕು ಮತ್ತು ವಾಸ್ತವತೆಯಿಂದ ದೂರ ಉಳಿಯಬಾರದು.

ಕಾಶ್ಮೀರದಲ್ಲಿನ ಪರಿಸ್ಥಿತಿಯ ಬಗ್ಗೆ ನಾನೇನೂ ಸಂತುಷ್ಟನಾಗಿಲ್ಲ. ಕಾಶ್ಮೀರದಲ್ಲಿ ಸರ್ಕಾರಿ ನೌಕರರ ಸಮಸ್ಯೆಯೂ ಇದೆ. ಸಾದಿಕ್ ಸಾಹೇಬ್ ಅವರು ಅತ್ಯಂತ ಪ್ರಗತಿಶೀಲ ಮನೋಭಾವದವರೆಂದು ಹೆಸರಾಗಿದ್ದಾರೆ. ಆದರೆ ಕಾಶ್ಮೀರದಲ್ಲಿ ಬಂಡವಾಳಶಾಹಿ ಆಡಳಿತ ಜಾರಿಯಲ್ಲಿದೆ ಎಂದು ಇಲ್ಲಿ ಹೇಳಲಾಗುತ್ತಿದೆ. ಸಾದಿಕ್ ಸಾಹೇಬ್ ಅವರು ಪ್ರಗತಿಶೀಲರಾದರೆ ಪ್ರಧಾನ ಕಾರ್ಯದರ್ಶಿ ಶ್ರೀ ಶಿಶುಪಾಲ್ ಅವರು ನಮ್ಮ ಮಿತ್ರರನ್ನು ಭೇಟಿಯಾಗಲು ಬಂದಾಗ ಅವರನ್ನು ಏಕೆ ಬಂಧಿಸಲಾಯಿತು? ಆ ಸಂದರ್ಭದಲ್ಲಿ ಐವತ್ತು ಮಂದಿಯನ್ನು ಬಂಧಿಸಲಾಯಿತು. ಅವರಲ್ಲಿ ಹನ್ನೆರಡು ಮಂದಿಯನ್ನು ಪ್ರತಿಬಂಧಕ ಸ್ಥಾನಬದ್ಧತೆಯನ್ವಯ ಬಂಧಿಸಲಾಯಿತು. ಅವರ ಪ್ರತಿಬಂಧಕ ಬಂಧನವು ಅತ್ಯಂತ ವಿಭಿನ್ನ ಸ್ವರೂಪದ್ದು. ಈ ಪರಿಸ್ಥಿತಿ ಸಂತೋಷ ಜನಕವಾದದ್ದಲ್ಲ. ಹಾಗಾಗಿ ಅಲ್ಲಿಯ

ಜನರ ಮೇಲೆ ನಡೆಸಲಾಗುತ್ತಿರುವ ಅತಿರೇಕಗಳನ್ನು ನಾವು ಪ್ರತಿಭಟಿಸಲೇಬೇಕು. ಹಾಗಾಗಿ ನಾವು ಈಗ ಅಲ್ಲಿನ ಪರಿಸ್ಥಿತಿಯ ವಿಶ್ಲೇಷಣೆಯನ್ನು ನಡೆಸಲೇಬೇಕು. ಇಲ್ಲಿ ಭೂ ಕಾಯ್ದೆಗಳ ಬಗ್ಗೆಯೂ ಪ್ರಸ್ತಾಪಿಸಲಾಗಿದೆ. ಈ ಸಂಬಂಧದಲ್ಲಿ ನನಗೊಂದು ದೂರು ಬಂದಿದ್ದು, ನಾನು ಗೃಹಸಚಿವರ ಗಮನವನ್ನು ಅದರತ್ತ ಸೆಳೆಯಲು ಬಯಸುತ್ತೇನೆ. ಅಲ್ಲಿ ಎರಡು ವಿಮಾನ ನಿಲ್ದಾಣಗಳಿವೆ ಎಂಬುದು ನನ್ನ ಗಮನಕ್ಕೆ ಬಂದಿದೆ. ಒಂದು ನಾಗರಿಕ ವಿಮಾನ ನಿಲ್ದಾಣ, ಇನ್ನೊಂದು ಮಿಲಿಟರಿಗೆ ಸೇರಿದ್ದು. ಮಿಲಿಟರಿ ವಿಮಾನ ನಿಲ್ದಾಣ ಪ್ರತ್ಯೇಕವಾಗಿರಬಹುದು. ಆದರೆ ಇದರಿಂದಾಗಿ ಇಲ್ಲಿನ ನಾಗರೀಕರಿಗೆ ಭೂಮಿ ಸಿಗುತ್ತಿಲ್ಲ. ಅವರಿಗೆ ಭೂಮಿಯನ್ನು ಒದಗಿಸುವುದು ಸರ್ಕಾರದ ಕರ್ತವ್ಯವಾಗಿದೆ. ಭೂಕಾಯ್ದೆಗಳು ಸ್ಥಳದಿಂದ ಸ್ಥಳಕ್ಕೆ ವಿಭಿನ್ನವಾಗಿರುತ್ತದೆ. ಉದಾಹರಣೆಗೆ ಚೋಟಾ ನಾಗಪುರದಲ್ಲಿರುವ ಕಾಯ್ದೆ. ಇಲ್ಲಿ ಆದಿವಾಸಿಗಳು ಜಿಲ್ಲಾಧಿಕಾರಿಗಳ ಅನುಮತಿಯ ಹೊರತಾಗಿ ತಮ್ಮ ಜಮೀನನ್ನು ಮತ್ತೊಂಬ್ಬರಿಗೆ ವರ್ಗಾವಣೆ ಮಾಡುವಂತಿಲ್ಲ. ಈ ಕಾಯ್ದೆ ಇನ್ನೂ ಅಲ್ಲಿ ಊರ್ಜಿತವಾಗಿದೆ. ಕಾಶ್ಮೀರದಲ್ಲೂ ಬಹುಶಃ ಅದೇ ಪರಿಸ್ಥಿತಿ ಇರಬಹುದು. ಹಾಗಾಗಿ ಹಳೆಯ ಪದ್ಧತಿಯನ್ನು ಕ್ರಮೇಣ ಬದಲಾಯಿಸಬೇಕಾಗುತ್ತದೆ.

ನಮ್ಮದು ಒಂದು ವಿಶಾಲವಾದ ರಾಷ್ಟ್ರವಾಗಿದ್ದು ಇಲ್ಲಿ ಬೇರೆ ಬೇರೆ ಮತಧರ್ಮಗಳ, ಬೇರೆ ಬೇರೆ ಭಾಷೆಗಳ ಜನರಿದ್ದಾರೆ. ಹಾಗಾಗಿ ಈ ಎಲ್ಲ ಸಂಗತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾವು ಮುಂದುವರಿಯಬೇಕಾಗಿದೆ. ನಾವಿಂದು ಕೇರಳದಲ್ಲಿ ಬಂಧಿತರಾಗಿರುವ ಕೇಂದ್ರ ಸರ್ಕಾರಿ ನೌಕರರ ವಿರುದ್ಧ ಇರುವ ಮೊಕದ್ದಮೆಗಳನ್ನು ಹಿಂತೆಗೆದುಕೊಳ್ಳುವುದನ್ನು, ಅದೇ ರೀತಿ ಪಂಜಾಬ್‌ನಲ್ಲಿನ ಮೊಕದ್ದಮೆಗಳನ್ನು ವಾಪಸ್ಸು ಪಡೆಯುತ್ತಿರುವುದನ್ನು ನೋಡುತ್ತಿದ್ದೇವೆ. ಆದರೆ ಮಹಾರಾಷ್ಟ್ರದಲ್ಲಿನ ಪ್ರಕರಣಗಳನ್ನು ಮಾತ್ರ ಹಿಂತೆಗೆದುಕೊಳ್ಳುವ ಪ್ರಸ್ತಾಪವೇ ಕೇಳಿಸುತ್ತಿಲ್ಲ. ಇದು ತಾರತಮ್ಯ ಅಲ್ಲವೆಂದಾದರೆ ಅದನ್ನು ನೀವು ಮತ್ತೇನೆಂದು ಕರೆಯುತ್ತೀರಿ. ಇಂತಹ ತಾರತಮ್ಯವನ್ನು ಕೂಡಾ ನಾವು ನಿವಾರಿಸಬೇಕು. ಈ ತಾರತಮ್ಯ ನೀತಿಗೆ ಕಾರಣವೇನು? ನಾವು ಪರಸ್ಪರ ವಿರುದ್ಧವಾದ ಮತ್ತು ಪರಸ್ಪರ ವಿರೋಧಾಭಾಸಗಳಿಂದ ಕೂಡಿದ ನೀತಿಯನ್ನು ಅನುಸರಿಸುತ್ತಿರುವುದೇ ಅದಕ್ಕೆ ಕಾರಣ. ಇಂತಹ ವಿರೋಧಾಭಾಸವನ್ನು ನಾವು ಕೊನೆಗಾಣಿಸಲೇಬೇಕು. ನಾನು ಮೊದಲೇ ಹೇಳಿದಂತೆ ನಾವು ಮೊದಲು ಅಲ್ಲಿನ ಪರಿಸ್ಥಿತಿಯನ್ನು ಸುಧಾರಿಸಬೇಕು ಮತ್ತು ಅಲ್ಲಿನ ಜನರ ಹೃದಯಗಳನ್ನು ಗೆಲ್ಲಬೇಕು. ನಾನು ಮುಸ್ಲಿಂ ಸಮುದಾಯದ ವಿಷಯದಲ್ಲಿ ಸಮಾಧಾನ ಚಿತ್ತದಿಂದ ಮತ್ತು ಸಹಾನುಭೂತಿ ತೋರುವವರಲ್ಲಿ ಒಬ್ಬನಾಗಿದ್ದೇನೆ. ಆದರೆ ದೇಶದಲ್ಲಿನ ಅಲ್ಪಸಂಖ್ಯಾತ ಸಮುದಾಯದ ಬಹುಭಾಗದವರು ಪ್ರತ್ಯೇಕ ಪಾಕಿಸ್ತಾನದ ಬೇಡಿಕೆಯನ್ನು ಮುಂದಿಟ್ಟಿದ್ದರು. ಮತ್ತು ಆ ಕಾರಣದಿಂದಲೇ ದೇಶ ವಿಭಜಿತವಾಯಿತು. ಈ ಕಾರಣದಿಂದ ಬಹುಸಂಖ್ಯಾತ ಭಾರತೀಯರಿಗೆ ನೋವುಂಟು ಮಾಡಿತು. ವಸ್ತುಸ್ಥಿತಿ

ಎಂಬುದನ್ನು ಅವರು ಒಪ್ಪಲಿ ಬಿಡಲಿ ನಾನು ಇಲ್ಲಿ ಹೇಳಲೇಬೇಕು. ಇದು ಸುಲಭವಾಗಿ ಮರೆಯುವಂತಹ ವಿಷಯವಲ್ಲ. ನಿಷ್ಠೆಯನ್ನು ಯಾವಾಗಲೂ ವಿಭಜಿಸಲು ಬರುವುದಿಲ್ಲ. ಅದು ದೌರ್ಬಲ್ಯ. ಅವರ ಮಕ್ಕಳಲ್ಲಿ ನಾವು ದೇಶಾಭಿಮಾನ ಬೆಳೆಸಬೇಕಾಗಿದೆ. ಈ ವಿಷಯವನ್ನು ನಾನು ಇಲ್ಲಿ ಹಿಂದೆಯೇ ಪ್ರಸ್ತಾಪಿಸಿದ್ದೆ. ಒಮ್ಮೆ ಪೂನಾದಲ್ಲಿ ಹಿಂಸಾಚಾರ ಭುಗಿಲೆದ್ದಿದ್ದ ಸಂದರ್ಭದಲ್ಲಿ ಒಬ್ಬ ಸಣ್ಣ ಹುಡುಗ ನನ್ನ ಬಳಿಗೆ ಬಂದು "ಜೋಶಿ ಅಂಕಲ್, ನನ್ನ ಹತ್ತಿರ ಕುಳಿತುಕೊಳ್ಳುವ ಒಬ್ಬ ಹಿಂದೂ ಹುಡುಗ ನನ್ನ ಬಳಿ ನಿನ್ನ ಆಯೂಬ್ ಅದನ್ನು ಮಾಡಿದ ಎಂದು ಹೇಳುತ್ತಿರುತ್ತಾನೆ. ಈ ಆಯೂಬ್ ನಮ್ಮವ ಹೇಗಾದ?" ಎಂದು ಕೇಳಿದ್ದ. ಆತ ಈ ಪ್ರಶ್ನೆಯನ್ನು ಕೇಳಿದಾಗ ಸ್ವಲ್ಪ ಹೊತ್ತು ನಾನು ಮೂಕನಾಗಿ ಬಿಟ್ಟೆ. ಸ್ವಲ್ಪ ಹೊತ್ತು ಕಳೆದ ಬಳಿಕ 'ನೀನು ಇದನ್ನು ಅರ್ಥ ಮಾಡಿಕೊಳ್ಳಲು ತೀರಾ ಚಿಕ್ಕವ' ಎಂದು ಹೇಳಿಬಿಟ್ಟೆ. ಇದು ನಿಮ್ಮ ಮತ್ತು ನಮ್ಮ ಪೂರ್ವಿಕರು ಎಸಗಿದ ಅನ್ಯಾಯದ ಫಲಿತಾಂಶವಾಗಿದೆ. ನಮ್ಮ ದೇಶದಲ್ಲಿ ಐದು ಕೋಟಿ ಜನ ಮುಸ್ಲಿಮರಿದ್ದಾರೆ. ಅವರು ಮಾನವರಾಗಿ ನಮಗಿಂತ ಏನೇನೂ ಭಿನ್ನರಲ್ಲ. ಆದರೆ ಇಂದು ಕೆಲವರು ನಮ್ಮ ದೇಶದ ಬಗ್ಗೆಯೇ ಅನಾಸ್ಥೆ ತಾಳಿದ್ದಾರೆ ಎಂಬ ಅಂಶವನ್ನು ಅಲ್ಲಗೆಳೆಯುವ ಹಾಗಿಲ್ಲ. ಆದರೂ ಕೂಡಾ ನಾವು ವಾಸ್ತವತೆಯಿಂದ ದೂರ ಓಡಿಹೋಗಬಾರದು. ಅವರಲ್ಲೂ ರಾಷ್ಟ್ರ ಪ್ರೇಮದ ಭಾವನೆಯನ್ನು ತುಂಬುವುದು ನಮ್ಮ ಕರ್ತವ್ಯವೇ ಆಗಿದೆ. ನಾವು ಇದೆಲ್ಲವನ್ನೂ ಜನತಾಂತ್ರಿಕ ಮಾರ್ಗಗಳ ಮೂಲಕ ಮಾಡಲು ಬಯಸುತ್ತೇವೆ. ಪರಸ್ಪರ ಚರ್ಚೆಯ ದಾರಿಯನ್ನು ನಾವು ಕೈಬಿಟ್ಟರೆ ದೇಶದಲ್ಲಿ ಜನತಂತ್ರ ಬದುಕಿ ಉಳಿಯಲಾರದು. ಇಂದು ಶ್ರೀಮತಿ ಇಂದಿರಾಜಿಯವರು ಷೇಕ್ ಅಬ್ದುಲ್ಲ ಅವರನ್ನು ಭೇಟಿಯಾಗುವುದಿಲ್ಲವೆಂದಾದರೆ ಅವರು ಸಂಘಟಿಸಿದ ಸಮ್ಮೇಳನದಲ್ಲಿ ವ್ಯಕ್ತಪಡಿಸಲಾದ ಅಭಿಪ್ರಾಯಗಳನ್ನು ಮತ್ತು ಅಂಗೀಕೃತವಾದ ಗೊತ್ತುವಳಿಗಳನ್ನು ತಿರಸ್ಕರಿಸಲು ನಾವೂ ಮುಂದಾಗಬೇಕೇ? ಧೋರಣೆಗೆ ವಿರೋಧವಾಗುವ ಕಾರಣದಿಂದ ಪ್ರಧಾನ ಮಂತ್ರಿಯವರು ಅವರನ್ನು ಭೇಟಿಯಾಗಲು ಇಷ್ಟಪಡಲಾರರು. ಆದರೆ ನಾವೇಕೆ ಅವರೊಂದಿಗೆ ಮಾತುಗಳನ್ನು ನಿರಾಕರಿಸಬೇಕು? ನಾವು ಈ ಮಂದಿಯನ್ನು ಸಮಾಧಾನ ಪಡಿಸುವಂತಹ ಒಂದು ಮಾರ್ಗವನ್ನು ಕಂಡು ಹಿಡಿಯುವುದು ಮತ್ತು ಈ ದಿಸೆಯಲ್ಲಿ ಪ್ರಯತ್ನ ನಡೆಸುವುದು ನಮ್ಮ ಕರ್ತವ್ಯವೇ ಆಗಿದೆ.

ಹಾಗಾಗಿ ಯಾವುದನ್ನು ಅವಸರವಸರವಾಗಿ ಮಾಡಬಾರದು ಎಂಬ ಅಂಶವನ್ನು ವಾಜಪೇಯಿಯವರು ಅರ್ಥೈಸಿಕೊಳ್ಳಬೇಕೆಂದು ನಾನು ಅವರಲ್ಲಿ ವಿನಂತಿಸುತ್ತೇನೆ. ಅದರಲ್ಲೂ ಅಲ್ಲಿ ತೀರಾ ಪ್ರಕ್ಷುಬ್ಧ ಮತ್ತು ಉದ್ರಿಕ್ತ ಪರಿಸ್ಥಿತಿ ಇರುವಾಗಲಂತೂ ನಾವು ಅವಸರ ಪಡಲೇಬಾರದು. ನಾವು ಯಾವ ಹೆಜ್ಜೆಯನ್ನಾದರೂ ಅವಸರದಿಂದ ಇಟ್ಟಿದ್ದಾದರೆ ಅದು ನಮ್ಮ ಜನತಂತ್ರಕ್ಕೆ ಅಪಾಯಕಾರಿಯಾಗಿ ಪರಿಣಮಿಸಬಹುದು. ಹಾಗಾಗಿ ನಮ್ಮ

ನಾಯಕರಾಗಿದ್ದ ಗೌರವ ಸದಸ್ಯರಾದ ಡಾ. ಲೋಹಿಯಾ ಅವರು ಪ್ರಾರಂಭದಲ್ಲಿ ಜಮ್ಮು ಮತ್ತು ಕಾಶ್ಮೀರಕ್ಕೆ ನೀಡಿದ್ದ ಸ್ಥಾನಮಾನವನ್ನು ವಿರೋಧಿಸಿದ್ದರು. ಡಾ. ಲೋಹಿಯಾ ಅವರು ಹೇಳುತ್ತಿದ್ದಂತೆ ಜನತಂತ್ರವನ್ನು ರಕ್ಷಿಸಲು ಮತ್ತು ದೇಶದ ಏಕತೆ ಮತ್ತು ಸಮಗ್ರತೆಯನ್ನು ಕಾಯ್ದುಕೊಳ್ಳುವ ಸಲುವಾಗಿ ಒಕ್ಕೂಟವೊಂದು ರಚನೆಯಾಗಬೇಕಾಗಿದೆ. ಅವರ ಅಭಿಪ್ರಾಯವನ್ನು ನಾವು ಒಪ್ಪುತ್ತೇವೆ. ಈ ಸಮಗ್ರತೆಯ ಹೊರತಾಗಿ ನಾವು ಏನನ್ನು ಸಾಧಿಸಲಾರೆವು. ಹಾಗಾಗಿ ನಾವು ಈ ದೃಷ್ಟಿಕೋನದಿಂದ ಮುಂದುವರೆಯಬೇಕಾಗಿದೆ.*

**ಚರ್ಚೆಯ ಮಧ್ಯೆ**

ಯಾವ ವಿಷಯದಲ್ಲೂ ಅವಸರ ಪಡಬಾರದೆಂದು ನಾನು ಮತ್ತೊಮ್ಮೆ ವಿನಂತಿಸಿಕೊಳ್ಳುತ್ತಿದ್ದೇನೆ. ನಾನು ಹಳೆಯ ತಲೆಮಾರಿಗೆ ಸೇರಿದವನು ಮತ್ತು ನನ್ನ ಮಾತನ್ನು ಕೇಳಲು ಜನ ಬಯಸಲಾರರು ಎಂಬುದನ್ನು ನಾನು ಅರಿತಿದ್ದೇನೆ. ಆದರೂ ನನ್ನ ಅಭಿಪ್ರಾಯವನ್ನು ನಿಮ್ಮೆಲ್ಲರ ಮುಂದಿಡುವುದು ನನ್ನ ಕರ್ತವ್ಯ ಎಂದು ಭಾವಿಸಿದ್ದೇನೆ. ಹಾಗಾಗಿ ಈ ವಿಷಯದಲ್ಲಿ ಆತುರಪಟ್ಟು ವರ್ತಿಸಬಾರದು ಮತ್ತು ಈ ಗೊತ್ತುವಳಿಯ ಮೇಲೆ ಮತದಾನಕ್ಕೆ ಆಗ್ರಹಪಡಿಸಬಾರದೆಂದು ನಾನು ಮತ್ತೊಮ್ಮೆ ವಿಂತಿಸಿಕೊಳ್ಳುತ್ತೇನೆ.

*ಗೌರವ ಸದಸ್ಯರಾದ ಡಾ. ಲೋಹಿಯಾರವರು ಪ್ರಾರಂಭದಲ್ಲಿ ಜಮ್ಮು ಮತ್ತು ಕಾಶ್ಮೀರಕ್ಕೆ ನೀಡಿದ್ದ ಸ್ಥಾನಮಾನವನ್ನು ವಿರೋಧಿಸಿದ್ದರು.

## ಅಧ್ಯಾಯ - 18

## ಸಾರ್ವಜನಿಕ ಉದ್ಯೋಗ ಪರಿಗಣನೆ ತಿದ್ದುಪಡಿ ಮಸೂದೆ*

ಮಾನ್ಯ ಸಭಾಧ್ಯಕ್ಷರೇ, ಸದನದ ಮುಂದೆ ಮಂಡಿಸಿರುವ ಸಾರ್ವಜನಿಕ ಉದ್ಯೋಗ ತಿದ್ದುಪಡಿ ಮಸೂದೆಯನ್ನು ನಾನು ಬೆಂಬಲಿಸುತ್ತೇನೆ. ಈ ಮಸೂದೆಯು ಹಿಂದುಳಿದ ಪ್ರದೇಶಗಳ ಜನರಿಗೆ ಹೆಚ್ಚಿನ ಹಕ್ಕುಗಳನ್ನು ಕಲ್ಪಿಸಿ ಕೊಡುವ ರೀತಿಯಲ್ಲಿ ಹೆಚ್ಚು ಸಮಗ್ರ ಸ್ವರೂಪದ್ದಾಗಿರುವುದರಿಂದ ನಾನು ಅದನ್ನು ಬಹಳವಾಗಿ ಮೆಚ್ಚಿಕೊಂಡಿದ್ದೇನೆ. ಎರಡು ದಿನಗಳ ಹಿಂದೆ ನನಗೆ ಅಲ್ಲಿಗೆ (ತೆಲಂಗಾಣ) ಹೋಗುವ ಮತ್ತು ಅಲ್ಲಿನ ಪರಿಸ್ಥಿತಿಯನ್ನು ಖುದ್ದಾಗಿ ಅಧ್ಯಯನ ಮಾಡುವ ಅವಕಾಶ ದೊರೆಯಿತು. ಅಲ್ಲಿ ನಡೆಯುತ್ತಿರುವ ಚಳವಳಿಗೆ ಯಾವುದೇ ರಾಜಕೀಯ ಪಕ್ಷದ ಬೆಂಬಲವಿಲ್ಲ. ಆದರೂ ನಾವು, ಅಂದರೆ ವಿರೋಧ ಪಕ್ಷದವರು ಈ ರೀತಿಯ ಚಳವಳಿಗಳನ್ನು ಸಂಘಟಿಸುತ್ತಿದ್ದೇವೆ ಎಂದು ಪದೇ ಪದೇ ಆರೋಪಿಸಲಾಗುತ್ತಿದೆ. ಆದರೆ ಅಲ್ಲಿನ ಚಳವಳಿಗೆ ಪ್ರತಿಪಕ್ಷಗಳಲ್ಲಿ ಯಾರೂ ಕೂಡಾ ಬೆಂಬಲ ನೀಡುತ್ತಿಲ್ಲ ಎಂಬ ಅಂಶ ಅಲ್ಲಿ ನನಗೆ ಮನವರಿಕೆಯಾಯಿತು. ಆದರೂ ಅಲ್ಲಿ ವಿದ್ಯಾರ್ಥಿಗಳು ಬಹಳ ದೊಡ್ಡ ರೀತಿಯಲ್ಲೇ ಚಳವಳಿ ನಡೆಸುತ್ತಿದ್ದಾರೆ. ಸುಮಾರು ನಾಲ್ಕು ಗಂಟೆಗಳ ಕಾಲ ನಾನು ನಮ್ಮ ಪಕ್ಷದವರಿಗೆ ವಸ್ತುಸ್ಥಿತಿಯನ್ನು ಮನಗಾಣಿಸಲು ಯತ್ನಿಸಿದೆ. ಪ್ರತ್ಯೇಕ ತೆಲಂಗಾಣ ರಾಜ್ಯ ರಚಿಸಿದರು ಕೂಡಾ ಅವರ ನಿರುದ್ಯೋಗದ ಸಮಸ್ಯೆ ಪರಿಹಾರವಾಗುವುದಿಲ್ಲ ಎಂದು ನಾನು ಅವರಿಗೆ ಹೇಳಿದೆ. ಇದು ಅತ್ಯಂತ ಕಠಿಣ ಕಾರ್ಯಭಾರವಾಗಿತ್ತು. ಆದರೂ ವಿದ್ಯಾರ್ಥಿಗಳಿಗೆ ವಿಷಯವನ್ನು ತಿಳಿ ಹೇಳಲು ನಾನು ಯತ್ನಿಸಿದೆ. ಅವರ ಮಾತುಗಳನ್ನು ಕೇಳಿ ನನಗೆ ಅಚ್ಚರಿಯಾಯಿತು. ರಾಜ್ಯಗಳ ಪುನರ್ ಸಂಘಟನಾ ಆಯೋಗವು ಪ್ರತ್ಯೇಕ ತೆಲಂಗಾಣ ರಾಜ್ಯದ ರಚನೆಗೆ ಶಿಫಾರಸ್ಸು ಮಾಡಿದ್ದರೂ ಶಿಫಾರಸ್ಸನ್ನು ಸರ್ಕಾರ ಅನುಷ್ಠಾನಕ್ಕೆ ತಂದಿಲ್ಲ ಎಂದೂ ಅವರು ನನಗೆ ಹೇಳಿದರು. ಆದರೆ ತೆಲಂಗಾಣ ಮತ್ತು ಆಂಧ್ರಪ್ರದೇಶದ ಆಗಿನ ನಾಯಕರಲ್ಲಿ ಅನೇಕರು ತೆಲುಗು ಮಾತನಾಡುವ ಜನರು ಸಂಘಟಿತರಾಗಿದ್ದಾರೆ. ಅವರು ರಾಜ್ಯ ಕ್ಷಿಪ್ರವಾಗಿ ಪ್ರಗತಿ ಸಾಧಿಸುವುದೆಂದು ಭಾವಿಸಿದ್ದೇ ಕಾರಣವಾಗಿತ್ತು. ಅದಕ್ಕೆ ತಮಗೆ ವಿಶೇಷ ರಕ್ಷಣೆ ಒದಗಿಸಿ ಕೊಡುವ ಷರತ್ತಿನ ಮೇರೆಗೆ ತೆಲಂಗಾಣದ ಜನತೆ ಈ ಅಭಿಪ್ರಾಯವನ್ನು ಒಪ್ಪಿಕೊಂಡಿದ್ದರು. ಈ ಸಂಬಂಧದಲ್ಲಿ ಒಂದು ಒಪ್ಪಂದಕ್ಕೆ ಹಸ್ತಾಕ್ಷರವಾಗಿದ್ದರೂ ಕೂಡಾ ಅದನ್ನು ಜಾರಿಗೆ ತಂದಿರಲಿಲ್ಲ. ಈ ಸಂಬಂಧದಲ್ಲಿ ಈಗ ಹೇಳಲಾಗಿರುವುದೆಲ್ಲವನ್ನೂ ನಾನು ಇಲ್ಲಿ ಮಾತ್ರ ಹೇಳಲು ಬಯಸುವುದಿಲ್ಲ. ವಾಸ್ತವವಾಗಿ ತೆಲಂಗಾಣ ಪ್ರದೇಶದಿಂದ ಸಂಗ್ರಹಿಸಲಾದ ವರಮಾನದಲ್ಲಿನ ಹೆಚ್ಚುವರಿ ಅಂಶವನ್ನು

*ಲೋಕಸಭಾ ಚರ್ಚೆ, ಮಾರ್ಚ್ 17, 1969, ಸಿಸಿ 242 - 247

ತೆಲಂಗಾಣದಲ್ಲೇ ವಿನಿಯೋಗಿಸಬೇಕಾಗಿತ್ತು. ಈ ಹೆಚ್ಚುವರಿ ಹಣವನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಒಂದು ಭಾಗವನ್ನು ಹೆಚ್ಚುವರಿ ವರಮಾನವೆಂದೂ ಇನ್ನೊಂದು ಭಾಗವನ್ನು ಬಂಡವಾಳ ವೆಚ್ಚದ ಹೆಚ್ಚುವರಿ ಭಾಗವೆಂದೂ ವಿಂಗಡಿಸಬೇಕು. ಅವರ ಪ್ರಕಾರ ಹೆಚ್ಚುವರಿ ವರಮಾನ ಅಂದಾಜು ನಲವತ್ತು ಕೋಟಿ ರೂಪಾಯಿಗಳಷ್ಟಿತ್ತು. ಈ ಹಣವನ್ನು ಅಲ್ಲಿ ಖರ್ಚು ಮಾಡಿರಲಿಲ್ಲ. ಹೀಗಾಗಿ ಅಲ್ಲಿಯ ಜನರು ಅಸಮಾಧಾನಗೊಂಡಿದ್ದರು. ಅದೂ ಅಲ್ಲದೆ ಈ ಸಂಬಂಧದಲ್ಲಿ ತಂದ ಕಾಯ್ದೆ ಮತ್ತು ಅದರ ವಿಸ್ತರಣೆ ಈ ಒಡಂಬಡಿಕೆ ಭಾಗದಲ್ಲಿ ಆಗಿತ್ತೆಂದು ಅವರು ನನಗೆ ಹೇಳಿದರು. ಆಂಧ್ರಕ್ಕೆ ಎರಡು ಸ್ಥಾನಗಳಿದ್ದವು. ಅವುಗಳಲ್ಲಿ ಒಂದು ತೆಲಂಗಾಣದ ಜನತೆಗೆ ಹೋಗಬೇಕಾದ್ದು. ಆದರೆ ಹಾಗಾಲಿಲ್ಲ. ಶ್ರೀ ರಂಗ ಸಾಹೇಬ್ ಅವರು ಹೇಳಿದಂತೆ ಒಡಂಬಡಿಕೆಯನ್ನು ಯದ್ವಾತದ್ವಾ ಉಲ್ಲಂಘಿಸಲಾಗಿತ್ತು. ಅದೇ ವೇಳೆಗೆ ಒಂದು ಪ್ರಾಂತೀಯ ಸಮಿತಿಯನ್ನು ಸಂಘಟಿಸಲಾಗಿತ್ತು. ಆದರೆ ಇನ್ನೊಂದು ಒಪ್ಪಂದದ ಪ್ರಕಾರ ವಿಧಾನಸಭೆಯಲ್ಲಿನ ತೆಲಂಗಾಣದ ಪ್ರತಿನಿಧಿಗಳ ಪ್ರಾಂತೀಯ ಸಮಿತಿ ಅದಾಗಿತ್ತು. ಅಲ್ಲಿ ಎಲ್ಲ ವಿಷಯಗಳು ಸರಿಯಾಗಿ ನಡೆಯುತ್ತಿದೆಯೇ ಎಂಬುದನ್ನು ಈ ಸಮಿತಿ ಪರಾಮರ್ಶಿಸಿತ್ತು. ಈ ಪ್ರಾಂತೀಯ ಸಮಿತಿ ಇತ್ತೀಚಿಗಷ್ಟೇ ತನ್ನ ತನಿಖೆಯನ್ನು ಪೂರ್ಣಗೊಳಿಸಿತ್ತು. ಹೆಚ್ಚುವರಿ ವರಮಾನ ಮತ್ತು ಉದ್ಯೋಗಾವಕಾಶಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಪರಿಶೀಲಿಸಲು ಒಂದು ವಿಶೇಷ ಸಮಿತಿಯೂ ರಚಿತವಾಗಿತ್ತು. ಈ ಸಮಿತಿಯ ವರದಿಯನ್ನು ನೋಡಿದಾಗ ನಿಜಕ್ಕೂ ನನಗೆ ಅಚ್ಚರಿಯಾಯಿತು. ಒಪ್ಪಂದಕ್ಕೇನೋ ಹಸ್ತಾಕ್ಷರವಾಗಿತ್ತು. ಆದರೆ ಅದನ್ನು ಎಂದೂ ಜಾರಿಗೆ ತರಲೇ ಇಲ್ಲ. ಎಲ್ಲವೂ ಈ ಒಪ್ಪಂದಕ್ಕೆ ವ್ಯತಿರಿಕ್ತವಾಗಿಯೇ ನಡೆದಿತ್ತು. ಇತರ ಪ್ರದೇಶಗಳ ಜನರಿಗೂ ತೆಲಂಗಾಣದಲ್ಲಿ ಉದ್ಯೋಗಾವಕಾಶಗಳನ್ನೇ ಕಲ್ಪಿಸಲಾಯಿತು. ಅಂಥವರ ಸಂಖ್ಯೆ ಸುಮಾರು ನಾಲ್ಕು ಸಾವಿರದಷ್ಟಿತ್ತು. ಆದರೆ ಇಲ್ಲಿನ ಮಂದಿ ನನಗೆ ಇದು ತಪ್ಪು ಹೇಳಿಕೆ ಎಂದು ತಿಳಿಸಿದರು. ಈ ಮಂದಿ ನಕಲಿ ಸರ್ಟಿಫಿಕೇಟ್‌ಗಳನ್ನು ನೀಡಿದ್ದರೆಂದೂ, ಅವರ ಸಂಖ್ಯೆ ಸುಮಾರು ನಲವತ್ತು ಸಾವಿರವಾಗಿತ್ತೆಯೆಂದೂ ಅವರು ನನಗೆ ಹೇಳಿದರು. ಇದು ಪೂರ್ಣ ಸತ್ಯವಾಗಿರಲಾರದು. ಆದರೆ ಇಂತಹ ಮನೋವೃತ್ತಿಯು ಅತ್ಯಂತ ಅಪಾಯಕಾರಿಯಾಗಿದೆ. ನಾವು ದೇಶದಲ್ಲಿ ಸಮಗ್ರತೆಯನ್ನು ಬಯಸುತ್ತೇವೆ. ಈ ಉದ್ದೇಶಕ್ಕಾಗಿ ನಾವು ರಾಷ್ಟ್ರೀಯ ಏಕತಾ ಮಂಡಳಿಯನ್ನು ರಚಿಸಿದ್ದೇವೆ. ಅದೇ ಉದ್ದೇಶಕ್ಕಾಗಿ ನಾವು ಸಮ್ಮೇಳನಗಳನ್ನು ಸಂಘಟಿಸುತ್ತಿದ್ದೇವೆ. ಆದರೆ ನಾವು ಗ್ರಾಮಾಂತರ ಪ್ರದೇಶಗಳಿಗೆ ಹೋಗದ ಹೊರತು ಮತ್ತು ಈ ಮಂದಿಯನ್ನು ಸಂಘಟಿಸದೇ ರಚನಾತ್ಮಕವಾಗಿ ಏನನ್ನೂ ನಾವು ಸಾಧಿಸಲು ಸಾಧ್ಯವಿಲ್ಲ.

ನಿಜಾಂ ರೈಲ್ವೆಯನ್ನು ನಮ್ಮ ರೈಲ್ವೆ ವ್ಯವಸ್ಥೆಯೊಂದಿಗೆ ಸೇರ್ಪಡೆಗೊಳಿಸಿದಾಗ ನಿಜಾಂ ರಾಜ್ಯಕ್ಕೆ ಸ್ವಲ್ಪ ಪರಿಹಾರವೂ ದೊರೆಯಿತು. ಮೂವತ್ತು ಕೋಟಿ ರೂಪಾಯಿಗಳಷ್ಟು ಪರಿಹಾರವನ್ನು ರೈಲ್ವೆ ಇಲಾಖೆ ತಾನೇ ಇಟ್ಟುಕೊಂಡಿತು. ಈ ಸಂಬಂಧದಲ್ಲಿ ಮಾಹಿತಿ ನೀಡುವಂತೆ ನಾನು ರೈಲ್ವೆ ಸಚಿವರನ್ನು ಕೇಳಿಕೊಂಡಿದ್ದೇನೆ. ನನ್ನ ಅಭಿಪ್ರಾಯದಲ್ಲಿ ತೆಲಂಗಾಣ ಜನತೆಗೆ ನ್ಯಾಯ ಒದಗಿಸಬೇಕಾದರೆ ಈ ಪ್ರದೇಶದಲ್ಲಿ ರೈಲ್ವೆ ಮಾರ್ಗಗಳ ಅಭಿವೃದ್ಧಿಗಾಗಿ ಈ ಹಣ ಬಳಸಲ್ಪಡಬೇಕು. ಯಾವುದೇ ಒಂದು ಹಿಂದುಳಿದ ಪ್ರದೇಶದಿಂದ ನೀವು ಹಣವನ್ನು ಪಡೆದುಕೊಂಡಿದ್ದಾರಾದರೆ, ಅಲ್ಲಿನ ಅಭಿವೃಧಿಗಾಗಿ ಈ ಹಣ ಬಳಸಲ್ಪಡಬೇಕಾದದ್ದು ನ್ಯಾಯ. ತೆಲಂಗಾಣ ಜನರನ್ನು ಅಥವಾ ಸರ್ಕಾರವನ್ನು ನೀವು ಈ ಬಗ್ಗೆ ಕೇಳಿಕೊಂಡಿಲ್ಲ. ಅಲ್ಲಿನ ರೈಲ್ವೆ ಯೋಜನೆಗಳ ಅಭಿವೃದ್ಧಿಗಾಗಿ ಬಳಸಲು ಉದ್ದೇಶಿಸಲಾಗಿದ್ದ ಹಣವನ್ನು ಆ ಉದ್ದೇಶಕ್ಕಾಗಿ ಅಲ್ಲಿ ಬಳಸಿಕೊಂಡಿಲ್ಲ. ಇಂತಹ ಹಿಂದುಳಿದ ಪ್ರದೇಶಗಳಲ್ಲಿ ವಾಸವಾಗಿರುವ ಜನರು ಚಳವಳಿಯನ್ನು ಹೂಡುವ ತನಕ ಮತ್ತು ಈ ನಿಟ್ಟಿನಲ್ಲಿ ನಿಮ್ಮ ಕಣ್ಣು ತೆರೆಸುವಂತಹುದನ್ನೇನಾದರೂ ಮಾಡದೇ ಇದ್ದಲ್ಲಿ ನಾವು ಅವರ ಸಮಸ್ಯೆಗಳತ್ತ ಗಮನ ಹರಿಸುವುದಿಲ್ಲ.

ನಮ್ಮ ಮಹಿಳಾ ಸದಸ್ಯರೊಬ್ಬರು ಈಗ ತಾನೇ ಹೇಳಿರುವಂತೆ ಇದು ಐದು ವರ್ಷಗಳ ಪ್ರಶ್ನೆಯಲ್ಲ ಎಂಬ ಅಭಿಪ್ರಾಯಕ್ಕೆ ನಾನೂ ದನಿಗೂಡಿಸುತ್ತೇನೆ. ಈ ಜನರು ಎಲ್ಲಿಯ ತನಕ ಹಿಂದುಳಿದಿರುತ್ತಾರೋ ಅಲ್ಲಿಯ ತನಕ ನಾವು ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲೇಬೇಕು ಮತ್ತು ಅವರು ಇಂತಹ ವಿಶೇಷ ಸೌಕರ್ಯಗಳನ್ನು ಪಡೆಯಲೇ ಬೇಕು. ಹಾಗಾಗಿ ಈಗ ಸದನದಲ್ಲಿ ತಂದಿರುವ ಮಸೂದೆಯು ಸಾಲದೆಂದೇ ನಾನು ಹೇಳಬಯಸುತ್ತೇನೆ. ಈ ಸಂಬಂಧದಲ್ಲಿ ಈಗಾಗಲೇ ರಚಿತವಾಗಿರುವಂತೆ ಪ್ರಾಂತೀಯ ಸಮಿತಿಗೆ ಶಾಸನಬದ್ಧ ಅಧಿಕಾರವನ್ನು ಕೊಡಬೇಕು. ಇಂತಹ ವಿಷಯಗಳಲ್ಲಿ ಅವರಿಗೆ ಅನ್ಯಾಯವಾದಾಗ ಜನರಿಗೆ ನ್ಯಾಯಾಲಯಗಳಿಗೆ ಹೋಗುವ ಹಕ್ಕು ಬರುತ್ತದೆ. ಇಂದು ಜನರು ಪರಸ್ಪರ ವಿರೋಧಿಗಳಾಗಿರುವುದನ್ನು ನಾವು ಕಾಣುತ್ತಿದ್ದೇವೆ. ಎಲ್ಲ ವಿಷಯಗಳಲ್ಲೂ ಪರಸ್ಪರ ದೋಷಾರೋಪಣೆ ಮಾಡುತ್ತಿರುವುದನ್ನು ಕೇಳಿ ನನಗೆ ತೀವ್ರ ಬೇಸರವಾಗಿದೆ. ಅಧಿಕಾರದಲ್ಲಿರುವವರು ಯುದ್ಧದಲ್ಲಿ ನಮ್ಮನ್ನು ಗೆದ್ದುಕೊಂಡವರಂತೆ ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದಾರೆ ಎಂದು ತೆಲಂಗಾಣದ ಜನರು ಹೇಳುತ್ತಿದ್ದಾರೆ. ಅವರು ಮಾಡುತ್ತಿರುವ ಪರಸ್ಪರ ದೋಷಾರೋಪಣೆಯ ಮಾತುಗಳನ್ನು ಶಬ್ದಗಳಿಂದ ವಿವರಿಸಿ ಹೋಗುವುದು ಸಾಧ್ಯವಿಲ್ಲ. 'ಗರ್ದಿಟ ಖೋಡ್', ಶಬ್ದದ ಅರ್ಥ ಏನೆಂಬುದನ್ನು ನನ್ನ ಮಿತ್ರರನ್ನು ಕೇಳಿದೆ. ಹಾಗೆಂದರೆ 'ಕತ್ತೆಯ ಮಗ' ಎಂದು ಅವರು ನನಗೆ ಹೇಳಿದರು. ಒಂದು ವೇಳೆ ಅಂತಹ ಅವಾಚ್ಯ ಪದಗಳನ್ನು ಅವರು ಬಳಸುತ್ತಾರಾದರೆ ಅದು ಅಸಹ್ಯ

ಪಡುವ ವಿಷಯ. ಅವರು ಪ್ರಗತಿ ಸಾಧಿಸದಿದ್ದರೆ ಅವರ ಬಗ್ಗೆ ಯೋಚಿಸುವವರು ಯಾರೂ ಇಲ್ಲ. ಅಧಿಕಾರದಲ್ಲಿರುವವರು ತಾವು ನೀಡಿರುವ ಆಶ್ವಾಸನೆಗಳನ್ನು ಪಾಲಿಸಿಲ್ಲ. ಮತ್ತು ಈವರೆಗೆ ಆಗಿರುವ ಒಡಂಬಡಿಕೆಗಳೆಲ್ಲವನ್ನು ಅವರು ಯದ್ವಾತದ್ವಾ ಉಲ್ಲಂಘಿಸಿದ್ದಾರೆ. ಹೀಗಾಗಿ ನಾವು ಪ್ರತ್ಯೇಕವಾಗಿರಲು ಬಯಸುವುದಾಗಿ ಅವರು ಹೇಳಿದ್ದಾರೆ.

ತೆಲಂಗಾಣದ ಜನತೆ ಪ್ರತ್ಯೇಕ ರಾಜ್ಯ ಬಯಸಿದ್ದರೆ ತೆಲಂಗಾಣ ಒಂದು ಪ್ರತ್ಯೇಕ ರಾಜ್ಯವಾಗುವುದು ಸಾಧ್ಯರಿತ್ತು ಎಂಬುದನ್ನು ಎಲ್ಲ ಪಕ್ಷಗಳವರು ಅರಿತುಕೊಳ್ಳಬೇಕು. ಅಂತಹ ಸಂದರ್ಭದಲ್ಲಿ ಹೋರಾಡುವ ಅಗತ್ಯವೂ ಇಲ್ಲ. ಏಕೆಂದರೆ ರಾಜ್ಯ ಪುನರ್ ಸಂಘಟನಾ ಆಯೋಗವೇ ಅಂತಹ ನಿರ್ಣಯವನ್ನು ತೆಗೆದುಕೊಂಡಿದ್ದರೆ ಅದನ್ನು ವಿರೋಧಿಸಲು ಬರುತ್ತಿರಲಿಲ್ಲ. ಆದರೆ ಆ ಸಂದರ್ಭದಲ್ಲಿ ತೆಲುಗು ಮಾತನಾಡುವ ಎಲ್ಲ ಪ್ರದೇಶಗಳೂ ಸೇರಿ ಒಂದೇ ರಾಜ್ಯವನ್ನು ಹೊಂದಿರುವುದು ದೇಶದ ಹಿತದೃಷ್ಟಿಯಿಂದ ಅತ್ಯಗತ್ಯ ಎಂಬ ಅಂಶವನ್ನು ಅಂದಿನ ಮಹಾನ್ ನೇತಾರರು ತೆಲಂಗಾಣದ ಜನತೆಗೆ ಮನವರಿಕೆ ಮಾಡಿಕೊಟ್ಟರು. ಈ ಮಾತಿಗೆ ತೆಲಂಗಾಣದ ಜನತೆ ಒಪ್ಪಿಕೊಂಡರು. ಆದರೆ ಅದೇ ಕಾರಣಕ್ಕಾಗಿ ಅವರು ಇಂದಿನವರೆಗೂ ಹಿಂದುಳಿದವರಾಗಿಯೇ ಉಳಿದಿದ್ದಾರೆ. ಮಹಾನ್ ನೇತಾರರ ಅಭಿಪ್ರಾಯಗಳಿಗೆ ಒಪ್ಪುವುದರ ಫಲಿತಾಂಶ ಇದೇ ಎಂದಾದರೆ ಇಂತಹ ನೇತಾರರು ಜನರ ವಿಶ್ವಾಸ ಕಳೆದುಕೊಳ್ಳುವುದು ನಿಶ್ಚಿತ. ನಮ್ಮ ದೇಶವು ಪ್ರಗತಿ ಸಾಧಿಸಬೇಕೆಂದು ನಾವು ಬಯಸುವುದಾದರೆ ಇಂತಹ ಸಂಗತಿಗಳು ನಡೆಯಲು ಅವಕಾಶ ಕೊಡಕೂಡದು. ಒಂದು ದಿನ ನಮ್ಮ ಪಕ್ಷದ ಅಧ್ಯಕ್ಷರಿಂದ ನನಗೊಂದು ದೂರವಾಣಿ ಕರೆ ಬಂದಿತು. ಅವರ ಆದೇಶದಂತೆ ನಾನು ಅಲ್ಲಿಗೆ ಹೋಗಬೇಕಾಯಿತು. ರಾಜ್ಯದ ಎಲ್ಲ ಭಾಗಗಳಿಂದ ಪಕ್ಷದ ಕಾರ್ಯಕರ್ತರು ಅಲ್ಲಿ ಸೇರಿದ್ದರು. ತೆಲಂಗಾಣ, ರಾಯಲಸೀಮೆ, ತೊಂಡಾ ಪ್ರದೇಶಗಳಿಂದ ಜನರು ಅಲ್ಲಿಗೆ ಬಂದಿದ್ದರು. ಅಂದಿನ ದಿನಗಳಲ್ಲಿ ರಾಯಲಸೀಮೆ ಪ್ರದೇಶದ ಪರಿಸ್ಥಿತಿಯು ಹೆಚ್ಚು ಕಡಿಮೆ ತೆಲಂಗಾಣದಲ್ಲಿ ಇದ್ದಂತೆಯೇ ಇದ್ದಿತು. ಈ ಪ್ರದೇಶಗಳು ಅಭಿವೃದ್ಧಿಯನ್ನು ಕಂಡಿಲ್ಲ. ನಮ್ಮ ಪಕ್ಷದ ಜನರು, ಕಾರ್ಯಕರ್ತರು ಪ್ರತ್ಯೇಕ ತೆಲಂಗಾಣ ಚಳುವಳಿಯಲ್ಲಿ ಪಾಲ್ಗೊಳ್ಳಲು ಬಯಸಿದ್ದರು. ಆದರೆ ನಾನು ಅವರ ಮನ ಒಲಿಸಿದ ಪರಿಣಾಮವಾಗಿ ತಮ್ಮ ನಿರ್ಧಾರವನ್ನು ಮೇ 31 ರವರೆಗೆ ಮುಂದೂಡಲು ಅವರು ಒಪ್ಪಿಕೊಂಡರು. ಕಾರ್ಯಕರ್ತರಲ್ಲಿ ಕೆಲವರಂತೂ ತಕ್ಷಣದಲ್ಲೇ ಚಳುವಳಿ ಆರಂಭಿಸಲು ಉತ್ಸುಕರಾಗಿದ್ದರು. ಕರೀಂ ನಗರದ ನಮ್ಮ ಕಾರ್ಯಕರ್ತರಲ್ಲಿ ಒಬ್ಬಾತ ಇದೇ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಪಕ್ಷಕ್ಕೆ ರಾಜೀನಾಮೆ ನೀಡಿದ. ರಾಜೀನಾಮೆ ಹಿಂತೆಗೆದುಕೊಳ್ಳುವಂತೆ ಮನ ಒಲಿಸಲು ನಮಗೆ

ಎರಡು ದಿನಗಳೇ ಬೇಕಾದವು. ನಾವು ಬಹಳ ಶ್ರಮವಹಿಸಿ ಮನ ಒಲಿಸಿದ ನಂತರದಲ್ಲಿ ಈ ಕಾರ್ಯಕರ್ತರು ತಮ್ಮ ಹಿತಾಸಕ್ತಿ ಹಾಗೂ ಈ ನ್ಯಾಯಬದ್ಧ ಹಕ್ಕುಗಳನ್ನು - ಪೂಚಂಪಾದ್ ಯೋಜನೆಯಾಗಿರಲಿ ಅಥವಾ ರೈಲ್ವೆ ಹಣಕಾಸಿನ ಪಾಲಾಗಿರಲಿ - ರಕ್ಷಿಸದಿದ್ದಲ್ಲಿ ಮತ್ತು ಈ ಸಂಬಂಧದ ನಿರ್ಧಾರಗಳನ್ನು ಮೇ 31 ರೊಳಗಾಗಿ ಅನುಷ್ಠಾನಕ್ಕೆ ತಾರದಿದ್ದಲ್ಲಿ ಈ ನಿರ್ಧಾರವನ್ನು ಪುನರ್ ಪರಿಶೀಲಿಸುವುದಾಗಿ ಹೇಳಿದರು. ಈ ಪುನರ್ ಪಿರಶೀಲನೆಯ ಅರ್ಥವೇನು? ಅಂದರೆ ಅವರ ಬೇಡಿಕೆಗಳು ಈಡೇರದಿದ್ದಲ್ಲಿ ಮತ್ತೆ ಮುಷ್ಕರ ಆರಂಭಿಸುವುದೇ ಆಗಿತ್ತು. ಈ ಕಾರಣಕ್ಕಾಗಿಯೇ ಅವರು ಸಮಸ್ಯೆಯನ್ನು ಸರಿಯಾದ ಅರ್ಥದಲ್ಲಿ ಗ್ರಹಿಸುವಂತೆ ಮಾಡಲು ನಾವು ಪ್ರಯತ್ನಿಸಿದೆವು.

ಈ ಪ್ರಶ್ನೆಯು ಒಂದು ಸಣ್ಣ ಸಂಗತಿಯಲ್ಲ. ಅದು ಭಾರೀ ಪ್ರಾಮುಖ್ಯ ಹೊಂದಿರುವ ವಿಷಯವಾಗಿದೆ ಎಂದು ಸದನಕ್ಕೆ ತಿಳಿಸಬಯಸುತ್ತೇನೆ. ಇವತ್ತು ತೆಲಂಗಾಣದಲ್ಲಿ ನಡೆಯುತ್ತಿರುವುದು ನಾಳೆ ಇತರ ಪ್ರದೇಶಗಳಲ್ಲೂ ಸಂಭವಿಸಬಹುದು. ಭಾಷಾವಾರು ರಾಜ್ಯಗಳ ರಚನೆ ವಾಸ್ತವವಾಗಿ ಆಂಧ್ರದಿಂದಲೇ ಪ್ರಾರಂಭವಾಗಿದೆ. ಆಂಧ್ರ ಪ್ರದೇಶವು ಭಾಷಾವಾರು ರಾಜ್ಯವಾದಾಗ ಕರ್ನಾಟಕ ಮತ್ತು ಮಹಾರಾಷ್ಟ್ರಗಳು ತಾವು ಅಂತಹ ಬೇಡಿಕೆಯನ್ನು ಮುಂದಿಟ್ಟವು. ಇದು ಸರಣಿ ಪ್ರತಿಕ್ರಿಯೆಗೆ ದಾರಿ ಮಾಡಿತು. ಹಾಗಾಗಿ ನಾವು ಈ ವಿಷಯದಲ್ಲಿ ಉದಾರವಾದ ದೃಷ್ಟಿಕೋನವನ್ನು ತಳೆಯಬೇಕು ಹಾಗೂ ಆಂಧ್ರ ಮತ್ತು ತೆಲಂಗಾಣಗಳು ಒಂದೇ ರಾಜ್ಯವಾಗಿರುವಂತೆ ಅವುಗಳನ್ನು ಒಪ್ಪಿಸಬೇಕು. ಅವು ಇದಕ್ಕೆ ಒಪ್ಪಿಕೊಳ್ಳದೆ ಇದ್ದರೆ ಎಲ್ಲ ಕಡೆಗಳಿಂದಲೂ ಪ್ರತ್ಯೇಕ ರಾಜ್ಯದ ಬೇಡಿಕೆ ಆರಂಭವಾಗುವುದು. ಇದರ ಬೆನ್ನ ಹಿಂದೆಯೇ ಮಹಾ ವಿದರ್ಭ ರಾಜ್ಯದ ಬೇಡಿಕೆಯೂ ಬರಬಹುದು. ಏಕೆಂದರೆ ರಾಜ್ಯ ಪುನರ್ ಸಂಘಟನಾ ಆಯೋಗವು ಮಹಾ ವಿದರ್ಭದ ಬೇಡಿಕೆಯನ್ನು ಅಂಗೀಕರಿಸಿದೆ. ಆದರೆ ಮಹಾರಾಷ್ಟ್ರದಲ್ಲಿ ದ್ವಿಭಾಷಾ ರಾಜ್ಯ ಅಸ್ತಿತ್ವಕ್ಕೆ ಬಂದಿದ್ದರಿಂದ ಅದು ತಪ್ಪಿತು. ಇದಕ್ಕೂ ಮೊದಲು ಅಂಕೋಲಾ ಒಪ್ಪಂದದ ಮೂಲಕ ಮಹಾ ವಿದರ್ಭದ ಜನತೆಗೆ ಇದೇ ತರಹದ ಆಶ್ವಾಸನೆಯನ್ನು ನೀಡಲಾಗಿತ್ತು. ಇದಾದ ನಂತರದಲ್ಲಿ ನಾಗಪುರ ಒಪ್ಪಂದಕ್ಕೆ ಹಸ್ತಾಕ್ಷರವಾಯಿತು. ಈ ಒಡಂಬಡಿಕೆಗಳನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತಂದಿದ್ದರೂ ಕೂಡಾ ಜನಸಮುದಾಯದಲ್ಲಿ ಅಸಮಾಧಾನ, ಪ್ರತಿರೋಧಗಳು ಇದ್ದವು. ಒಂದು ವೇಳೆ ಈ ಒಡಂಬಡಿಕೆಗಳನ್ನು ಅನುಷ್ಠಾನಕ್ಕೆ ತಾರದಿರುತ್ತಿದ್ದರೆ ಈ ಪ್ರತಿರೋಧ ಯಾವ ಮಟ್ಟಕ್ಕೆ ಹೋಗುತ್ತಿತ್ತು ಎಂಬುದನ್ನು ಯಾರೂ ಊಹಿಸಲಾರರು. ವಿದರ್ಭದ ಜನತೆ ನಮ್ಮೊಂದಿಗೆ ಇದ್ದರೆ ಅದು ಅವರಿಗೇ ಶ್ರೇಯಸ್ಕರ ಎಂದು ನಾನು ಅಲ್ಲಿನ ಜನತೆಗೆ ಮನವರಿಕೆ ಮಾಡಿಕೊಡಲು ಬಯಸುತ್ತೇನೆ. ಆದರೆ ನಮ್ಮೊಂದಿಗೆ ಇರಲು ಅವರ

ಇಷ್ಟಪಡುವುದಿಲ್ಲವೆಂದಾದರೆ ನಾವು ಅವರಿಗೆ ಬಲವಂತ ಮಾಡಬಾರದು. ಒಂದು ವೇಳೆ ನಮ್ಮೊಂದಿಗಿರುವಂತೆ ಬಲವಂತಪಡಿಸಿದರು ಕೂಡಾ ಯಾರೊಬ್ಬರಿಗೂ ಅದರಿಂದ ಪ್ರಯೋಜನವಾಗದು. ಹೀಗೆ ಕೊನೆಗಾಣದ ನಿಲ್ಲದ ಸರಣಿ - ಪ್ರತಿಕ್ರಿಯೆ ಆರಂಭವಾಗುವುದು. ಇಂದು ಪ್ರತ್ಯೇಕ ತೆಲಂಗಾಣದ ಬೇಡಿಕೆ ನಮ್ಮ ಮುಂದಿದೆ. ನಾಳೆ ಮಹಾ ಹರಿಯಾಣದ ಬೇಡಿಕೆ ನಮ್ಮ ಮುಂದೆ ಬರಬಹುದು. ಇದಾದ ಮೇಲೆ ಮುಂದೆ ಛತ್ತೀಸ್‌ಗಢ್ ರಾಜ್ಯದ ಬೇಡಿಕೆ ನಮ್ಮ ಮುಂದೆ ನಿಲ್ಲಬಹುದು.

ಕೊನೆಯಲ್ಲಿ ಈ ಮಸೂದೆಯನ್ನು ಅಂಗೀಕರಿಸಬೇಕೆಂದು ನಾನು ಸದನವನ್ನು ಕೇಳಿಕೊಳ್ಳುತ್ತೇನೆ. ಬರಿಯ ಮಸೂದೆಯನ್ನು ಅಂಗೀಕರಿಸಿದರವೋ ಸಾಲದು ತೆಲಂಗಾಣದ ಜನತೆಯ ಯೋಗಕ್ಷೇಮ ಮತ್ತು ಅಭ್ಯುದಯ ಸಾಧನೆಗಾಗಿ ಇನ್ನು ಹೆಚ್ಚಿನದನ್ನು ನಾವು ಮಾಡುವುದು ಅಗತ್ಯವಾಗಿದೆ. ನಮ್ಮ ಗೌರವಾನ್ವಿತ ಮಹಿಳಾ ಸದಸ್ಯೆ ಹೇಳಿರುವಂತೆ ಈ ಪ್ರಶ್ನೆಯ ಬಗ್ಗೆ ನಾವು ಗಂಭೀರವಾಗಿ ಚಿಂತನೆ ನಡೆಸಬೇಕು. ಹಿಂದುಳಿದ ಜನತೆಗೆ ಸಾಧ್ಯವಿರುವ ಎಲ್ಲ ಸವಲತ್ತುಗಳನ್ನು ಒದಗಿಸಬೇಕು. ಈ ಮಾತುಗಳೊಂದಿಗೆ ನಾನು ಈ ಮಸೂದೆಯನ್ನು ಬೆಂಬಲಿಸುತ್ತಿದ್ದೇನೆ.

## ಅಧ್ಯಾಯ 19

## ಕಾಜಿಪುರ್ ಗೋಲಿಬಾರ್ ಮತ್ತು ಪಶ್ಚಿಮ ಬಂಗಾಳ ಮುಷ್ಕರ*

ಮಾನ್ಯ ಸಭಾಧ್ಯಕ್ಷರೇ, ನನ್ನ ಬಳಿ ಇರುವ ಸಮಯ ಅತಿ ಕಡಿಮೆಯಾದರೂ ಚರ್ಚೆಗೆ ಒಳಪಟ್ಟಿರುವ ವಿಷಯದಲ್ಲಿ ಗಂಭೀರ ಚಿಂತನೆ ಅಗತ್ಯವಿರುವುದರಿಂದ ನಮ್ಮ ಅಭಿಪ್ರಾಯವನ್ನು ನೀಡುವುದಕ್ಕೆ ಮೊದಲು ಈ ಕುರಿತು ಸಮಗ್ರ ವಿಶ್ಲೇಷಣೆ ಅಗತ್ಯವಾಗಿದೆ.

ಈ ವಿಷಯವನ್ನು ಪ್ರಸ್ತಾಪಿಸುವ ಮೊದಲು ನನ್ನ ಸಹೋದರಿ ಶ್ರೀಮತಿ ಶಾರದಾ ಮುಖರ್ಜಿಯವರಿಗೆ ಈ ಬಗ್ಗೆ ತಪ್ಪು ಗ್ರಹಿಕೆ ಇದೆಯೆಂದು ನಾನು ಹೇಳಬೇಕಾಗಿದೆ. ರಕ್ಷಣಾ ವಿಭಾಗದ ಸಿವಿಲ್ ಸಿಬ್ಬಂದಿ ಮಿಲಿಟರಿ ಸಿಬ್ಬಂದಿಯ ಜೊತೆಜೊತೆಯಲ್ಲೇ ಕೆಲಸ ಮಾಡುತ್ತಿದ್ದಾರೆ. ಪ್ರಾಯಶಃ ಶ್ರೀಮತಿ ಮುಖರ್ಜಿಯವರಿಗೆ ಈ ಕಾರ್ಖಾನೆಗಳಲ್ಲಿನ ಕೆಲಸ ಕಾರ್ಯಗಳ ಬಗ್ಗೆ ಸರಿಯಾದ ಪರಿಚಯವಿಲ್ಲ. ಈ ಮೊದಲು ಯುದ್ಧೋಪಕರಣ ಕಾರ್ಖಾನೆಗಳ ಮಹಾನಿರ್ದೇಶಕರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದರೆ ಈಗ ಅವರು ಜನರಲ್ ಮ್ಯಾನೇಜರ್ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಯಾವ ಮಿಲಿಟರಿ ಸಿಬ್ಬಂದಿಯೂ ಅಲ್ಲಿ ಕೆಲಸ ಮಾಡುತ್ತಿಲ್ಲ. ರಕ್ಷಣಾ ಇಲಾಖೆಯ ಸಿವಿಲ್ ಸಿಬ್ಬಂದಿಯೊಂದಿಗೆ ನನಗೆ ನಿಕಟ ಸಂಬಂಧವಿದೆ. ಇಂತಹ ಕಡೆಗಳಲ್ಲಿ ಕೆಲಸ ಮಾಡುವ ಸಿಬ್ಬಂದಿಯನ್ನು ನಾವು ಇತರ ಕಾರ್ಮಿಕರೊಂದಿಗೆ ಹೋಲಿಸುವುದು ಸರಿಯಲ್ಲ ಎಂಬ ಅಂಶವನ್ನು ನಾವು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕೆಂದು ಶ್ರೀಮತಿ ಮುಖರ್ಜಿಯವರು ನಮಗೆ ಸಲಹೆ ಮಾಡಿದ್ದಾರೆ. ಸರಿ ನಾವು ಅದಕ್ಕೆ ತಯಾರಿದ್ದೇವೆ. ಆದರೆ ನಮ್ಮ ಹೊಣೆಗಾರಿಕೆಗಳು ಹೆಚ್ಚಾಗಿದ್ದಾಗ, ಅವು ವಿಶೇಷ ರೀತಿಯದ್ದಾಗಿರುವಾಗ ನಮ್ಮನ್ನು ಇತರ ಕಾರ್ಮಿಕರಂತೆ ಪರಿಗಣಿಸಬಾರದು. ಈಗ ಸೇವೆಯಿಂದ ವಜಾಗೊಳಿಸಲಾಗಿರುವ ತಾತ್ಕಾಲಿಕ ಸಿಬ್ಬಂದಿಯನ್ನು ಅವರು ಕಾಯ್ದೆಯ ನಾಲ್ಕನೇ ಸೆಕ್ಷನ್‌ಗೆ ಒಳಪಡುತ್ತಾರಾದರೆ ಅವರನ್ನು ಮರಳಿ ಸೇರಿಸಿಕೊಳ್ಳಲಾಗುತ್ತದೆ ಎಂದು ಮಾನ್ಯ ಸಚಿವರು ಇದೇ ಸದನದಲ್ಲಿ ಆಶ್ವಾಸನೆ ನೀಡಿದ್ದರು. ಆದರೆ ಇದುತನಕ ಹಾಗೆ ಮಾಡಿಲ್ಲ. ಕಾಜಿಪುರ್ ಕಾರ್ಖಾನೆಯಲ್ಲಿ ಕಾರ್ಮಿಕರು ತಮ್ಮ ಬೇಡಿಕೆಗಳಿಗೆ ಬೆಂಬಲವಾಗಿ ಕಳೆದ 3-4 ದಿನಗಳಲ್ಲಿ ಹಲವು ಸಭೆಗಳನ್ನು ನಡೆಸಿರುವುದನ್ನು ನಾನು ಸದನದ ಗಮನಕ್ಕೆ ತರಬಯಸುತ್ತೇನೆ. ಈ ಕಾರ್ಖಾನೆಯ ಒಳಗಡೆ ಇರುವ ಶಾಲೆಗಳಲ್ಲಿ ಮರುದಿನ ರಜೆ ಎಂದು ಹಿಂದಿನ ದಿನವೇ ಪ್ರಕಟಿಸಲಾಗಿತ್ತು ಎಂದು ನನಗೆ ಗೊತ್ತಾಗಿದೆ. ಅದು ಎಷ್ಟರಮಟ್ಟಿಗೆ ಸರಿ ಎಂಬುದು ನನಗೆ ಗೊತ್ತಿಲ್ಲ. ಅಂತೂ ಸಭೆಗಳು ಗಂಟೆತನಕವೂ ಮುಂದುವರೆಯಿತು. ಅನಂತರ ಅವರು ವಾಪಸಾದರು.

---

*ಲೋಕಸಭಾ ಚರ್ಚೆ, ಏಪ್ರಿಲ್ 14, 1969, ಸಿಸಿ 330-336

ಅನೇಕ ಮಂದಿ ಅಧಿಕಾರಿಗಳು ಕಾರ್ಖಾನೆಯ ಬಾಗಿಲನ್ನು ತೆರೆದಿಡಬೇಕೆಂದು ಸಲಹೆ ಮಾಡಿದರು. ಆದರೆ ಒಂದಲ್ಲ ಒಂದು ನೆಪ ಒಡ್ಡಿ ಕಾರ್ಮಿಕರಿಗೆ ಅಡ್ಡಿಪಡಿಸಲು ಬಯಸಿದ್ದ ಒಂದು ವರ್ಗ ಕಾರ್ಖಾನೆಯ ಬಾಗಿಲನ್ನು ಮುಚ್ಚಬೇಕೆಂದು ಆಗ್ರಹಪಡಿಸಿತು. ಕಾರ್ಮಿಕರೆಲ್ಲರೂ ಅಲ್ಲಿ ಒಟ್ಟಾದಾಗ ಭಾರೀ ಕೋಲಾಹಲವೇ ನಡೆದು ಹೋಯಿತು. ಗೋಳಿಬಾರ್ ಸಹ ನಡೆಯಿತು. ಈ ಎಲ್ಲ ಅವಾಂತರಗಳಿಗೆ ಕಾರಣವಾಯಿತು. ಸರ್ಕಾರ ಈ ಸಂಬಂಧದಲ್ಲಿ ಆಶ್ವಾಸನೆಗಳನ್ನೇನಾದರೂ ಕೊಟ್ಟಿದ್ದರೆ ಮತ್ತು ಈ ಆಶ್ವಾಸನೆಗಳನ್ನು ಈಡೇರಿಸಲು ಅದಕ್ಕೆ ಸಾಧ್ಯವಾಗಿರದಿದ್ದರೆ ಕಾರ್ಮಿಕರನ್ನು ಈ ರೀತಿ ನಡೆಸಿಕೊಳ್ಳುವುದು ಸರಿಯಲ್ಲ ಎಂಬ ಅಂಶವನ್ನು ನಾನಿಲ್ಲಿ ಒತ್ತಿ ಹೇಳಲು ಬಯಸುತ್ತೇನೆ. ಒಂದೆರಡು ನಿಮಿಷಗಳಷ್ಟು ತಡವಾಗಿದ್ದರೆ ಆದರರ್ಥ ಕಾರ್ಖಾನೆಯು ಗೇಟನ್ನು ಮುಚ್ಚಬೇಕೆಂಬುದಾಗಿರಲಿಲ್ಲ. ಅದಲ್ಲದೆ ಜನರನ್ನು ನಿಲ್ಲಿಸಲು ಅಲ್ಲಿ ಇನ್ನೊಂದು ಜಾಗ ಕೂಡಾ ಇತ್ತು. ಆ ಜಾಗದ ನಂತರದಲ್ಲೇ ಕಾರ್ಖಾನೆಯ ಗೇಟು ಇರುವುದು. ಆ ದಿನ ಮಾತ್ರ ಅಲ್ಲಿನ ಎಲ್ಲ ಅಡೆತಡೆಗಳನ್ನು ತೆಗೆದು ಹಾಕಲಾಗಿತ್ತು. ಹಾಗಾಗಿಯೇ ಈ ಘಟನೆ ಸಂಭವಿಸಿತು. ಈ ಘಟನೆಯನ್ನು ಕುರಿತಂತೆ ವಿಚಾರಣೆ ನಡೆಸಲಾಗುವುದೆಂದು ಅದೇ ದಿನ ನಮ್ಮ ರಕ್ಷಣಾ ಸಚಿವರು ಹೇಳಿದರು. ಅದು ಸರಿ. ಆದರೆ ಇಲ್ಲದ ಆತುರ ತೋರಿಸಿ ಈ ವಿಚಾರಣಾ ಆಯೋಗದ ನ್ಯಾಯಾಧೀಶರ ನೇಮಕವನ್ನು ಪ್ರಾರಂಭಿಸಲಾಯಿತು ಎಂದು ನಾನು ಹೇಳಬಯಸುತ್ತೇನೆ. ಮಾನ್ಯ ಸಚಿವರು ಈ ಪ್ರಕರಣದಲ್ಲಿ ತನಿಖೆಯನ್ನು ಘೋಷಿಸಿದೊಂದೇ ಇಲ್ಲಿನ ಒಳ್ಳೆಯ ಅಂಶ. ಏಕೆಂದರೆ ಇಂತಹ ಬೇಡಿಕೆಗಳನ್ನು ಸಚಿವರು ಒಪ್ಪಿಕೊಳ್ಳುವುದೇ ಅಪರೂಪ. ಈ ಘಟನೆ ನಡೆದ ದಿನ ನಾನು ಅಲ್ಲಿ ಹಾಜರಿರಲಿಲ್ಲ. ಅನೇಕ ಮಂದಿ ಈ ಸಂಬಂಧದಲ್ಲಿ ತನಿಖಾ ಆಯೋಗ ನೇಮಕವಾಗುವಂತೆ ಪ್ರಯತ್ನಿಸುತ್ತೀರಾ? ಎಂದು ಕೇಳಿದ್ದರು. ಆದಕ್ಕೆ ನೀವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದೀರಿ. ಅದೆಲ್ಲ ಒಳ್ಳೆಯದೆ. ಆದರೆ ಈ ಸಂಬಂಧದಲ್ಲಿ ಒಂದು ನಿರ್ಧಾರವನ್ನು ತೆಗೆದುಕೊಳ್ಳುವಾಗ ತನ್ನೊಡನೆ ಸಮಾಲೋಚನೆ ನಡೆಸುವುದು ಆಕ್ಷೇಪಣೀಯವಾಗಿರಲಿಲ್ಲವೇ ಎಂದು ಪಶ್ಚಿಮ ಬಂಗಾಳ ಸರ್ಕಾರ ಕೇಳಿತು. ಹಾಗಿದ್ದರೆ ಪಶ್ಚಿಮ ಬಂಗಾಳ ಸರ್ಕಾರದೊಂದಿಗೆ ನೀವು ಈ ವಿಷಯದಲ್ಲಿ ಸಮಾಲೋಚನೆ ನಡೆಸಲಿಲ್ಲವೇಕೆ? ಎಲ್ಲ ರಾಜ್ಯ ಸರ್ಕಾರಗಳನ್ನು ಸರಿಸಮಾನಾಗಿ ಪರಿಗಣಿಸಬೇಕು. ನೀವು ಒಂದೊಂದು ಕಡೆ ಒಂದೊಂದು ಮಾನದಂಡ ಬಳಸುತ್ತಿದ್ದೀರಿ. ಕಮ್ಯೂನಿಸ್ಟ್ ಸರ್ಕಾರವಿರುವ ಪಶ್ಚಿಮ ಬಂಗಾಳದಲ್ಲಿ ಒಂದು ರೀತಿ, ಆಂಧ್ರ ಸರ್ಕಾರದೊಡನೆ ವ್ಯವಹರಿಸುವಾಗ ಇನ್ನೊಂದು ರೀತಿ, ತಮಿಳುನಾಡಿನ ಡಿಎಂಕೆ ಸರ್ಕಾರದೊಡನೆ ಮತ್ತೊಂದು ರೀತಿ, ಮಹಾರಾಷ್ಟ್ರ ಸರ್ಕಾರದೊಡನೆ ವ್ಯವಹರಿಸುವಾಗ ಇನ್ನೊಂದು ರೀತಿ ಇದು ಸರಿಯಲ್ಲ. ಇಂತಹ ದ್ವಂದ್ವ ನೀತಿಯನ್ನು ಅನುಸರಿಸುವುದಕ್ಕೆ ಬದಲು ಏಕರೂಪ ಧೋರಣೆಯನ್ನು ಅನುಸರಿಸುವುದು ಒಳಿತು.

ಎಲ್ಲ ಕಾಲಕ್ಕೂ ದೇಶದ ಸ್ವಾತಂತ್ರ್ಯವನ್ನು ರಕ್ಷಿಸಬೇಕು ಮತ್ತು ರಾಷ್ಟ್ರದ ಪ್ರಗತಿ ಸಾಧನೆಯಾಗಬೇಕು ಎಂಬುದು ನಮ್ಮೆಲ್ಲರ ಬಯಕೆಯಾಗಿದೆ. ದೇಶದಲ್ಲಿ ಜನತಂತ್ರದ ವ್ಯವಸ್ಥೆ ಸಮರ್ಪಕವಾಗಿ ಕಾರ್ಯ ನಿರ್ವಹಿಸಬೇಕು. ಆದರೆ ನಮ್ಮಲ್ಲಿ ಈ ವ್ಯವಸ್ಥೆ ಯಾವ ರೀತಿ ಕಾರ್ಯ ನಿರ್ವಹಿಸುತ್ತಿದೆ? ಇದಕ್ಕೊಂದು ಸಂವಿಧಾನವಿದೆ. ಹಲವಾರು ಬಾರಿ ಇದಕ್ಕೆ ತಿದ್ದುಪಡಿಗಳನ್ನು ತರಲಾಗಿದೆ. ಈಗ ಸಮಯ ಸನ್ನಿವೇಶಗಳು ಸಂಪೂರ್ಣವಾಗಿ ಬದಲಾಗಿವೆ. ಹೀಗಾಗಿ ಬದಲಾದ ಸನ್ನಿವೇಶಕ್ಕೆ ಸರಿಯಾಗಿ ನಾವು ಹೊಂದಾಣಿಕೆ ಮಾಡಿಕೊಳ್ಳಬೇಕಾಗಿದೆ. ಅಂತಹ ಹೊಂದಾಣಿಕೆಗಳಿಗೆ ವಾಸ್ತವವಾಗಿ ಯಾರು ಆಕ್ಷೇಪ ಎತ್ತಬಾರದು.

ಪ್ರೊ. ಎನ್.ಜಿ. ರಂಗಾ ಅವರು ಸರ್ಕಾರವನ್ನು ತಕ್ಷಣದಲ್ಲೇ ವಜಾಗೊಳಿಸಬೇಕೆಂದು ಕೇಳಿದ್ದರು. ಅವರ ದೃಷ್ಟಿಯಲ್ಲಿ ಅದೊಂದೇ ಈ ಸಮಸ್ಯೆಗೆ ಇರುವ ಪರಿಹಾರವಾಗಿದೆ. ಒಂದು ಸೂಕ್ತ ಪರಿಹಾರದ ಬಗ್ಗೆ ನಾನು ಬಹಳ ಹಿಂದಿನಿಂದಲೂ ಕೇಳುತ್ತಾ ಬಂದಿದ್ದೇನೆ. ನಮಗೆ ಇದನ್ನು ಬಿಟ್ಟರೆ ಬೇರೊಂದು ಮಾರ್ಗ ಇಲ್ಲ ಎನ್ನುವ ರೀತಿಯಲ್ಲಿ ಪ್ರತಿಯೊಬ್ಬರೂ ಇದೊಂದು ಸಲಹೆಯನ್ನೇ ಸೂಚಿಸುತ್ತಿದ್ದಾರೆ. ನಾಗಾಲ್ಯಾಂಡ್‌ನಲ್ಲಿ ಪ್ರಕ್ಷುಬ್ಧ ಸ್ಥಿತಿ ನಿರ್ಮಾಣಗೊಂಡಾಗ ಅಲ್ಲಿಗೆ ಸೇನೆಯನ್ನು ಕಳುಹಿಸಬೇಕೆಂದು ಸಲಹೆ ಮಾಡಲಾಯಿತು. ಅಸ್ಸಾಂನಲ್ಲಿ ಗಲಭೆ ಎದ್ದಾಗ ರಾಷ್ಟ್ರೀಯ ಸಮಗ್ರತೆಯ ಹೆಸರಿನಲ್ಲಿ ಅತ್ಯಂತ ಕಟ್ಟುನಿಟ್ಟಿನ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಸಲಹೆ ನೀಡಲಾಯಿತು. ಇಂತಹ ಕಠಿಣ ಕ್ರಮ ಕಾರ್ಯಾಚರಣೆಗಳ ಬಗ್ಗೆ ಮಾತನಾಡುವುದು ಬಹಳ ಸುಲಭ. ಆದರೆ ಇಂತಹ ಹೆಜ್ಜೆಗಳು ಜನತಂತ್ರದ ಸೂತ್ರಗಳಿಗೆ ವಿರುದ್ಧವಾಗುತ್ತವೆಯೋ ಹೇಗೆ? ಎಂಬುದನ್ನು ಯೋಚಿಸಬೇಕು.

ಕಾರ್ಮಿಕ ಸಂಘಟನೆಗಳ ವಿಷಯದಲ್ಲಿ ಹೇಳುವುದಾದರೆ ಬಹುಮತ ಇರುವ ಕಾರ್ಮಿಕ ಸಂಘಕ್ಕೆ ಮಾನ್ಯತೆ ನೀಡಬೇಕು ಮತ್ತು ಈ ಸಂಬಂಧದಲ್ಲಿ ಕಾಯ್ದೆಯೊಂದನ್ನು ಜಾರಿಗೆ ತರಬೇಕೆಂಬುದು ನಮ್ಮ ದೃಢ ನಿಲುವಾಗಿದೆ. ನಮ್ಮ ಪಕ್ಷದ ಮುಖಂಡರಾದ ರಾಜ್ಯಸಭಾ ಸದಸ್ಯ ಶ್ರೀ ರಾಜನಾರಾಯಣ್ ಅವರು ಪ್ರತಿಸ್ಪರ್ಧಿ ಕಾರ್ಮಿಕ ಸಂಘಟನೆಗಳ ಮಧ್ಯ ಘರ್ಷಣೆ ನಡೆದ ಅಸನ್ ಸೋಲ್‌ಗೆ ಹೋಗಿದ್ದಾರೆ. ಈ ವಿಷಯವನ್ನು ನಾನು ಬೆಳಿಗ್ಗೆಯೇ ಪ್ರಸ್ತಾಪಿಸಬೇಕೆಂದು ಕೊಂಡಿದ್ದೆ. ಅವರು ಪ್ರತಿಸ್ಪರ್ಧಿ ಕಾರ್ಮಿಕ ಸಂಘಟನೆಗಳೊಂದಿಗೆ ಸಂಬಂಧ ಇಟ್ಟುಕೊಂಡವರೆಂಬ ಕಾರಣಕ್ಕೆ ಅವರ ಮೇಲೆ ಈಟಿ, ಭರ್ಜಿ, ಕಠಾರಿಗಳಿಂದ ಹಲ್ಲೆ ನಡೆಸಿದರು. ಬಹುಸಂಖ್ಯಾತ ಕಾರ್ಮಿಕರ ಬೆಂಬಲ ಹೊಂದಿರುವ ಕಾರ್ಮಿಕ ಸಂಘಟನೆಗೆ ಮಾನ್ಯತೆ ನೀಡಬೇಕು. ಆದರೆ ಇತರ ಕಾರ್ಮಿಕ ಸಂಘಟನೆಗಳಿಗೆ ಸೇರಿದ ಜನರ ಮೇಲೆ ಯಾವುದೇ ರೀತಿಯ ದಾಳಿ ನಡೆಸುವುದು

ನ್ಯಾಯ ಸಮ್ಮತ್ರವಲ್ಲ. ಶ್ರೀ ಚವಾಣ್ ಮತ್ತು ನಾನು ಪರಸ್ಪರರನ್ನು ಚೆನ್ನಾಗಿ ಅರಿತು ಕೊಂಡವರು. ಹಾಗಾಗಿ ಈ ವಿಷಯದಲ್ಲಿ ಯಾವುದೇ ಕಾರಣಕ್ಕೂ ಅವಸರದಿಂದ ಕಾರ್ಯ ನಿರ್ವಹಿಸಬಾರದು ಎಂಬ ಅಂಶವನ್ನು ಈ ಸಂದರ್ಭದಲ್ಲಿ ಒತ್ತಿ ಹೇಳಲು ಬಯಸುತ್ತೇನೆ. ಅಲ್ಲಿ ಕಮ್ಯುನಿಸ್ಟ್ ಸರ್ಕಾರವಿದೆ. ನಾವು ದ್ವಂದ್ವ ನೀತಿಯನ್ನು ಅನುಸರಿಸಿದರೆ ಅದು ನಮ್ಮನ್ನು ರಕ್ಷಿಸಲಾರದು.

ಈ ಸಂದರ್ಭದಲ್ಲಿ ಇನ್ನೂ ಒಂದು ಸಂಗತಿಯನ್ನು ನಾನು ಹೇಳಬಯಸುತ್ತೇನೆ. ಸ್ಟಾಲಿನ್ ಅವರ ಸಾವಿನ ಸಂದರ್ಭದಲ್ಲಿ ನಾನು ಮುಂಬಯಿ ವಿಧಾನಸಭೆಯ ಓರ್ವ ಸದಸ್ಯನಾಗಿದ್ದೆ. ಶ್ರೀ ಮುರಾರ್ಜಿ ದೇಸಾಯಿಯವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ನಾನು ಮುರರ್ಜಿ ದೇಸಾಯಿಯವರ ಬಳಿಗೆ ಹೋದೆ. ಓರ್ವ ಮಹಾನ್ ಕಮ್ಯುನಿಸ್ಟ್ ನೇತಾರ ನಿಧನ ಹೊಂದಿದ್ದಾರೆ. ಹಾಗಾಗಿ ನಾವು ಸಂತಾಪ ಸೂಚಿಸಬೇಕೆಂದು ಅವರಲ್ಲಿ ಕೇಳಿಕೊಂಡೆ. ನಾನು ಹಾಗೆ ಹೇಳಿದಾಗ ಮಹಾತ್ಮಾ ಗಾಂಧೀಜಿಯವರು ನಿಧನ ಹೊಂದಿದಾಗ ಅವರು ಏನು ಮಾಡಿದ್ದರು? ಎಂದು ಅವರು ಮರು ಪ್ರಶ್ನೆ ಹಾಕಿದರು. ನಾವು ಅಂತಹ ಮನೋವೃತ್ತಿಯನ್ನು ಹೊಂದಿದರೆ ನಮ್ಮಿಬ್ಬರ ಮಧ್ಯೆ ತಾರತಮ್ಯ ಎಲ್ಲಿ ಉಳಿಯಿತು ಎಂದು ನಾನು ಅವರನ್ನು ಕೇಳಿದೆ. ನಾವು ಗಾಂಧೀವಾದದಲ್ಲಿ ನಂಬಿಕೆ ಇರಿಸಿದವರು ಹಾಗಾಗಿ ನಾವು ಈ ರೀತಿ ಯೋಚಿಸಬಾರದು. ಕಮ್ಯುನಿಸ್ಟರು ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಿಸಿಲ್ಲವಾದರೂ ಜನರು ಅವರನ್ನು ಅಧಿಕಾರಕ್ಕೆ ತಂದಿದ್ದಾರೆ ಎಂಬ ಅಂಶವನ್ನು ನೆನಪಿಟ್ಟುಕೊಳ್ಳಬೇಕು. ಹಾಗಾಗಿ ಜನರ ಆದೇಶಕ್ಕೆ ನಾವು ಗೌರವ ಸೂಚಿಸಲೇ ಬೇಕು ಜನತಂತ್ರವನ್ನು ನಾವು ರಕ್ಷಿಸಬೇಕೆಂದಾದರೆ ನಾವು ಈ ರೀತಿ ಯೋಚಿಸಬೇಕು. ನಾವು ಇಡುವ ಹೆಜ್ಜೆ ಯಾವುದೇ ಕಾರಣದಿಂದ ಉದ್ವಿಗ್ನ ವಾತಾವರಣವನ್ನು ಸೃಷ್ಟಿಸಬಾರದು. ಈ ಎಚ್ಚರಿಕೆ ನಮ್ಮಲ್ಲಿರಬೇಕು. ಒಂದು ವೇಳೆ ನಾವಿಟ್ಟಿರುವ ಯಾವುದೇ ಹೆಜ್ಜೆ ಪ್ರಕ್ಷುಬ್ಧತೆ ಹೆಚ್ಚಲು ದಾರಿ ಮಾಡಿಕೊಡುತ್ತದೆ ಎಂದು ನಮಗೆ ಕಂಡು ಬಂದಲ್ಲಿ ಅದನ್ನು ತಗ್ಗಿಸುವ ಮಾರ್ಗಗಳನ್ನು ನಾವು ಕಂಡುಕೊಳ್ಳುವುದು ಅತ್ಯವಶ್ಯ. ಇಂತಹ ವಿವೇಚನೆ ಇಲ್ಲದೆ ಇರಿಸಿದ ಹೆಜ್ಜೆಗಳು ನಿಶ್ಚಿತವಾಗಿಯೂ ಪರಿಸ್ಥಿತಿಯನ್ನು ಇನ್ನಷ್ಟು ಸಂಘರ್ಷಕ್ಕೆ ಒಯ್ಯುವುದು. ಕಮ್ಯುನಿಸ್ಟರು ಪ್ರಕ್ಷುಬ್ಧ ವಾತಾವರಣ ಸೃಷ್ಟಿಸುವಲ್ಲಿ ಆಸಕ್ತರಾಗಿರಬಹುದು. ಆದರೆ ನಾವು ಅದನ್ನು ಇನ್ನಷ್ಟು ಹೆಚ್ಚಿಸಲು ಬಯಸುತ್ತಿದ್ದೇವೆಯೇ ಎಂಬುದು ಮುಖ್ಯ ಪ್ರಶ್ನೆಯಾಗಿದೆ. ಅದಲ್ಲವಾದರೆ ನಾವೆಲ್ಲರೂ ಒಟ್ಟಾಗಿ ಕುಳಿತು ಒಂದು ನ್ಯಾಯಸಮ್ಮತ ನಿರ್ಧಾರವನ್ನು ತೆಗೆದುಕೊಳ್ಳುವುದೇ ಸೂಕ್ತ ಎಂದು ನಾನು ನಿಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ.

---

ಮುದ್ರಕರು: ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳು, ಸಶಾಮು. ತುಮಕೂರು, ಕಾಸೂ. 69 - 1,500 ಪ್ರತಿಗಳು ದಿ: 26-12-2001

# ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿ

## (2001-2002)

ಶ್ರೀಯುತರುಗಳಾದ:

| | | |
|---|---|---|
| 1. | ಬಿ.ಬಿ.ಶಿವಪ್ಪ<br>ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2. | ಗುತ್ತೇದಾರ್ ಸುಭಾಷ್ ರುಕ್ಮಯ್ಯ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 3. | ಬೆಲ್ಲದ್ ಚಂದ್ರಕಾಂತ ಗುರಪ್ಪ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 4. | ಕೆ.ಎನ್. ಸುಬ್ಬಾರೆಡ್ಡಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 5. | ಉಮೇಶ್ ವಿ.ಕತ್ತಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. | ಡಾ: ಎಲ್.ಹನುಮಂತಯ್ಯ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 7. | ಕೆ.ನಿರಂಜನ ನಾಯ್ಕ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 8. | ಶ್ರೀಮತಿ ನಿರ್ಮಲ ವೆಂಕಟೇಶ್<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |